








# ತಲೆಗೆ ತಾಗಿತೋ ತಲೆ
# ಹೇನುಗಳಿಗೆ ದೊರೆಯಿತು ಹೊಸನೆಲೆ !

**ಲಾಯಿಸಿಲ್ ಆಲ್ಕೊಹಾಲ್ ರಹಿತವಾಗಿದೆ.**
ಇತರ ಹೇನಿನ ಔಷಧಿಗಳಂತೆ ಲಾಯಿಸಿಲ್ ಆವಿಯಾಗುವುದಿಲ್ಲ
ಇದು ನಿಮ್ಮ ನೆತ್ತಿ ಮತ್ತು ಕೂದಲಿನಿಂದ ತೇವ ಮತ್ತು
ಅತ್ಯಾವಶ್ಯಕವಾದ ಪೋಷಕ ಎಣ್ಣೆಗಳಗಳನ್ನು ತೆಗೆಯುವುದಿಲ್ಲ.
ತಲೆಗೂದಲನ್ನು ಒಣಕಲಾಗಿ ಅಥವಾ ಬಿರುಸಾಗಿ ಮಾಡಿ
ತಲೆಹೊಟ್ಟು ಉಂಟುಮಾಡುವುದಿಲ್ಲ.

**ಲಾಯಿಸಿಲ್ ಆಯುರ್ವೇದಿಕವಾಗಿದೆ**
**ಮತ್ತು ಎಣ್ಣೆಯಿಂದ ತಯಾರಿಸಲ್ಪಟ್ಟಿದೆ**
ಮೋಹಕವಾದ ಸುಗಂಧವಿರುವ ಲಾಯಿಸಿಲ್ ಆಯುರ್ವೇದಿಕ
ಎಣ್ಣೆಯ ಮೇಲೆ ಆಧಾರಿತವಾಗಿದೆ ಅದು ಹೇನು ಮತ್ತು
ಸೀರುಗಳನ್ನು ಕೊಲ್ಲುವುದು ಮಾತ್ರವಲ್ಲದೆ ನೆತ್ತಿಯ ಕೂದಲಿನ
ಪೋಷಣೆ ಮಾಡುತ್ತದೆ ಮತ್ತು ತಲೆಹೊಟ್ಟು
ಉಂಟಾಗದಂತೆ ತಡೆಯುತ್ತದೆ.

**ಹೆಚ್ಚೆಚ್ಚು ಡಾಕ್ಟರರು ಲಾಯಿಸಿಲ್ ಉಪಯೋಗಿಸಲು**
**ಸಲಹೆ ನೀಡುತ್ತಾರೆ.**

ಪರಿಣಾಮಕಾರಿಯಾದ, ಅಲ್ಕೊಹಾಲ್
ರಹಿತ ಆಯುರ್ವೇದಿಕ ಎಣ್ಣೆಯಿಂದ
ತಯಾರಿಸಲ್ಪಟ್ಟದ ಹೇನು-ನಾಶಕ




**ಶೀಘ್ರ**
**ಸುರಕ್ಷಿತ ಮತ್ತು ನಿಶ್ಚಿತ**



**ಸುಜಾನಿಲ್ ಕೆಮೊ ಇಂಡಸ್ಟ್ರೀಸ್**
ಗಣೇಶ್ ನಗರ್, ಚಿಂಚವಾಡ್, ಪುಣೆ-411 033

*ಸುಜಾನಿಲ್ಸ್*
## ಲಾಯಿಸಿಲ್
**ಹೇನು ನಾಶಕ ಸುಗಂಧದ ಎಣ್ಣೆ**

# ದೀಪಾವಳಿ ಶುಭಾಶಯಗಳು

## ಮಾತೆಯ ಮಮತೆಯ ಪ್ರತೀಕ

# ವಿಜಯಾಸ್ಪ್ರೇ




ಆಂಧ್ರ ಡೈರಿ
ಪ್ರಗತಿಯ ಮೇರೆಗಳನ್ನು ಮೀರುತ್ತಿದೆ



5 ವರ್ಷಗಳ ಅದ್ಭುತ ಸೇವೆ

ಆಂಧ್ರಪ್ರದೇಶ್ ಡೈರಿ ಡೆವಲಪ್‌ಮೆಂಟ್
ಕಾರ್ಪೊರೇಶನ್ ಲಿಮಿಟೆಡ್ ಹೈದರಾಬಾದ್

# ಕಸ್ತೂರಿ

ಕನ್ನಡ ಡೈಜೆಸ್ಟ್




ವ್ಯವಸ್ಥಾಪಕ ಸಂಪಾದಕ :

ಎಚ್. ಆರ್. ಬಸವರಾಜ್

ಕಲೆ:

ಕೆ. ಬಿ. ಕುಲಕರ್ಣಿ

ಮುಖಪುಟ :

ನಗುವ ಹೂವು

ಚಿತ್ರ :

ಶ್ರೀ ಎ. ಜಿ. ದೇಶಪಾಂಡೆ

ಚಂದಾದರ :

ಅರ್ಧವರ್ಷ ಅಂಚೆ ಸೇರಿ ರೂ. ೧೦-೦೦

೧ ವರ್ಷ , ರೂ. ೧೫-೦೦

(ವಿಶೇಷ ಸಂಚಿಕೆ ಸೇರಿ)

KASTURI November 1980


## ಬೆಳಕಿಂಡಿ

ಪಾರಿವಾಳ ಕಾಗೆಯ ಸ್ನೇಹ ಬೆಳೆಸಿದರೆ ಅದರ ಪುಚ್ಛಗಳಷ್ಟೇ ಬೆಳ್ಳಗುಳಿಯುತ್ತವೆ; ಹೃದಯ ಕಪ್ಪಾಗುತ್ತದೆ.

— ಜರ್ಮನ್ ಗಾದೆ

*

ಮಗುವನ್ನು ನಾನು ಚೆಂದ ಇದ್ದಾನೆಂದು ಪ್ರೀತಿಸುವುದಿಲ್ಲ, ಆತನಲ್ಲಿ ಪ್ರೀತಿಯುಕ್ಕಿಸುವ ವರ್ತನೆಯಿರುವುದರಿಂದ.

— ರವೀಂದ್ರನಾಥ ಠಾಕೂರ

*

ವಿಷದ ಹಲ್ಲಿಗಿಂತಲೂ ಬಲವಾದ ಗಾಯಮಾಡಿ ಸಾಯಿಸುತ್ತಾನೆ ಕೃತಘ್ನ ಮಗ.

— ಶೇಕ್ಸ್‌ಪಿಯರ

*

ಆತ ಯಾವ ದಾರಿಯಲ್ಲಿ ಹೋಗಬೇಕೋ ಆ ದಾರಿಯನ್ನು ಸರಿಯಾಗಿ ಸೂಚಿಸಿ. ಆತ ಮುದುಕನಾದರೂ ಆ ದಾರಿ ಬಿಡುವುದಿಲ್ಲ. ಬದಲಾಗಿ ತನ್ನ ಮುಂದಿನವರಿಗೆ ಮತ್ತೆ ಅದನ್ನೇ ಸೂಚಿಸುತ್ತಾನೆ. —'ಹಳೆ ಒಡಂಬಡಿಕೆ'ಯಿಂದ

ಮೇಲಿನವರೊಂದಿಗೆ ವ್ಯವಹರಿಸುವಾಗ ಬೆಂಕಿಯನ್ನು ಜ್ಞಾಪಿಸಿಕೊಳ್ಳಿ: ತೀರ ಹತ್ತಿರ ಹೋದರೆ ಸುಡುವ ಭಯ; ತೀರ ದೂರವೂ ಅಲ್ಲ, ಚಳಿಯ ಹೆದರಿಕೆ.

— ಡೈಜಿನಸ್

✡

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಛೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪ್ರತವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

# ಸಹಚಿಂತನ

## ಗ್ರಹಪೀಡೆ

'ಅಶ್ವತ್ಥ' ಅವರ ಇತ್ತೀಚಿನ ಕತೆ 'ಗ್ರಹಪೀಡೆ' (ಕಸ್ತೂರಿ ಅಕ್ಟೋಬರ್ ೧೯೮೦) ನನ್ನ ಇತ್ತೀಚಿನ ಅತ್ಯುತ್ತಮ ಕತೆಗಳಲ್ಲಿ ಒಂದಾಗಿದೆ.

ಜ್ಯೋತಿಷ್ಯದಂತಹ ಅವೈಜ್ಞಾನಿಕ ಶಾಸ್ತ್ರಾಧಾರಿತ 'ಗ್ರಹ ಕಲ್ಪನೆ' ಮತ್ತು ತತ್ಸಂಬಂಧಿತ ಅಂಧ ಶ್ರದ್ಧಾ ಚಾರಗಳ ಮೂಲ ಬೇರಿಗೆ, ವಿಜ್ಞಾನಾಧಾರಿತ ಕಠೋರ ಸತ್ಯದ ಕೊಡಲಿ ಪೆಟ್ಟು ಬಿದ್ದಾಗ ತತ್ತರಿಸಿ ಉರುಳಿ ಬೀಳುವ 'ನವಗ್ರಹಶಾಂತಿ' ಮಂತ್ರ ಪಠಣದ ತಾತನ ಪಾತ್ರ ತುಂಬ ಯಶಸ್ವಿಯಾಗಿ ಚಿತ್ರಿತವಾಗಿದೆ. ಸಾಮಾನ್ಯವಾಗಿ ಹಳೆಯ ಹಾಗೂ ಹೊಸ ಮೌಲ್ಯಗಳ ನಡುವಣ ಘರ್ಷಣೆಯ ಸಂದರ್ಭಗಳಲ್ಲಿ ಸಹಜವಾಗೇ ಉದ್ಭವಿಸಬಹುದಾದ ಉದ್ರೇಕ ಅತಿರೇಕಗಳಿಗೆ ಎಡೆಯಿಲ್ಲದ ಹಾಗೆ ಲೇಖಕರು ತಾವು ಆರಿಸಿಕೊಂಡ ವಸ್ತುವನ್ನು ತುಂಬ ನಿರ್ಲಿಪ್ತವಾಗಿ ನಿರ್ವಹಿಸಿದ್ದಾರೆ.

ಭದ್ರಾವತಿ —ಬಿ.ಆರ್.

## ಓಡಿ ಹೋದವಳು

'ಓಡಿ ಹೋದವಳು' ಕಥಾವಸ್ತು ಅಸಾಮಾನ್ಯವಲ್ಲದಿದ್ದರೂ, ಸುಂದರವಾಗಿ ಸ್ಪಷ್ಟವಾಗಿ, ಮನದಾಳದಲ್ಲಿ ನೆಲೆ ನಿಲ್ಲುವಂತೆ ನಿರೂಪಿಸಿದ್ದಾರೆ ಲೇಖಕರು.

'ಸಾಲ' ಹೊಸ ಮಾದರಿಯ, ವಿನೂತನ ಶೈಲಿಯ ಸುಂದರ ಕಥೆ. ಚಿಕ್ಕದಾದರೂ, ಚೊಕ್ಕಟವಾಗಿ ಹೆಣೆದಿದ್ದಾರೆ, ಈ ಕಥೆಯನ್ನು ರಾಘವೇಂದ್ರ ಕುಲಕರ್ಣಿಯವರು.

ಮುಂಬಯಿ —ರಮೇಶ ಪರ್ವತೀಕರ

ನನ್ನ ಮೆಚ್ಚಿನ 'ಪುಸ್ತಕ ವಿಭಾಗ'ವನ್ನು ತಪ್ಪದೇ ಓದಿ ಆನಂದಿಸುವವಳು ನಾನು. ಹೆಚ್ಚಾಗಿ ಅತ್ಯುತ್ತಮವಾದ ಸಂಗ್ರಹಾರ್ಹ ಕೃತಿಗಳನ್ನೊಳಗೊಂಡಿರುತ್ತಿದ್ದ ಪುಸ್ತಕ ವಿಭಾಗಕ್ಕೆ ಅಪವಾದವಾಗಿದ್ದುದು ಅಕ್ಟೋಬರ್ ತಿಂಗಳ 'ಓಡಿ ಹೋದವಳು'. ತೀರ ಹಳೆಯ ವಸ್ತುವನ್ನು ಸಾಮಾನ್ಯ ಶೈಲಿಯಲ್ಲಿ ಹೇಳಿರುವ ಬಾಲುರವರು ಸಿನಿಮೀಯ ಅಂತ್ಯವನ್ನೂ ಓದುಗರಿಗೆ ನೀಡಿ ನಿರಾಸೆಗೊಳಿಸಿದ್ದಾರೆ.

ಹರಪನಹಳ್ಳಿ —ಕೆ. ಲಲಿತಾ ಹೆಬ್ಬಾರ

ಅಕ್ಟೋಬರ್ ೮೦ರ 'ಕಸ್ತೂರಿ' ಸಂಚಿಕೆಯಲ್ಲಿ ಡಿ.ಆರ್. ಬಾಲು ಅವರ 'ಓಡಿ ಹೋದವಳು' ಓದುತ್ತ ಹೋದಂತೆ ಕಣ್ಣೀರು ಹರಿಯತೊಡಗಿದವು. ಮುಗ್ಧ ಹೆಣ್ಣಿನ ಮನಸ್ಸು ಕೆಡಿಸಿ, ಅವಳ ಜೀವನವನ್ನೆ ತುಂಡು ಮಾಡಿದ ಸನ್ನಿವೇಶ ಆವೇಶ ಬರಿಸುವಂತಿತ್ತು. ಕೊನೆಗೆ ಕಿಟ್ಟಣ್ಣ ಅವಳ ಬಾಳನ್ನು ಬೆಳಗಿಸಿದಾಗ ಓದುಗರ ಎದೆಯು ಬಡಿತ ಒಂದು ಸ್ಥಿತಿಗೆ ಬರುತ್ತದೆ.

ಎಲ್ಲ ಪಾತ್ರಗಳಿಗೂ ಜೀವ ತುಂಬುವಲ್ಲಿ ಶ್ರೀಯುತರು ಯಶಸ್ವಿಯಾಗಿದ್ದಾರೆ.'

ತಿರ್ಲಾಪುರ —ನಾಗರಾಜ ಗೋಕರ್ಣಕರ

ಈ ಸಲ ಪ್ರಕಟವಾದ ನೀಳ್ಗತೆ (ಪುಸ್ತಕ ವಿಭಾಗ) ವಸ್ತುವಿನಿಂದ ನಾವೀನ್ಯವಿಲ್ಲದ ಕಥಾ ಚೌಕಟ್ಟು. ಕತೆಗೆ ವಸ್ತು ಪ್ರಧಾನವಲ್ಲದಿದ್ದರೂ ಜೀವಂತ ಕತೆಗೆ ಮೂಳೆಯಂತೆ ಆಧಾರವಸ್ತು. ಕ್ರೂರನೂ ಅಲ್ಲದ ಧೂರ್ತನೂ ಅಲ್ಲದ ನಟರಾಜ ಸಭ್ಯ ಮೋಸಗಾರ. ತನ್ನ ಸರ್ವಸ್ವವೂ ಏಕಮಾತ್ರ ರಕ್ತಸಂಬಂಧಿಯೂ ಆದ ತಂದೆಯನ್ನು ತೊರೆದು ನಟರಾಜನ ಬೆನ್ನು ಹತ್ತಿದ ರತ್ನಿ ಲೇಖಕರು ಓದುಗರಿಗೆ ರಾಕೆಟ್ ಪ್ರಯಾಣ ಮಾಡಿಸುತ್ತಾರೆ. ರಾಕೆಟ್ ಇತರ ಎಲ್ಲ ವಾಸ್ತವಗಳ ಸಂಬಂಧವನ್ನು ಕಡಿದು ಮುಂದೆ ಸಾಗುತ್ತದೆ. ರತ್ನಿ ನಟರಾಜ ಬೆಂಗಳೂರು ತಲುಪಿದ ಮೇಲೆ ಕಥಾಂತ್ಯದವರೆಗೆ ಓದುಗರ ವಿಚಾರಕ್ಕೆ ಯಾವ ಕೆಲಸವೂ ಇಲ್ಲ. ವಿಚಿತ್ರ ಸ್ವಭಾವದ ಕಿಟ್ಟಣ್ಣ ಕೊನೆಗೊಂದು ವಿಚಿತ್ರವನ್ನೇ ಮಾಡಿಬಿಡುತ್ತಾನೆ. ತಂಗಳ ಅನ್ನಕ್ಕೆ ಒಗ್ಗರಣೆ ಹಾಕಿದಂತೆ ಈ ನೀಳ್ಗತೆ.

ಧಾರವಾಡ —ಶಾಮಲಾ ಮುಳೀಕರ

## ಕೇಪ್ ಟೌನ್

ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾದ 'ಕೇಪ್ ಟೌನ್' ಎಂಬ ಲೇಖನ ಉತ್ತಮವಾಗಿದೆ. ಆದರೆ ಅದರ ಬಗ್ಗೆ ಕೊಟ್ಟ ವಿವರ ಸಾಕಾಗಲಿಲ್ಲ ಎನಿಸುತ್ತದೆ. ಲೇಖಕರು ಅದೇ ನಗರದ (ಸರಕಾರದ) ಬಿಳಿಯ ಜನರು ಅನುಸರಿಸುತ್ತಿ

ರುವ ವರ್ಣಭೇದ ನೀತಿಯನ್ನು ಖಂಡಿಸಿ ಒಂದು ಮಾತು ಬರೆಯಬೇಕಿತ್ತು.

ಹುಣಸೂರು — ಎನ್.ಎಸ್. ರಾಮತೀರ್ಥ

### ನಾಸಾಭರಣ

ಅಕ್ಟೋಬರ್ 'ಕಸ್ತೂರಿ'ಯಲ್ಲಿ ಮೂಗುತಿಯ ಪ್ರಾಚೀನತೆಗೆ ಆಂಧ್ರದ ನಾಗಾರ್ಜುನಕೊಂಡದ ಇತ್ತೀಚಿನ ಸಂಶೋಧನೆಗಳನ್ನು ಕಾದು ನೋಡಬೇಕಿದೆಯೆಂದು ಪಾವೆಂ ಬರೆದಿದ್ದಾರೆ. ಆದರೆ ಅದಕ್ಕಾಗಿ ಕಾದು ಕೊಡುವ ಅವಶ್ಯಕತೆಯಿಲ್ಲವೆನಿಸುತ್ತದೆ. Three Authors ಎಂದು ಪ್ರಸಿದ್ಧರಾದ ಮೂವರು ಇತಿಹಾಸಕಾರರು ತಮ್ಮ 'An Advanced History of India' ಗ್ರಂಥದ ೧೮ನೆಯ ಪುಟದಲ್ಲಿ ಅಂದಿನ ಭಾರತೀಯ ನಾರಿಯರ ಆಭರಣಗಳಲ್ಲಿ nose–studs (ಮೂಗುತಿಗಳು) ಇದ್ದುವೆಂದು ಉಲ್ಲೇಖಿಸಿದ್ದಾರೆ.

ಬೆಂಗಳೂರು–೧೧ —ಡಾ.ಕೆ. ಶ್ರೀಕಂಠಯ್ಯ

### ಹೊಸ ಲಿಪಿ

ಸು. ಮುರಳೀಧರರು ಬರೆದ 'ಭಾರತೀಯ ಭಾಷೆಗೊಂದು ಹೊಸ ಲಿಪಿ' ನಿಜವಾಗಿಯೂ ಭಾಷಾಗೊಂದಲವನ್ನು ಪರಿಹರಿಸಿ ಭಾವೈಕ್ಯಕ್ಕೆ ಮಾರ್ಗ ಮಾಡಿಕೊಡುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ ಕೆಲವು ಅಂಶಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಹೊಸ ವರ್ಣಮಾಲೆಯನ್ನು ರಚಿಸಿ ಕಲಿಯಲು ಬರೆಯಲು ಪ್ರಕಟಿಸಲು ಹಾಗೂ ಟೈಪ್ ಮಾಡಲು ಸುಲಭವಾಗಿ ಮಾಡಿ ಕೊಟ್ಟಿದ್ದಕ್ಕೆ ತುಂಬಾ ಧನ್ಯವಾದಗಳು.

ಲಚ್ಯಾಣ —ಅಶೋಕಕುಮಾರ ಕಾಸಾರ

ಸು. ಮುರಳೀಧರ ಬರೆದ 'ಭಾರತೀಯ ಭಾಷೆಗಳಿಗೊಂದು ಹೊಸ ಲಿಪಿ' ತೀರ ಅಪ್ರಬುದ್ಧ ಲೇಖನ ಈ ವಿಚಾರ ಜಗತ್ತಿನಲ್ಲಿ ಪ್ರಥಮ ಬಾರಿಗೆ ತಮಗೆ ಹೊಳೆದಿದೆಯೇನೋ ಎಂಬಂತೆ ಅವರು ಬರೆದಿದ್ದಾರೆ. ಆದ್ದರಿಂದಲೇ ಅವರ ಲೇಖನದಲ್ಲಿ ಸಾಕಷ್ಟು ಕುಂದು ಕೊರತೆಗಳಿವೆ. ಕಸ್ತೂರಿ'ಯೇ ಈ ವಿಷಯವನ್ನು ಕುರಿತ ೩–೪ ಲೇಖನಗಳನ್ನು ಕಾಲ ಕಾಲಕ್ಕೆ ಪ್ರಕಟಿಸಿದೆ. ಬೇರೆ ಭಾಷೆಗಳ ಮಾತಿರಲಿ; ಕನ್ನಡದಲ್ಲಿಯೇ ಇದು ಕನಿಷ್ಠ ಅರ್ಧ ಶತಮಾನದಷ್ಟು ಹಳೆಯ ಆಂದೋಲನ. ಕಬ್ಬೂರ ಮಧ್ವರಾಯರಿಂದ ಮೊದಲ್ಗೊಂಡು ಬಿ.ಎಂ. ಶ್ರೀಕಂಠಯ್ಯನವರ ವರೆಗೆ ಅನೇಕರು ತಮ್ಮ ವಿಚಾರಗಳನ್ನು ಸೂಚನೆಗಳನ್ನು ಮಂಡಿಸಿದ್ದಾರೆ. ಅವುಗಳಲ್ಲಿ ಒಂದನ್ನೂ ಅಭ್ಯಸಿಸಿದ ಇಲ್ಲವೆ ನೋಡಿದ ಗುರುತು ಈ ಲೇಖನದಲ್ಲಿ ಕಂಡು ಬರುವದಿಲ್ಲ. ರೋಮನ್ ಲಿಪಿ ಈಗಾಗಲೇ ವಿಶ್ವ ಲಿಪಿಯ ಹಂತವನ್ನು ತಲುಪತೊಡಗದೆ. ನಾಗರಿ ಲಿಪಿಯನ್ನು ಸಕಲ ಭಾಷೆಗಳಿಗೆ ಗ್ರಾಹ್ಯವನ್ನಾಗಿ ಮಾಡುವ ಪ್ರಯೋಗಗಳು ಸಾಕಷ್ಟು ಪ್ರಗತಿ ಹೊಂದಿವೆ. ಈ ಎಲ್ಲ ಪ್ರಯತ್ನಗಳ ಫಲಗಳನ್ನು ಹೊಳೆಗೆ ಹಾಕಿ ಹೊಸ ಲಿಪಿ ತರುವುದು ಸಾಧ್ಯವೆ? ಅಂಥ ಶಕ್ತಿ ಅಥವಾ ಸಾಮರ್ಥ್ಯ ಈ ಹೊಸ ಲಿಪಿಯಲ್ಲಿ ಇದೆಯೆ? ಪ್ರಚಲಿತವಿರುವ ಎಲ್ಲ ಲಿಪಿಗಳನ್ನು ತೊಡೆದು ಹಾಕಿ 'ಅ' ದಿಂದ'ಕ್ಷ'ದ ವರೆಗೆ ಹೊಸ ಸಂಕೇತಗಳನ್ನೇ ಸೂಚಿಸುವುದಾದರೆ ಒಬ್ಬೊಬ್ಬರೂ ಒಂದೊಂದು ಸಂಕೇತವನ್ನು ಸೂಚಿಸಬಹುದು. ಅವೆಲ್ಲವುಗಳಲ್ಲಿ ಈ ಸಂಕೇತಗಳ ಶ್ರೇಷ್ಠತೆ ಏನು? ಈ ಸಂಕೇತಗಳನ್ನು ಸೂಚಿಸುವಾಗ ಸಹ ಲೇಖಕರಿಗೆ ಒಂದು ಮಹತ್ವದ ಸಾಧಾರಣೆ ಹೊಳೆದೇ ಇಲ್ಲ. ಅದು ಮಹಾಪ್ರಾಣದ ಸಂಕೇತ. 'ಬ' ಅಕ್ಷರಕ್ಕೆ ಬಾಲ ಮಾಡಿದರೆ ಅದೇ ಮಹಾಪ್ರಾಣವಾಗುತ್ತದೆ. ಆದ್ದರಿಂದ ಎಲ್ಲ ಅಲ್ಪಪ್ರಾಣಗಳನ್ನೂ ಒಂದೇ ಸಂಕೇತದಿಂದ ಮಹಾಪ್ರಾಣವನ್ನಾಗಿ ಪರಿವರ್ತಿಸಬಾರದೇಕೆ? ಅದೇ ರೀತಿ ಮೃದು ವರ್ಣ ಮತ್ತು ಅನುನಾಸಿಕಗಳಿಗೂ ಸಂಕೇತವನ್ನು ಸೂಚಿಸಬಹುದು. ಆಗ ವರ್ಗೀಯ ವ್ಯಂಜನಗಳ ಸಂಖ್ಯೆ ಕೇವಲ ಐದಕ್ಕೆ ಇಳಿಯುತ್ತದೆ. ಈ ರೀತಿ ಇನ್ನೂ ಅನೇಕ ಕೊರತೆಗಳನ್ನು ಈ ಲೇಖನದಲ್ಲಿ ಎತ್ತಿ ತೋರಿಸಬಹುದು. ವಿಷಯದ ಸಮಗ್ರ ವ್ಯಾಸಂಗವಿಲ್ಲದೆ ತತ್ಕಾಲೀನ 'ಹೊಸ ವಿಚಾರ'ದಿಂದ ಬರೆವ ಲೇಖನಗಳು ವಿಚಾರವಂತರಿಗೆಂದಿಗೂ ಗ್ರಾಸವೆನಿಸವು.

ಹುಬ್ಬಳ್ಳಿ —ಸುರೇಂದ್ರ ದಾನಿ



# ಕಸ್ತೂರಿ

ವರ್ಷ : ೨೫ ಸಂಚಿಕೆ : ೩

ನವಂಬರ್ ೧೯೮೦

## ಸ್ಮಶಾನ ಸತ್ಯ

ಆ ಆಗಂತುಕ ಭಕ್ತ ಸಂತ ಕಬೀರರನ್ನು ಭೇಟಿಯಾಗಲು ಅವರ ಮನೆಗೆ ಬಂದ. ಕಬೀರರರು ಮನೆಯಲ್ಲಿರಲಿಲ್ಲ. ಅವರ ಪತ್ನಿ, "ಸ್ಮಶಾನಕ್ಕೆ ಹೋಗಿದ್ದಾರೆ. ಅಲ್ಲಿಯೇ ಹೋಗಿ ಭೇಟಿಯಾಗಿರಿ" ಎಂದಳು.

"ತಾಯಿ, ನಾನು ಸಂತರನ್ನು ನೋಡಿಲ್ಲ. ಸ್ಮಶಾನದಲ್ಲಿ ಬಹಳ ಜನರಿರಬಹುದು. ಹೇಗೆ ಗುರುತಿಸುವುದು?" ಎಂದು ಕೇಳಿದ ಆಗಂತುಕ.

"ಅವರನ್ನು ಗುರುತಿಸುವುದು ಸುಲಭದ ಮಾತು. ಅಲ್ಲಿ ಯಾರ ಹಣೆಯ ಮೇಲೆ ಜ್ವಾಲೆ ಕಾಣಿಸುತ್ತದೋ ಅವರೇ ನಿಮ್ಮ ಸಂತರು" ಎಂದಳಾಕೆ.

ಆತ ಸ್ಮಶಾನಕ್ಕೆ ಹೋದ. ಆದರೆ ತೀವ್ರವೇ

ಹಿಂದಿರುಗಿದ. ನಿರಾಶೆಯಿಂದ, "ತಾಯಿ, ಸ್ಮಶಾನದಲ್ಲಿ ಕುಳಿತ ಎಲ್ಲರ ಹಣೆಯ ಮೇಲೂ ಜ್ವಾಲೆ ಕಾಣಿಸುತ್ತಿದೆ" ಎಂದ.

ಸಂತಪತ್ನಿಗೆ ನಗು ಬಂತು. "ಭಕ್ತಮಹಾಶಯ, ಸ್ಮಶಾನದಿಂದ ಮರಳಿ ಬರುವಾಗಲೂ ಯಾರ ಹಣೆಯ ಮೇಲೆ ಜ್ವಾಲೆ ಉಳಿದಿರುತ್ತದೋ ಅವರೇ ನಿಮ್ಮ ಸಂತರು" ಎಂದಳು.

ಭಕ್ತ ಮತ್ತೆ ಸ್ಮಶಾನಕ್ಕೆ ಹೋದ. ಉರಿಯುತ್ತಿದ್ದ ಚಿತೆಯೆದುರು ಕುಳಿತ ನೂರಾರು ಜನರನ್ನು ಬಿಟ್ಟ ಕಣ್ಣಿಂದ ನೋಡಿದ. ಹೆಣ ಪೂರ್ಣ ಸುಟ್ಟ ಮೇಲೆ ಅವರೆಲ್ಲ ಎದ್ದು ಹೊರಟರು. ಸಮೀಪದ ನದಿಯಲ್ಲಿ ಮಿಂದು ಮಡಿಯಾದರು. ಸ್ಮಶಾನ ಮೈಲಿಗೆಯನ್ನು ಕಳೆದುಕೊಂಡರು.

ಭಕ್ತ ಅವರೆಲ್ಲರನ್ನೂ ನೋಡುತ್ತಲೇ ಇದ್ದ. ತನ್ನ ಸಂತನನ್ನು ಗುರುತಿಸಬೇಕಿತ್ತಲ್ಲವೆ? ಸ್ನಾನ ಮಾಡಿದ ಎಲ್ಲರ ಹಣೆಯ ಜ್ವಾಲೆಯೂ ನಂದಿ ಹೋಗಿತ್ತು. ಅವನಿಗೆ ಅಚ್ಚರಿ. ಆದರೆ ಒಬ್ಬನ ಹಣೆಯ ಜ್ವಾಲೆ ಮಾತ್ರ ಇನ್ನೂ ಉರಿಯುತ್ತಲೇ ಇತ್ತು. ಭಕ್ತನಿಗೆ ಬಲು ಸಂತೋಷ. ಆತ ಸಂತನ ಬಳಿ ಓಡಿದ. ಕಾಲಿಗೆರಗಿದ. "ನೀವೇ ಸಂತ ಕಬೀರ, ಅಲ್ಲವೆ?" ಎಂದು ಕೇಳಿದ.

"ಅಲ್ಲ" ಎಂದರು ಆ ವ್ಯಕ್ತಿ.

"ಆಂ?" ಭಕ್ತನಿಗೆ ಗಾಬರಿ. ಅಷ್ಟರಲ್ಲೇ ಆ ವ್ಯಕ್ತಿ, "ಸಂತ ಕಬೀರನಲ್ಲ. ಕೇವಲ ಕಬೀರ" ಎಂದಾಗ ಭಕ್ತನಿಗೆ ಸಮಾಧಾನವಾಯಿತು.

ನಾನು ಸತ್ಸಂಗಸುಖಕ್ಕಾಗಿ ನಿಮ್ಮಲ್ಲಿ ಬಂದಿದ್ದೇನೆ. ನನಗೀಗ ಒಂದೇ ಒಂದು ಸಂದೇಹ ಪರಿಹಾರವಾದರೆ ಸಾಕು, ಅದಕ್ಕಿಂತ ದೊಡ್ಡ ಜ್ಞಾನ ಇನ್ನೇನು ಬೇಡ ಎನಿಸುತ್ತಿದೆ" ಎಂದ.

"ಯಾವ ಸಂದೇಹ?"

"ಈಗಷ್ಟೇ ನಾನು ಸ್ಮಶಾನದಲ್ಲಿ ಕುಳಿತ ಎಲ್ಲರ ಹಣೆಯ ಮೇಲೂ ಜ್ವಾಲೆಯನ್ನು ಕಂಡೆ. ಸ್ನಾನದ ನಂತರ ನಿಮ್ಮೊಬ್ಬರನ್ನುಳಿದು ಉಳಿದೆಲ್ಲರ ಹಣೆಯ ಜ್ವಾಲೆ ನಂದಿಹೋಯಿತು. ಇದೆಂತಹ ಜ್ವಾಲೆ ?"

ಕಬೀರರು ಗಂಭೀರರಾಗಿ. "ಭಕ್ತ, ಇದು ಜ್ವಾಲೆಯಲ್ಲ–ಸ್ಮಶಾನಸತ್ಯ. ಈ ಸತ್ಯವೇ ಶಾಶ್ವತ ಜ್ಞಾನದ ರೂಪ" ಎಂದರು.

"ಆ ಸತ್ಯ ಯಾವುದು?"

"ಅದೆಂದರೆ ಹುಟ್ಟಿದವ ಸಾವಿಗೀಡಾಗಲೇಬೇಕೆಂಬ ಸತ್ಯ. ಹುಟ್ಟಿ ಬಂದವನಿಗೆ ಸಾವಂತೂ ನಿಶ್ಚಿತ. ಈ ಮೃತ್ಯುಬೋಧೆ ಸ್ಮಶಾನಕ್ಕೆ ಬರುವ ಎಲ್ಲರಿಗೂ ಆಗುತ್ತದೆ. ಆದರೆ ಬಲು ಬೇಗ ಸಂಸಾರಿಗ ಮನುಷ್ಯ ಈ ಬೋಧೆಯನ್ನು ಮರೆತು ಬಿಡುತ್ತಾನೆ. ತಾನು ಸಾಯಬಾರದು ಎಂದುಕೊಳ್ಳುತ್ತಾನೆ. ಬಹುಕಾಲದವರೆಗೆ ಸತ್ತ ಮತ್ತೊಬ್ಬನನ್ನು ಸ್ಮಶಾನಕ್ಕೆ ಮುಟ್ಟಿಸಿ ಬರುತ್ತಲೇ ಇರುತ್ತಾನೆ. ಅದಕ್ಕೇ ಆತ ತರತರಹೆಯ ಪಾಪಗಳಲ್ಲಿ. ಮುಳುಗುತ್ತಾನೆ. ಆದರೆ ಯಾವ ಸಂಸಾರಿಗ ಸ್ಮಶಾನದಲ್ಲಿ ಸಿಕ್ಕುವ ಸತ್ಯಜ್ಞಾನವನ್ನು ತನ್ನ ಹೃದಯದಲ್ಲಿ ಸ್ಥಾಪಿಸಿಕೊಳ್ಳುತ್ತಾನೆಯೋ ಆತನ ಹಣೆಯ ಜ್ವಾಲೆ ಎಂದಿಗೂ ಆರುವುದಿಲ್ಲ, ಸದಾ ದೀಪವಾಗಿಯೇ ಇರುತ್ತದೆ, ಮತ್ತು ಅಂಥ ಮನುಷ್ಯ ಮಾತ್ರ ಧರ್ಮದ ರಕ್ಷಣೆ ಮಾಡುತ್ತಾನೆ. ಪುನರ್ಜನ್ಮದಿಂದ ಮುಕ್ತನಾಗುತ್ತಾನೆ." ✡



ಒಂದು ಹೊಸ ಪುಸ್ತಕ ಪ್ರಕಟವಾಯಿತು.

"ಬೆಕ್ಕುಗಳು" ಅದರ ಹೆಸರು.

ಜನಪ್ರಿಯತೆ ಎಷ್ಟು ಹೆಚ್ಚಿತೆಂದರೆ ಕೆಲವೇ ದಿನಗಳಲ್ಲಿ ಅದರ ಪ್ರತಿಗಳು ಖರ್ಚಾಗಿಬಿಟ್ಟುವು.

ಒಬ್ಬ ವ್ಯಾಪಾರಿಯ ಬಳಿಯ ಕೊನೆಯ ಪ್ರತಿಯೂ ಖರ್ಚಾದಾಗ ಆತ ಪ್ರಕಾಶಕರಿಗೊಂದು ಪತ್ರ ಬರೆದ : "ನೂರು 'ಬೆಕ್ಕುಗಳು' ಬೇಕು. ಕೂಡಲೇ ಕಳಿಸಿ."

ವಿನೋದಿ ಸ್ವಭಾವದ ಪ್ರಕಾಶಕ ಉತ್ತರ ರೂಪವಾಗಿ : "ನಿಮ್ಮಲ್ಲಿ ಇಲಿಗಳ ಕಾಟ ತಡೆಯ ದಷ್ಟಾಗಿದೆಯೆ ?" ಎಂದು ಬರೆದ.



# ಭಾರತೀಯ ಸಂಸ್ಕೃತಿಗೆ 'ದೀಪ'ದ ಕೊಡುಗೆ

ಡಾ. ಕೆ. ಶ್ರೀಕಂಠಯ್ಯ

ಸೂರ್ಯ ಮತ್ತು ಅಗ್ನಿಯ ಸಂಕೇತವಾದ ದೀಪ ಮಂಗಳದ ಸಂಕೇತವೂ ಆಹುದೆಂಬ ನಂಬಿಕೆ ನಮ್ಮಲ್ಲಿದೆ. ಮಾನವ ಆವಿಷ್ಕರಿಸಿದ ಅನೇಕ ಅದ್ಭುತ ವಸ್ತುಗಳಲ್ಲಿ ಅಗ್ನಿಯೂ ಒಂದು. ಬೆಳಕಿನೊಂದಿಗೆ ಜೀವರಕ್ಷಣೆಯನ್ನೂ ಮಾಡುತ್ತಿರುವ ಇದನ್ನು ಮಾನವ ದೇವತೆಯ ಸ್ಥಾನಕ್ಕೆ ಏರಿಸಿದ್ದಾನೆ. ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಅಗ್ನಿ ಅಥವಾ ಜ್ಯೋತಿಗೆ ವಿಶೇಷ ಮಹತ್ವವಿದೆ. ಇಂದ್ರನ ನಂತರ ಅಗ್ನಿಯೇ ಮುಖ್ಯ ದೇವತೆಯೆಂದು ವೇದದಲ್ಲಿ ನಿರೂಪಿಸಿದೆ.

ದೀಪದ ಕಲ್ಪನೆ ಬಂದಾಗಿನಿಂದ ನಾಗರಿಕತೆ ಹೊಸ ಶಕ್ತಿಯನ್ನು ಪಡೆಯಿತು. ಬೆಳಕೇ ಮನುಷ್ಯನಿಗೆ ಜ್ಞಾನಮೂಲವಾಗಿದೆ. ದೀಪದ ಪಾವಿತ್ರ್ಯ ಹಾಗೂ ಮಹಿಮೆಯನ್ನು ಅರಿತ ಮಾನವ ಅದನ್ನು ಸುಂದರಗೊಳಿಸಲು ಆಗಾಗ ಪ್ರಯತ್ನಿಸುತ್ತಲೇ ಬಂದಿದ್ದಾನೆ.

ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಗಳಲ್ಲಿ ಚಿನ್ನದ ಮತ್ತು ಬೆಲೆ ಬಾಳುವ ಹರಳುಗಳ ಉಲ್ಲೇಖ ಬರುತ್ತದೆ. ರಾಮಾಯಣದ ಸುಂದರಕಾಂಡದಲ್ಲಿ ಬರುವ ರತ್ನದೀಪದ ಉಲ್ಲೇಖ ಮತ್ತು ಮಹಾಭಾರತದ ದ್ರೋಣಪರ್ವದಲ್ಲಿ ದೀಪದ ಬೆಳಕಿನಲ್ಲಿ ನಡೆಯುತ್ತಿದ್ದ ರೋಮಾಂಚಕಾರಿ ವರ್ಣನೆಗಳನ್ನು ಸ್ಮರಿಸಬಹುದು.

ವಿಷ್ಣುವಿನ ದಶಾವತಾರಗಳ ಕಲ್ಪನೆ ದೀಪ ತಯಾರಿಸುವ ಕಸುಬುದಾರರಿಗೆ ಸ್ಫೂರ್ತಿ ನೀಡಿದೆ. ಹಾಗೆಯೆ ಮತ್ಸ್ಯ, ಕೂರ್ಮ, ವರಾಹ ಅವತಾರಗಳ ದೀಪಗಳನ್ನು ವಿಶೇಷವಾಗಿ ಗಮನಿಸಬಹುದು.

ಮೊಗಲರು, ರಜಪುತರು, ಮರಾಠರು ಮುಂತಾದವರ ಕಾಲದಲ್ಲಿ ದೀಪಾವಳಿಯ ದೀಪಗಳನ್ನು ಸಾಲು ಅಥವಾ ಸ್ತಂಭದೀಪಗಳನ್ನು ವೈವಿಧ್ಯಪೂರ್ಣ ರೀತಿಗಳಲ್ಲಿ ಬೆಳಗಿಸುತ್ತಿದ್ದರು.

ದೀಪಗಳನ್ನು ಕೆಲವು ಸಂದರ್ಭಗಳಲ್ಲಿ ಹರಕೆಯ ದೀಪಗಳಾಗಿ ಉಪಯೋಗಿಸುವುದೂ ಉಂಟು. ಆಯುಷ್ಯವಂತನಾಗಲು, ಆರೋಗ್ಯವಂತನಾಗಲು, ಹಾಗೂ ಸತ್ಪುತ್ರರನ್ನು ಪಡೆಯಲು ದೇವರನ್ನು ಪ್ರಾರ್ಥಿಸಿ ತನ್ನ ಬಯಕೆ ಈಡೇರಿದಾಗ ಇಂಥ ಹರಕೆ ದೀಪಗಳನ್ನು ಹೊತ್ತಿಸಿ ಮಾನವ ಅವನ್ನು ದೇವರಿಗೆ ಅರ್ಪಿಸುತ್ತಿದ್ದ. ಕೆಲವು ಮೂಲನಿವಾಸಿ



ಗಳಲ್ಲಿ ಇಂಥ ಪದ್ಧತಿ ಈಗಲೂ ಕಂಡುಬರುತ್ತದೆ. ಅವರು ಸಲ್ಲಿಸುತ್ತಿದ್ದ ಹರಕೆಯ ದೀಪಗಳು ಸಾಮಾನ್ಯವಾಗಿ ಸರಳವಾಗಿಯೂ ಒರಟಾಗಿಯೂ ಇರುತ್ತಿದ್ದವು.

ಆದಿವಾಸಿಗಳಲ್ಲಿ ಮನೆಯ ಯಜಮಾನಿಯಾದ ತಾಯಿ ಕಬ್ಬಿಣದಿಂದ ಮಾಡಿದ ದೀಪವನ್ನು ಹಚ್ಚುವುದು ರೂಢಿಯಲ್ಲಿದೆ. ಇನ್ನು ಕೆಲವು ಗುಡ್ಡಗಾಡು ಜನಾಂಗದವರು ಹಿಟ್ಟಿನಿಂದ ಮಾಡಿದ ದೀಪಗಳನ್ನು ಆನೆ, ಕುದುರೆ, ನವಿಲುಗಳ ಆಕೃತಿಗಳಿಂದ ಅಲಂಕರಿಸಿ ಮದುವೆ ಹಬ್ಬ ಮುಂತಾದ ಸಂದರ್ಭಗಳಲ್ಲಿ ಉಪಯೋಗಿಸುತ್ತಾರೆ.

ದೀಪಗಳಲ್ಲಿ ಅರ್ಚನಾದೀಪ, ದೀಪಲಕ್ಷ್ಮಿ, ಆರತಿದೀಪ, ನಂದಾದೀಪ, ತೂಗುದೀಪ, ಕಾಲುದೀಪ ಮುಂತಾದ ನಾನಾ ಬಗೆಗಳಿವೆ. ಪೂಜೆಗಾಗಿ ಅರ್ಚನಾ ದೀಪವನ್ನೂ, ಪ್ರಾರ್ಥನೆಗಾಗಿ ಆರತಿ ದೀಪವನ್ನೂ ದೇವರ ಮುಂದೆ ಶಾಶ್ವತವಾಗಿ ಬೆಳಗಲು ನಂದಾದೀಪಗಳನ್ನೂ ಉಪಯೋಗಿಸುವರು. ಸರಪಳಿಗಳಿಂದ ತೂಗು ಹಾಕಿದ್ದು ತೂಗುದೀಪವಾದರೆ, ಪುಟ್ಟ ಸ್ತಂಭದಂಥ ಪೀಠದ ಮೇಲಿರುವ ದೀಪವೇ ಕಾಲು ದೀಪ. ಇವುಗಳೊಂದೊಂದೂ ಕಲಾಪೂರ್ಣ ರಚನೆ. ದಕ್ಷಿಣ ಭಾರತದಲ್ಲಿ ೧೭ನೆಯ ಶತಮಾನದಲ್ಲಿ ದೊರೆತ ಆರತಿ ದೀಪ ಐದು ದಳಗಳುಳ್ಳ ದೀಪ ಪಾತ್ರೆಗಳುಳ್ಳ ಹೊಂದಿದ್ದು, ಅವುಗಳ ಬುಡದಲ್ಲಿ ಐದು ಸರ್ಪಗಳನ್ನು ಕೆತ್ತಲಾಗಿದೆ. ಇದರ ಹಿಡಿಯ ತುದಿಯಲ್ಲಿ ಮತ್ತೊಂದು ಪ್ರತ್ಯೇಕ ದೀಪಪಾತ್ರೆ ಇದೆ.

ದೀಪ ಧಾರಿಣಿ ಅಥವಾ ದೀಪಲಕ್ಷ್ಮೀ ಎಂಬುದು ಭಾರತದಲ್ಲಿ ಕಂಡುಬರುವ ಮತ್ತೊಂದು ಜನಪ್ರಿಯ ಪ್ರಕಾರ. ಇದನ್ನು 'ದೀಪದ ಮಲ್ಲಿ' ಎಂದು ಕರೆಯುವುದೂ ಉಂಟು. ಸಾಮಾನ್ಯವಾಗಿ ಸಮಭಂಗಿಯಲ್ಲಿ, ಕೆಲವೊಮ್ಮೆ ನೃತ್ಯ ಭಂಗಿಯಲ್ಲಿ ಇರುವ ದೀಪಲಕ್ಷ್ಮಿ ಒಂದು ಕೈಯಲ್ಲಿ ಅಥವಾ ಎರಡೂ ಕೈಗಳಲ್ಲಿ ದೀಪವನ್ನು ಹಿಡಿದಿರುತ್ತಾಳೆ. ದೀಪಲಕ್ಷ್ಮಿಯನ್ನು ತಯಾರಿಸಿದವನು ತನ್ನ ಪ್ರಾಂತೀಯ ಕೇಶಾಲಂಕಾರ, ಉಡಿಗೆ ತೊಡಿಗೆ, ಆಭರಣ, ಶೈಲಿ ಮುಂತಾದುವನ್ನು ಅಳವಡಿಸಿರುತ್ತಾನೆ. ಬೇರೆ ಬೇರೆ ಕಾಲಗಳಲ್ಲಿನ ಶಿಲ್ಪ ಹಾಗೂ ಲೋಹಕಲೆಯನ್ನು ಗಮನಿಸಿದರೆ, ದೀಪಲಕ್ಷ್ಮಿಯ ರಚನಾ ವಿಧಾನದಲ್ಲಿ ಕಲಾವಿದನ ಕಲಾಕೌಶಲವನ್ನು ಕಾಣಬಹುದು. ದಕ್ಷಿಣ ಭಾರತದಲ್ಲಿ ದೊರೆತ ೧೯ನೆಯ ಶತಮಾನದ ಗಜಲಕ್ಷ್ಮಿದೀಪವೊಂದರಲ್ಲಿ ಪದ್ಮಾಸನದಲ್ಲಿ ಕುಳಿತ ಚತುರ್ಭುಜ ಲಕ್ಷ್ಮಿ, ಸೊಂಡಿಲನ್ನು ಮೇಲಕ್ಕೆತ್ತಿದ ಎರಡು ಗಜಗಳು, ಅಕ್ಕಪಕ್ಕದಲ್ಲಿ ಚಾಮರಧಾರಿಣಿಯರು ಮತ್ತು ದೀಪಪಾತ್ರೆಯ ತುದಿಯಲ್ಲಿ ಎರಡು ಗಿಣಿಗಳು ಕಲಾಪೂರ್ಣವಾಗಿ ಕಂಗೊಳಿಸುತ್ತವೆ.

ಸರಪಳಿಗಳಿರುವ ತೂಗುದೀಪಗಳು ಚಿತ್ತಾಕರ್ಷಕವಾಗಿದ್ದು ಜಗತ್ತಿನ ಎಲ್ಲ ಭಾಗಗಳಲ್ಲಿಯೂ ವೈವಿಧ್ಯಮಯ ರೀತಿಯಲ್ಲಿ ಕಂಡುಬರುತ್ತವೆ.

ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದ ಮಹಾಬಲೇಶ್ವರ ದೇವಾಲಯದಲ್ಲಿರುವ ದೀಪಗಳು ವಿಷ್ಣು ಸಂಕೇತಗಳಾದ ಶಂಖ, ಚಕ್ರ, ಗದಾ, ಪದ್ಮಗಳನ್ನು ಒಳಗೊಂಡಿವೆ. ಕಾಳಿದಾಸನ 'ಮೇಘದೂತ'ದಲ್ಲಿ ಅಲಕಾನಗರಿಯಲ್ಲಿರುವ ಅರಮನೆಗಳಲ್ಲಿ ಯಕ್ಷ ರತ್ನದೀಪಗಳನ್ನು ಉಪಯೋಗಿಸುತ್ತಿದ್ದನೆಂದು ವರ್ಣಿಸಿದ್ದಾನೆ. ಭಾರತೀಯ ಜಾನಪದದಲ್ಲೂ ದೀಪಗಳಿಗೆ ವಿಶಿಷ್ಟ ಸ್ಥಾನವಿದೆ.

ಪ್ರಾಚೀನ ಭಾರತದ ವಾಸ್ತುಶಿಲ್ಪ ಶಾಸನ ಮುಂತಾದವುಗಳಲ್ಲಿ ದೀಪಗಳ ಉಲ್ಲೇಖವಿದೆ. ಮೊಹಂಜೊದಾರೋದಲ್ಲಿ ನಡೆಸಿದ ಸಂಶೋಧನೆಗಳಿಂದ ಐದು ಸಾವಿರ ವರ್ಷಗಳ ಹಿಂದೆಯೇ ಬೀದಿ ದೀಪಗಳು ಇದ್ದವು ಎಂಬುದು ಗೊತ್ತಾಗಿದೆ. ಪ್ರತಿಯೊಂದು ಮುಖ್ಯ ರಸ್ತೆಯಲ್ಲೂ ಒಂದೊಂದು ದೀಪಸ್ತಂಭ ಇರುತ್ತಿತ್ತು. ಮನೆಯ ಪ್ರಧಾನ ಬಾಗಿಲುಗಳ ಮೇಲೂ ಚಿಕ್ಕ ದೀಪಗಳನ್ನು ಹೊತ್ತಿಸಿ ಇಡುತ್ತಿದ್ದರು. ಮಾತೃದೇವತೆಯೆಂದು ಹೇಳಲಾದ ಮೃಣ್ಮೂರ್ತಿಯ ಕಿರೀಟದಲ್ಲಿ ಎರಡು ಪ್ರಣತಿಯೋಪಾದಿಯ ರಚನೆಗಳಿದ್ದು ಅವುಗಳಲ್ಲಿ ಎಣ್ಣೆ ಹಾಕಿ ದೀಪ ಹೊತ್ತಿಸುತ್ತಿದ್ದರು.

ಭಾರತೀಯ ಶಿಲ್ಪಗಳಲ್ಲಿ ದೀಪಚಿತ್ರಣ ಸಾಮಾನ್ಯವಾಗಿ ಅಲ್ಲಲ್ಲಿ ಕಂಡುಬರುತ್ತದೆ. ಪ್ರಾಚೀನ ಹಾಗೂ ಮಧ್ಯಕಾಲೀನ ಶಾಸನಗಳಲ್ಲಿ ದೇವಾಲಯಗಳ ದೀಪಗಳಿಗೆ ಸಂಬಂಧಪಟ್ಟ ಉಲ್ಲೇಖಗಳು ಕಂಡುಬರುತ್ತವೆ. ದಕ್ಷಿಣ ಭಾರತದ ಚೋಳರ ಕಾಲದ ತಾಮ್ರಪತ್ರವೊಂದರಲ್ಲಿ ನಂದಾದೀಪದ ಉಲ್ಲೇಖವಿದೆ.

ದಕ್ಷಿಣ ಭಾರತದ ಒಂದು ಶಾಸನ ರಾಜರು ದೇವಾಲಯಗಳಿಗೆ ನೀಡುತ್ತಿದ್ದ ಪೂಜೋಪಕರಣಗಳ ವಿಚಾರಗಳನ್ನು ಹೇಳುತ್ತ, " ಶ್ರೀ ವೀರ ಕೃಷ್ಣರಾಯ ಮಹಾರಾಯರು ಶ್ರೀ ಕಾಳಹಸ್ತಿ ದೇವರಿಗೆ ಸಮರ್ಪಿಸಿದ ಚಿನ್ನದ ಪುರುಷಾಮೃಗದಾರತಿ, ಗಿರಿಯಾರತಿ, ಬೆಳ್ಳಿಯಾರತಿ .." ಎಂದು ಬಗೆ ಬಗೆಯ ಆರತಿಗಳ ಹೆಸರನ್ನು ಹೇಳುತ್ತದೆ. ಈ ಆರತಿಗಳಲ್ಲದೇ ಉಪ್ಪಾರತಿ, ಏಕಾರತಿ. ಕರ್ಪೂರದಾರತಿ, ಗುಮ್ಮಾರತಿ (ಕುಂಭಾರತಿ), ದೀಪಾರತಿ, ಧೂಪಾದೀಪಾರತಿ, ಹತ್ತುಬೆರಳಾರತಿ–ಮುಂತಾದ ಆರತಿಗಳು ಕನ್ನಡ ಕಾವ್ಯಗಳಲ್ಲಿ ಕಂಡುಬರುತ್ತವೆ.

ಅನೇಕ ದೇವಾಲಯಗಳಲ್ಲಿ ದೇವರಿಗೆ ದೀಪೋತ್ಸವ ಸೇವೆ ಸಲ್ಲಿಸಲು ದಾನಿಗಳು ದತ್ತಿ ಬಿಟ್ಟಿರುವ ವಿಷಯವನ್ನು ಅನೇಕ ಶಾಸನಗಳು ಹೇಳುತ್ತವೆ. ಅವುಗಳಲ್ಲಿ ಕಾರ್ತಿಕ ಮತ್ತು ಕೃತ್ತಿಕೆ ದೀಪೋತ್ಸವಗಳು ಮುಖ್ಯವಾದವು. "ಕಾರ್ತಿಕ ಮಾಸದೊಳಾಕಾಶದೀಪವಾಗಿ ಕಾರ್ತಿಕದೊಳಗೆತ್ತಿದ ದೀವಳಿಗೆಯುಂತೆ" ಎಂಬ ಮಾತುಗಳು ಕನ್ನಡ ಕಾವ್ಯಗಳಲ್ಲಿ ಕಂಡುಬರುತ್ತವೆ.



ಪೂಜೆಯ ವಿಧಿವಿಧಾನಗಳನ್ನು ಬಣ್ಣಿಸುವ ಪುರಂದರದಾಸರ ಕೀರ್ತನೆಯೊಂದರಲ್ಲಿ ಬರುವ ದೀಪಾರತಿಯ ಚಿತ್ರ ಇಂದಿಗೂ ಕೆಲವು ಮನೆಗಳಲ್ಲಿ ದೇವಾಲಯಗಳಲ್ಲಿ ಕಾಣಬಹುದಾದ ದೀಪಾರತಿಯ ಮನಮೋಹಕ ಸಹಜ ಸುಂದರ ಚಿತ್ರವೇ ಆಗಿದೆ. "ಕಂಚು ಒತ್ತಾಳೆ ಸುವರ್ಣಮಯ ಕುಂದಣದ ಮೇಲು ನಾಲು ದೀವಿಗೆಗಳ ಕಟ್ಟು ದೀವಿಗೆಗಳ ಹಚ್ಚಿಟ್ಟು ತುಪ್ಪದ ದೀವಿಗೆಯ ಬಗೆ ಬಗೆ ತುಂಬಿಟ್ಟ ಹಲಿಗಾರತಿ ಸಾಲುದೀವಿಗೆಯನ್ನು, ಲಕ್ಷದೀವಿಗೆಯನ್ನು ವಿಷ್ಣು ಮೂರುತಿಗೆ ಅರ್ಪಿಸಿ ನಾ ಕೈಯ ಮುಗಿಯುತಲಿದ್ದೆ. ಉತ್ತಮವಾಗೋದು ಮೊದಲೆತ್ತೊಂದು ಧೂಪಾರತಿ, ಒಡನೆ ಏಕಾರತಿ ಪಂಚವರ್ಣದಾರತಿ ಕರ್ಪೂರದಾರತಿ ಶ್ರೀಹರಿಗೆ ಅರ್ಪಿಸಿ ನಾನು ಕೈಯ ಮುಗಿಯುತಲಿದ್ದೆ" ಪುರಂದರದಾಸರ ಕೀರ್ತನೆ ೫–೬೯)



ದಾಸರು ತಮ್ಮ ಮತ್ತೊಂದು ಕೀರ್ತನೆಯಲ್ಲಿ (೪–೪) ಕೊಡುವ ಧೂಪಾರತಿಯ ಚಿತ್ರವೂ ಮನೋಜ್ಞವಾಗಿದೆ: "ಧೂಪಾರತಿಯ ನೋಡುವ ಬನ್ನಿ ನಮ್ಮ ಗೋಪಾಲಕೃಷ್ಣ ದೇವರ ಪೂಜೆಯ ...ಅಗರು, ಚಂದನ, ಧೂಪ ಗುಗ್ಗಳ, ಸಾಂಬ್ರಾಣಿ ಮಘಮಘಿಸುವ ಧೂಪಾರತಿಯು ಮಿಗಿಲಾದ ಏಕಾರತಿ ಭಕ್ತಿಯಲಿ."

ಮನೆಯಲ್ಲೇ ಆಗಲಿ ದೇವಾಲಯದಲ್ಲೇ ಆಗಲಿ, ದೇವರಿಗೆ ದೀಪೋತ್ಸವವೆಂದರೆ ಜನರಿಗದೊಂದು ಸಂಭ್ರಮ. ಇವತ್ತಿಗೂ ಅನಂತಶಯನ ಮುಂತಾದ ದೇವಾಲಯಗಳಲ್ಲಿ ಲಕ್ಷದೀಪೋತ್ಸವ ಮುಂತಾದ ಸೇವೆಗಳು ನಡೆಯುವುದನ್ನು ಕಾಣಬಹುದು. ಪ್ರವಾಸಿ ಪಾಯೆಸನು ವಿಜಯನಗರದ ರಾಜಧಾನಿಯಲ್ಲಿ ತಾನು ಕಂಡ ದೇವಾಲಯಗಳನ್ನು ವರ್ಣಿಸುತ್ತ ಅಲ್ಲಿ ಕಂಬಗಳಲ್ಲಿ ಸಣ್ಣ ಕುಳಿಗಳನ್ನು ಮಾಡಿ ಹಣತೆಗಳನ್ನಿಟ್ಟಿರುವುದನ್ನು ಹೇಳುತ್ತಾನೆ. 'ನನಗೆ ತಿಳಿದಂತೆ ಪ್ರತಿರಾತ್ರಿ ಎರಡೂವರೆ ಸಾವಿರದಿಂದ ಮೂರು ಸಾವಿರದವರೆಗೆ ಹಣತೆಗಳು ಉರಿಯುತ್ತಿವೆ,' ಎಂದು ಹೇಳುತ್ತಾನೆ.

ದಕ್ಷಿಣಭಾರತದಲ್ಲಿ ದೊರೆತ ೧೮ನೆಯ ಶತಮಾನದ ತೂಗುದೀಪವೊಂದರ ಸರಪಳಿಯಲ್ಲಿ ಡೊಂಬರಾಟದ ಹುಡುಗಿ ಕಾಲುಗಳೆರಡನ್ನೂ ಹಿಂಭಾಗದಿಂದ ಎತ್ತಿ ತಂದು ತಲೆಯನ್ನು ಮುಟ್ಟಿಸುತ್ತಿರುವಂತೆ ಕೆತ್ತಿರುವುದು ನಿಜಕ್ಕೂ ಅದ್ಭುತವಾಗಿದೆ. ಹೈದರಾಬಾದಿನ ೧೮ನೆಯ ಶತಮಾನದ ತೂಗುದೀಪ ಒಂದು ಪಂಜರದಂತಿದ್ದು ಅದರ ಮಧ್ಯದಲ್ಲಿ ಪುಟ್ಟ ಕಾಲುದೀಪವಿದೆ. ದೀಪ ಹಚ್ಚಿದ ಮೇಲೆ ಒಂದು ಬಟ್ಟೆಯನ್ನು ಪಂಜರದ ಸುತ್ತ ಸುತ್ತುತ್ತಾರೆ. ಬಣ್ಣ ಬಣ್ಣದ ಹರಳುಗಳಿಂದ ಚಿತ್ರವಿಚಿತ್ರವಾಗಿ ರಚಿಸಿದ ತೂಗುದೀಪಗಳು ಯೂರೋಪಿನ ಮಧ್ಯಕಾಲೀನ ಅರಮನೆಗಳಲ್ಲಿ ಚರ್ಚುಗಳಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಮೇಣದ ಬತ್ತಿಯನ್ನು ಹೊತ್ತಿಸಿ ಇಡುತ್ತಿದ್ದರು.

ನೇಪಾಳದಲ್ಲಿ ದೊರೆತ ೧೮ನೇ ಶತಮಾನದ ಗಣೇಶ ದೀಪ ಕುತೂಹಲಕರವಾಗಿದೆ. ದೀಪ ಸ್ತಂಭದ ಮೇಲುಭಾಗದಲ್ಲಿ ಸುಖಾಸನದಲ್ಲಿ ಕುಳಿತ ಗಣಪತಿಯ ಚಿತ್ರವೂ ಪೀಠಭಾಗದಲ್ಲಿ ಮುಖವನ್ನು ದೀಪಪಾತ್ರೆಯೊಳಗೆ ಚಾಚಿಕೊಂಡಿರುವ ಇಲ್ಲಿಯ ಚಿತ್ರವೂ ಇದೆ. ದಕ್ಷಿಣಭಾರತದಲ್ಲಿ ದೊರೆತ ೧೭ನೇ ಶತಮಾನದ ಒಂದು ಗಜದೀಪ ಗಮನಾರ್ಹವಾಗಿದೆ. ಸೊಂಡಿಲಿನಲ್ಲಿ ದೀಪಪಾತ್ರೆಯನ್ನು ಹಿಡಿದು ನಿಂತ ಆನೆಯ ಮೇಲೆ ಗಣೇಶ ಅವನನ್ನು ಸುತ್ತುವರಿದು ಶಿವಲಿಂಗ, ನಂದಿ ಮತ್ತು ಸರ್ಪಗಳಿವೆ. ಗುಜರಾತದಲ್ಲಿ ದೊರೆತ ೧೮ನೇ ಶತಮಾನದ ಒಂದು ಗಜದೀಪ ವಿಚಿತ್ರವಾಗಿದೆ. ಬೆನ್ನ ಮೇಲೆ ಎರಡು ದೀಪಪಾತ್ರೆಗಳನ್ನು ಹೊತ್ತು ನಿಂತ ಆನೆಯ ಮೇಲೆ ದೇವತೆಯೊಂದು ನೃತ್ಯ ಭಂಗಿಯಲ್ಲಿ ನಿಂತಿದ್ದು ಎರಡೂ ಕೈಗಳಲ್ಲಿ ಎರಡು ಪಾತ್ರೆಗಳನ್ನು ಹಿಡಿದಿದೆ. ಕರ್ನಾಟಕದಲ್ಲಿ ದೊರೆತ ೧೮ನೇ ಶತಮಾನದ ದೀಪದಲ್ಲಿ ನಾಲ್ಕು ಚಕ್ರಗಳುಳ್ಳ ಒಂದು ಪೆಟ್ಟಿಗೆಯ ಮೇಲೆ ವಿರುದ್ಧ ದಿಕ್ಕಿಗೆ ಮುಖ ಮಾಡಿ ಮಲಗಿರುವ ಎರಡು ಎತ್ತು

ಗಳನ್ನು ಕೊರೆದು ಅವು ದೀಪಪಾತ್ರೆಯನ್ನು ಹೊತ್ತಿರುವಂತೆ ಮಾಡಿದೆ.

ಭಾರತದಲ್ಲಿ ಕಾರ್ತಿಕ ಮಾಸದಲ್ಲಿ, ಪಾಶ್ಚಾತ್ಯ ದೇಶಗಳಲ್ಲಿ ಕ್ರಿಸಮಸ್ ಹಬ್ಬದಂದು ಸಾಮಾನ್ಯವಾಗಿ ಆಕಾಶದೀಪಗಳನ್ನು ಎತ್ತರವಾದ ಜಾಗದಲ್ಲಿ ಇಡುವ ಪದ್ಧತಿ ಇದೆ. ಶ್ರಾವಣ ಶುಕ್ರವಾರದಂದು ಕೆಲವು ಕಡೆ ಹಿಟ್ಟಿನ ದೀಪಗಳನ್ನು ಉರಿಸುತ್ತಾರೆ. ಆಷಾಢಮಾಸದ ಅಮಾವಾಸ್ಯೆಯ ದಿನ ವರ್ಷವಿಡಿ ಉಪಯೋಗಿಸಿದ ದೀಪಗಳನ್ನು ವಿಸರ್ಜಿಸಿ ಹೊಸದೀಪಗಳನ್ನು ತರುತ್ತಾರೆ. ಅದನ್ನು ದೀಪರಾತ್ರಿಯೆಂದೇ ಕರೆಯುತ್ತಾರೆ. ಪವಿತ್ರ ಕಾರ್ಯಗಳನ್ನು ಮಾಡುವಾಗ ಸಾಕ್ಷಿದೀಪಗಳನ್ನು ಉರಿಸುವುದುಂಟು. ಕೆಲವು ಉದ್ಘಾಟನಾ ಸಮಾರಂಭಗಳನ್ನು ದೀಪಗಳನ್ನು ಹಚ್ಚುವುದರ ಮೂಲಕ ಸಾಂಕೇತಿಕವಾಗಿ ಉದ್ಘಾಟಿಸುವರು.

ದೀಪವೈಭವವನ್ನು ವಿಶೇಷವಾಗಿ ಕಾಣು



ವುದು ದೀಪಾವಳಿಯಂದು. ಮಲೆನಾಡಿನಲ್ಲಿ ಅಂಟಿಕೆ ಪಂಟಿಕೆಯುಪರ ಸಾಂಪ್ರದಾಯಿಕ ವೈಶಿಷ್ಟ ಪೂರ್ಣ ದೀಪ ಆ ಸಮಯದಲ್ಲೇ ನಮಗೆ ನೋಡ ಸಿಗುವುದು. ಹಿಂದಿನ ಕಾಲದಲ್ಲಿ ವೀರರನ್ನು ಯುದ್ಧಕ್ಕೆ ಕಳಿಸುವಾಗ ಅವರು ವಿಜಯಿಗಳಾಗಿ ಬಂದಾಗ ದೀಪದೊಂದಿಗೆ ಗೌರವಿಸುವ ಪದ್ಧತಿ ಇತ್ತು. ಗಾಂಧಿಯವರು ದಂಡಿ ಯಾತ್ರೆ ಕೈಕೊಂ–ಡಾಗ ಪ್ರತಿಯೊಂದು ಊರಿನಲ್ಲೂ ದಾರಿಯುದ್ದಕ್ಕೂ ಮಹಿಳೆಯರು ಪ್ರಾರ್ಥನಾದೀಪಗಳೊಂ–ದಿಗೆ ಅವರನ್ನು ಸ್ವಾಗತಿಸಿದರು. ಮಥುರಾ, ಪಂಜಾಬ್ ಮುಂತಾದ ಕಡೆಗಳಲ್ಲಿ ದೀಪ ಹಿಡಿದು ಮಾಡುವ ನೃತ್ಯಗಳು ಆಚರಣೆಯಲ್ಲಿವೆ.

ದೀಪ ಶಕುನ ಸೂಚಿಯೂ ಹೌದು. ದೀಪ ಒಣಗಿದರೆ ಸಂಪತ್ತು ನಾಶ. ಬಿಳಿಜ್ವಾಲೆ ಅನ್ನನಾಶ ಸೂಚಕ. ಅತಿಕೆಂಪುಜ್ವಾಲೆ ಸಮರ ಸಂಕೇತ.ಕಪ್ಪು ಜ್ವಾಲೆ ಮರಣಸಂಕೇತ ದೀಪ ಗಾಳಿಗೆ ನಂದಿದರೆ ಅಥವಾ ಕೈಜಾರಿ ಕೆಳಗೆ ಬಿದ್ದರೆ ಅಶುಭವೆಂದು ಭಾವಿಸುವುದೂ ಉಂಟು.

ಹರಿದ್ವಾರದಲ್ಲಿ ಸಂಜೆ ಬ್ರಹ್ಮಕುಂಡದಲ್ಲಿ ಮಂಗಳಾರತಿ ಆಗುವ ಸಂದರ್ಭದಲ್ಲಿ, ಮೂಡಿಬರುವ ಭಾವಪೂರ್ಣ ಚಿತ್ರವೊಂದನ್ನು ಸ್ವಾಮಿ ಸೋಮನಾಥಾನಂದರು ತಮ್ಮ ಪ್ರವಾಸ ಸಾಹಿತ್ಯ ಹೈಮಾಚಲ ಸಾನ್ನಿಧ್ಯದಲ್ಲಿ ನೀಡಿ ದೀಪದ ಬಗೆಗೆ ಭಾರತೀಯರಿಗಿರುವ ಭಾವಪೂರ್ಣ ಕಲ್ಪನೆಗಳಿಗೆ ಕನ್ನಡಿ ಹಿಡಿದಿದ್ದಾರೆ. ಮಂಗಳಾರತಿಯಾದ ಮೇಲೆ ಎಲೆಯಲ್ಲಿ ಮಾಡಿದ ದೋಣಿಯಲ್ಲಿ ಹೂವನ್ನು ತುಂಬಿ ಅದರ ಮೇಲೆ ಕರ್ಪೂರ ಹೊತ್ತಿಸಿಟ್ಟು ಅದನ್ನು ಗಂಗಾನದಿಯ ಮೇಲೆ ತೇಲಿ ಬಿಡುವರು. ಹಲವು ಕಿರಿಯ ಹೂವಿನ ದೋಣಿಗಳು ಮಿನುಗುವ ಕರ್ಪೂರದಾರತಿಯನ್ನು ಹೊತ್ತುಕೊಂಡು ನದಿಯ ವಕ್ಷದ ಮೇಲೆ ತಿರುಗುತ್ತಿರುತ್ತವೆ. ಅವು ಕೆಲವು ದೂರ ಹೋಗುವವು. ಅಷ್ಟು ಹೊತ್ತಿಗೆ ಇತರ ದೋಣಿಗೆ ತಗುಲಿ ಮುಳುಗುವವು. ಇಲ್ಲವೆ ದೀಪ ಗಾಳಿಗೆ ಆರಿ ನಂದಿಹೋಗುವವು ಹಲವರು; ತಮ್ಮ ಜೀವನದ ಭವಿಷ್ಯವನ್ನು ಇದರ ಮೇಲೆ ಊಹಿಸುವರು. ಯಾರ ದೋಣಿ ದೂರ ಹೋಗುವುದೋ ಅವರು ಹೆಚ್ಚು ಕಾಲ ಬದುಕುವಂತೆ ನಿರ್ಧರಿಸುವರು. ಘರ್ಷಣೆಯಾಗದೆ ಮುಂದೆ ತೇಲಿ ಹೋದರೆ ಜೀವನ ಸುಸೂತ್ರವಾಗಿ ಸಾಗುವುದೆಂದು ಭಾವಿಸುವರು...ಭವಜೀವಿಗಳು ಪ್ರಪಂಚದ ಆಶೆನಿರಾಶೆಗಳಲ್ಲಿ ಬೆಂದು ನೊಂದು ಜಗನ್ಮಾತೆಗೆ ತಮ್ಮ ವೇದನೆಯನ್ನು ವಿವರಿಸುವ ಪತ್ರಗಳನ್ನು ಹೊತ್ತು ಸಂಚರಿಸುವಂತೆ ಇದ್ದವು ಆ ತೇಲುವ ಹೂವಿನ ದೋಣಿಗಳ ಸಾಲು.

ಹೀಗೆ ಮಾನವ ಜೀವನದ ಅವಿಭಾಜ್ಯ ಅಂಗವಾಗಿ ದೀಪಜ್ಯೋತಿ ಹುಟ್ಟಿದಂದಿನಿಂದ ಸಾಯುವವರೆಗೆ ಒಂದಲ್ಲ ಒಂದು ರೀತಿಯಲ್ಲಿ ರೂಪದಲ್ಲಿ ಉಪಯೋಗದಲ್ಲಿದೆ. ❁

---

ಮೊದಲ ಬಾರಿಗೆ ಮನೆಗೆ ಬಂದಿದ್ದ ಅತಿಥಿ ಮಹಾಶಯ ರಾತ್ರಿಯಿಡೀ ಗೊರೆ-ಯುತ್ತಿದ್ದುದರಿಂದ ಪಕ್ಕದಲ್ಲಿ ಮಲಗಿದ್ದ ಮನೆಯ ಯಜಮಾನನಿಗೆ ನಿದ್ದೆಯೇ ಬರಲಿಲ್ಲ.

ಬೆಳಿಗ್ಗೆ ಟೀ ಕುಡಿಯುವಾಗ— " ನೀವು ಅದ್ಭುತವಾಗಿ ಗೊರೆಯುತ್ತೀರಿ..." ಎಂದು ಹೇಳಿಯೇ ಬಿಟ್ಟ ನಿದ್ದೆಗೆಟ್ಟ ಯಜಮಾನ.

ಅತಿಥಿ ಮಹಾಶಯ ಅಚ್ಚರಿಯಿಂದ, "ಹೌದೇ? ಮದುವೆಯಾಗಿ ಎಂಟು ವರ್ಷಗಳಾದ್ರೂ ನನ್ನ ಪತ್ನಿ ಈ ಬಗ್ಗೆ ಹೇಳಿಯೇ ಇಲ್ಲವಲ್ಲ " ಎಂದರು.

" ಈ ವರೆಗೆ ಪ್ರೇಮ ಕುರುಡು ಅಂತ ಮಾತ್ರ ಕೇಳಿದ್ದೆ. ಈಗ ತಿಳಿಯಿತು ಅದು ಕಿವುಡು ಕೂಡ " ಎಂದು ಬಿಡಬೇಕೆ ಮನೆಯ ಯಜಮಾನ.

– ಎಚ್. ಎಸ್. ರಾಜಶೇಖರ್

# ಜಯಂತಿ

**ಅಶ್ವತ್ಥ**

ಅವಳು ಮಾನಸೀ ಶರ್ಮರ ಆನಂದ ಕಂದ. ಅವರಿಗೆ ಆವರೆಗಾಗಲೇ ಮಕ್ಕಳಿರಲಿಲ್ಲವೆಂದಲ್ಲ; ಇದ್ದರು. ಇಬ್ಬರು ಪ್ರೌಢೆಯರು, ರೂಪು ಗುಣಗಳಿಂದ ಪ್ರಸಿದ್ಧರು–ಕವಿತಾ, ಆಖ್ಯಾಯಿಕಾ, ಇನ್ನೂ ಇತರರೊಂದಿಗೆ. ಆದರೂ ಶರ್ಮರ ಮನಸ್ಸು ಹಂಬಲಿಸಿತು, ಮತ್ತೂ ಒಂದು ಸತ್ಫಲಕ್ಕಾಗಿ; ಪಟ್ಟು ಬಿಡದೆ ಪಡೆದುಕೊಂಡರು ಶ್ರೀ ಶಾರದೋಪಾಸನೆಯಿಂದ, ಉಹುಂ, ಶಾರದೋಪಾಸನೆಯಿಂದಲೇ ಅವತರಿಸಿದಳು ಜಯಂತಿ.

ಯಾವ ಬೆಳಿಗ್ಗೆಯಾದರೂ ಕನ್ನಡವಾಡದ ಸಾಧನ ಬೀದಿಯಲ್ಲಿ ಎದ್ದು ಕಾಣುತ್ತಿದ್ದ ಆ ಕಬ್ಬಿಣ ಸುತ್ತೇಣಿಯನ್ನು ಕಷ್ಟದಿಂದ ಹತ್ತಿಹೋದರೆ ಅಲ್ಲೇ ಜಯಂತಿಯ ಆಟ ಪಾಟ ಮಾಟ. ವಿಶಾಲ ಕ್ಷೇತ್ರ. ಅಲ್ಲಿ ಕುರ್ಚಿಯಲ್ಲಿ ಶ್ವೇತವಸ್ತ್ರಧಾರಿ, ಧೀರ ಗಂಭೀರ ಶಾಂತ ಸಲ್ಲಕ್ಷಣ ಮುಖಮುದ್ರೆಯ, ಮಿತ ಮೆತು ಮಾತಿನ ವ್ಯಕ್ತಿ ಶರ್ಮರು ಕುಳಿತಿರುತ್ತಿದ್ದರು. ಪುಟ್ಟ ಜಯಂತಿ ಅವರ ಕೊರಳಿಗೆ ತನ್ನ ಮನಮೋಹಕ ತೋಳುರುಳು ಹಾಕಿ ತೊಡೆಯನ್ನಲಂಕರಿಸಿ ಕುಳಿತಿರಬಹುದು. ಇಲ್ಲವೆ ಅವರ ಮುಂದಿನ ಮೇಜಿನ ಮೇಲಿನ ಪತ್ರಾಟಿಕೆಗಳೊಂದಿಗೆ ಆಡುತ್ತಿರಬಹುದು; ಅಥವ ಆ ಕೋಣೆಯ ಕರ್ಮಭೂಮಿಯಲ್ಲಿ ಒಂದು ಕಡೆ ಪೇರಿಸಿಟ್ಟ ಬರಿಯ ಕಾಗದ, ಇನ್ನೊಂದು ಕಡೆಯ ಮುದ್ರಣ ಸಕಲರಣೆಗಳ ಮಧ್ಯೆ ಸಡಗರದಿಂದ ಗುಡುಗಾಡುತ್ತಿರಬಹುದು. ಅವಳ ಅವ್ಯಕ್ತ ಧ್ವನಿಯಲ್ಲಿ ಹಾಡುತ್ತಲೂ ಇರಬಹುದು. ಅದನ್ನೆಲ್ಲ ಕಣ್ಣಿಟ್ಟು ನೋಡುತ್ತಿರುವುದು, ಆಗೀಗ ಅವಳೊಡನೆ ಒಂದೆರಡು ನುಡಿಯಾಡುತ್ತಿರುವುದು, ಅವಳ ಕುರುಳನ್ನು ನೇವರಿಸಿಯೋ ಮುಖವನ್ನು ಒರಸಿಯೋ ಬಟ್ಟೆಯನ್ನು ಹಾಗೆ ಹೀಗೆ ಮಾಡಿಯೋ ಸರಿಮಾಡಿ ಮೈದಡವಿ ಆ ಮರಿ ಆನಂದಕುದನನ್ನು ಮುದ್ದು ಮಾಡುವುದು ತಂದೆಯ ತೃಪ್ತಿ, ಭಾಗ್ಯ.

ನಿಜ, ಇಂದಿನ ಹುಡುಗಿಯರಂತೆ ಬಹು ಬೆಲೆಯ, ಬೆಡಗಿನ, ಬಣ್ಣ ಬಣ್ಣದ ಚಿತ್ರ ವಿಚಿತ್ರ ಉಡುಗೆ ತೊಡುಗೆ ಸಿಂಗಾರಗಳನ್ನು ಅಂದಿನ ಮೂವತ್ತು ನಲವತ್ತು ವರ್ಷದಿಂದ, ಜಯಂತಿ ಕಾಣಳು. ತಂದೆಗೆ ಸಾಧ್ಯವಾಗಿರಲಿಲ್ಲ; ಅದು ಅವರಿಗೊಂದು ಸ್ವಲ್ಪ ಅತೃಪ್ತಿಯಿರಬಹುದು. ಇಲ್ಲದೆಯೂ ಇರಬಹುದು. ಆದರೇನು, ಆ ಸೌಮ್ಯ ಗಂಭೀರ ವಸ್ತ್ರ

ವನ್ನು ಉಟ್ಟು ತೊಟ್ಟು ಅದರೊಳಗೆ ಹೊರಗೆ ಆ ಜಯಂತಿ ಇದ್ದಳಲ್ಲ! ರಸರಸದುಂಬಿದ ಪುಷ್ಟ ಗಟ್ಟಿ, ಸುಂದರ ಅಂಗಸೌಷ್ಠವದ, ಶುಭ್ರವರ್ಣದ ಮಾಟ ಮೈಯಿನ ನಿರಾಭರಣ ಚಿಣ್ಣ ಚೆಲುವೆ! ಸಾಲದೆ, ಇನ್ನೇನು ಬೇಕು?

ಅಂತೆಯೇ ಇಂಥ ಜಯಂತಿ ಅವಳ ಪ್ರಪಂಚ ಪ್ರಿಯೆ. ಹಾಗೆಯೇ ಅವಳು ಕಂಡೆಡೆಯಲ್ಲಿ ಅವಳಿಗಾಗಿ ನೀಡುತ್ತಿದ್ದ ಆದರಾತುರ ಕೈಗಳೆಷ್ಟೋ. ಕೈಯಿಂದ ಕೈಯಿಗೆ, ಮನೆಯಿಂದ ಮನೆಗೆ ಸಾಗುತ್ತಿರುತ್ತಿದ್ದಳು. ಬೇಗ, ಬಹುಬೇಗ, ಈ ಚಿತ್ತಾಕರ್ಷಕ ಜಯಂತಿ ಬೆಳೆಯುತ್ತ ತನ್ನ ಅಕ್ಕಂದಿರಷ್ಟೇ, ಇನ್ನೂ ಹಿರಿದಾಗಿಯೇ, ಆಗಿನ ಆ ಪ್ರಪಂಚದಲ್ಲಿ ಪರಿಚಿತಳಾದಳು, ಪ್ರಖ್ಯಾತಳಾದಳು. ಅವಳು ಓಡಾಡುವೆಡೆ, ಹೋಗುತ್ತಿದ್ದ ಮನೆ ಮನೆ, ಎಲ್ಲೆಲ್ಲಿಯೂ ಪ್ರೀತಿ ಪ್ರಶಂಸೆಯ ಮಾತು ಕೇಳಿಬರುತ್ತಿತ್ತು.

ಶರ್ಮರಿಗೆ ವಿಶೇಷ ಹೆಮ್ಮೆ ಸಂತೋಷ ಈ ಮಗಳ ಬಗ್ಗೆ. ಕವಿತಾ ಆಖ್ಯಾ ಅಕ್ಕಂದಿರ ಕಡೆಯ ಗಮನವನ್ನೂ ಕಡಮೆ ಮಾಡಿ ಜಯಂತಿಯ ಕಡೆಗೇ ಹೆಚ್ಚು ಹೆಚ್ಚಾಗಿ ತಿರುಗಿ ಪಿತೃಶಕ್ತಿ ವಾತ್ಸಲ್ಯಗಳನ್ನು ಬಹಳವಾಗಿ ಇವಳಿಗೇ ಧಾರೆಯೆರೆಯುತ್ತಿದ್ದರು. ತಮ್ಮ ಸಂಸಾರದ ಖರ್ಚಿನಿಂದ ಕಸಿದು ಕಸಿದು ಈ ಕಿಶೋರಿಯ ವಿಶಿಷ್ಟ ಅರೈಕೆ ಪೋಷಣೆಗೆ ಅಂದ ಚೆಂದಕ್ಕೆ ಬಳಸುತ್ತಿದ್ದರು– ಸಂಪಾದನೆಯ ಸಿಂಹಪಾಲು ಅವಳಿಗೋ ಎನ್ನುವ ಅನುಮಾನ ಬರಬಹುದಾದಂತೆ. ಅವಳ ಮೇಲಿನ ಮಮತೆ ಮೋಹ ಅಷ್ಟೊಂದು ಅವರಿಗೆ–ಕೃಷ್ಣನ ಮೇಲೆ ಯಶೋದೆಗಿದ್ದಂತೆ. ಏನೆಲ್ಲ ಪುಷ್ಟ ಉಣಿಸು ಸವಿ ತಿನಿಸು, ಕಂಡ ಕಂಡ ಚಂದದುಡುಗೆ ತೊಡುಗೆ ಅಲಂಕಾರ, ಕಲಿತೆಲ್ಲ ತಿಳಿವಳಿಕೆ ಕಲೆ, ಸೂಕ್ತ ಶಿಕ್ಷಣ ಎಲ್ಲ ಎಲ್ಲದರಿಂದಲೂ ಅವಳು ಸುಲಕ್ಷಣ ಸುಭದ್ರೆಯಾಗಿ ಶೋಭಿಸಬೇಕೆಂದು, ಅಂಥವಳನ್ನು ನೋಡಿ ತಾವು ಸಂತೋಷಿಸಬೇಕೆಂದು, ಕಂಡವರು ಹೆಚ್ಚು ಹೆಚ್ಚು ಮೆಚ್ಚಿಕೊಳ್ಳಬೇಕೆಂದು, ಆಶಿಸುತ್ತಿದ್ದರು, ಶ್ರಮಿಸುತ್ತಿದ್ದರು. ಆ ದೊಡ್ಡ ಕನಸಿಗೆ ಇದ್ದ ಮಿತಿಯೆಂದರೆ ಅದರ ಸೀಮಿತ ಶಕ್ತಿ– ಆರ್ಥಿಕ, ದೈಹಿಕ; ಉಹುಂ, ದೈಹಿಕವೂ ಅಲ್ಲ. ಮುದ್ದು ಮಗಳಿಗಾಗಿ ಸವೆಯಲೂ ಅವರು ಸಿದ್ಧರು.

ಹದಿ ಹರೆಯದ ಹೆಣ್ಣು, ಸರ್ವಾಂಗ ಸುಂದರಿ ತಿದ್ದಿದ ರೂಪಿಗೆ ಮೆರುಗು ಕೊಟ್ಟು, ಶುಭ್ರ ಸರಳ ವಸ್ತ್ರವನ್ನೇ ಅಚ್ಚುಕಟ್ಟಾಗಿ ಆಕರ್ಷಕವಾಗಿ ಬಿಗಿಯುಟ್ಟು ತೊಟ್ಟು, ಇದ್ದ ಆಭರಣಗಳಿಂದಲೇ ದೊಡ್ಡ ಆಭರಣವಾಗಿ, ಹಬ್ಬ ಹರಿದಿನಗಳ ಆರತಕ್ಷತೆಗೆಂಬಂತೆ ಪರಿಚಿತ ಮನೆಗೆಗಳಿಗೆ ಹೋದಾಗ ಅವಳಿಗೆ ಸಂಭ್ರಮದ ಸ್ವಾಗತ ಕಾದಿರುತ್ತಿತ್ತು. ಅವಳ ರಂಜನ ಸಂಗಕ್ಕಾಗಿ ನಾನು ತಾನೆಂದು ಮನೆಯವರ ಮೇಲಾಟವಾಗುತ್ತಿತ್ತು. ಜಯಂತಿಗೆ ಮುದ್ದು ಮಕ್ಕಳೆಂದರೆ ಪಂಚಪ್ರಾಣ. ಅವಳ ಮನೆಗೇ ಅವಳನ್ನು ಅರಸಿಕೊಂಡು ಬರುತ್ತಿದ್ದ ಮಕ್ಕಳೆಷ್ಟೋ–ಅಶ್ವ, ಶಾಂತಿನಾಥ, ಯಶವಂತ, ವ್ಯಾಸ ಒಂದೇ ಎರಡೇ ಹೇಳುವುದಕ್ಕೆ? ಅವರ ಕುರುಳು ಬಾಚಿ, ಮೈ ಮುಖ ಒರಸಿ ರೂಪು ತಿದ್ದಿ ತಿಲಕವಿಟ್ಟು, ಉಡುಪು ಸರಿಮಾಡಿ ಸಿದ್ಧವಾಗಿಸಿ ಸೊಂಟದಲ್ಲೊಂದು ಕೈಯಲ್ಲೊಂದು, ಅಕ್ಕಪಕ್ಕ ಹಿಂದೆ ಮುಂದೆ ಇನ್ನಷ್ಟು, ಹೀಗೆ ಕಟ್ಟಿಕೊಂಡೇ ಅವಳು ಅವರಿವರ ಮನೆಗೆ ಹೋಗುತ್ತಿದ್ದುದು. ಮನೆ ಮನೆಯವರು ಈ ಮಕ್ಕಳನ್ನು ಎತ್ತಿಕೊಂಡು ಮುದ್ದಾಡುತ್ತಿದ್ದರೆ ನೋಡಿ ಹಿಗ್ಗುತ್ತಿದ್ದಳು. ಗೆಳತಿಯರು– ಜೀವಿ ಕಸ್ತೂರಿ– ಯಾರಾದರೂ "ಇದೇನೆ ಜಯಂತಿ, ನಿನಗಾಗಲೆ ಇಷ್ಟು ಮಕ್ಕಳು!" ಎಂದು ಛೇಡಿಸಿದಾಗ ಅವಳು ನಸುನಗುತ್ತ, "ಹೌದು, ನಾನು ನೂರು ವರ್ಷ ಬಾಳಬೇಕು ನನಗೆ ಸಾವಿರ ಮಕ್ಕಳು ಬೇಕು! ಅವೇ ನನ್ನ ಅಂಗಾಂಗಗಳು, ಆಭರಣಗಳು" ಎಂದು ಧೈರ್ಯವಾಗಿ ಹೇಳುತ್ತಿದ್ದಳು. ಅವರು "ಅಯ್ಯೋ, ನಿನ್ನ ಆಸೆಯೇ! ಅದು ಎಷ್ಟು ತುಂಬಿಕೊಂಡಿದ್ದೀಯೆ ಆ ಎದೇಲೀ!" ಎನ್ನುತ್ತಿದ್ದರು. ಜಯಂತಿಯ ಈ ಹಂಬಲವನ್ನು ಕೇಳಿದ ಕೆಲವರು ಹಿರಿಯರು "ಹಾಗೇ ಆಗಲಮ್ಮ–ಸಂಪತ್ತಿನ ಸಂಸಾರ, ಮನೆ ತುಂಬ ಮಕ್ಕಳು– ನಂದಗೋಕುಲ" ಎಂದು ಹರಸುತ್ತಿದ್ದರು. ಅವಳ ಪ್ರಪಂಚವವರೆಲ್ಲರೂ ಅವಳ ದೀರ್ಘ ಆಯಸ್ಸು, ಪೂರ್ಣ ಚೈತನ್ಯ, ವೃದ್ಧಿ

ಸುವ ಸೌಂದರ್ಯ, ವಿಶಿಷ್ಟ ಸೌಭಾಗ್ಯ, ಸಮೃದ್ಧ ಸಂತಾನಗಳನ್ನು ಸಹಜವಾಗಿಯೇ ಬಯಸುತ್ತಿದ್ದರು, ನಿರೀಕ್ಷಿಸುತ್ತಿದ್ದರು.

೨

ಆದರೆ... ಹೊರಗೆ ನೋಡುತ್ತಿದ್ದವರಿಗೆ ಕಾಣದ ಕೊರತೆಯೊಂದು, ಬಣ್ಣ ಬಣ್ಣದ ಮೆರಮೆರಗುವ ಮಧುರ ಹಣ್ಣನ್ನು ಒಳಗೊಳಗೇ ತಿನ್ನುತ್ತ ಕೊರೆಯುವ ಹುಳುವಿನಂತೆ ಅವಳನ್ನು ಕಾಡಿಸುತ್ತಿತ್ತು. ಅದು ಅಪ್ಪ ಒಬ್ಬರಿಗೇ ಗೊತ್ತು. ಅವರು ಗುರ್ತಿಸಿದ್ದರು– ಪದೇ ಪದೇ ಬರುತ್ತಲೇ ಇದ್ದ ಸಣ್ಣ ಪುಟ್ಟ ಕಾಹಿಲೆಗಳಿಂದ, ಕ್ರಮೇಣ ಕುಂದುತ್ತಿದ್ದ ಅವಳ ಶಕ್ತಿಯಿಂದ, ಆಗಾಗ ಅವಳು ಅನುಭವಿಸುತ್ತಿದ್ದ ನೋವಿನಿಂದ. ಅವರು ಆಗಲೇ ಬಡವಾಗಿದ್ದ ಸಂಸಾರವನ್ನು ಇನ್ನಷ್ಟು ವಂಚಿಸಿ ಪೋಷಕ ಮಗಳಿಗೆ ಪೋಷಣೆಯ ಆಹಾರಗಳನ್ನು ಹೆಚ್ಚಿಸಿದರು, ಶಕ್ತಿ ವರ್ಧಕಗಳನ್ನು ಕೊಡಿಸಿದರು; ನೋವಿನ ನಿವಾರಣೆಗೆ ಔಷಧಿಗಳೂ ಆಗುತ್ತಿದ್ದುವು. ತಾತ್ಕಾಲಿಕವಾಗಿ ಜಯಂತಿ ಚೇತರಿಸಿಕೊಳ್ಳುತ್ತ ಎಂದಿನಂತೆಯೇ ಕಾಣುತ್ತಿದ್ದಳು. ಆರೈಕೆ ಔಷಧಿಗಳ ವೆಚ್ಚ ಹೆಚ್ಚುತ್ತಲೇ ಇತ್ತು. ಶರ್ಮರು 'ಈ ಬಡಪಾಯಿ ಮಗು, ನೂರು ಎಸೆದು ಸಾವಿರ ಬಾಚಿಕೊಳ್ಳುವ ಹಣವಂತ ಸಂಸಾರದಲ್ಲಿರಬೇಕಾಗಿತ್ತು, ಪಾಪ!' ಎಂದು ಮರುಗುತ್ತಿದ್ದರು. ಮರು ಕ್ಷಣದಲ್ಲಿ 'ಏನು, ನನ್ನ ಜಯಂತಿ, ಮಮತೆಯ ಮುದ್ದು, ಮಗು, ಇನ್ನೊಬ್ಬರ ಮನೆಯಲ್ಲಿ...! ಛಿ, ಆ ಯೋಚನೆ ಹಾಳಾಗಲಿ! ಅವಳನ್ನು ಬೆಳೆಸುವುದು ಅವರಿಗೇನು ಗೊತ್ತು, ಉಳ್ಳಾಗಡ್ಡೆ ಅಲೂಗಡ್ಡೆ ಮೆಣಸಿನಕಾಯಿ ಸೇಂಗಾಯಿ ಆಗಿಹೋಗುತ್ತಾಳೆ– ನನ್ನ ಮಂದಾರ ಕಲ್ಪ ಫಲ. ಆಗದು, ಆಗದು, ಎಂದಿಗೂ. ಇಷ್ಟಕ್ಕೂ ನಾನಾದರೂ ಅವಳನ್ನು ಬಿಟ್ಟುಕೊಡಬಲ್ಲೆನೆ, ಎಂಥವರಿಗೇ ಆಗಲಿ? ಉಹುಂ, ಸಾಧ್ಯವೇ ಇಲ್ಲ' ಅಂದುಕೊಳ್ಳುತ್ತ ಸುಮ್ಮನಾಗುತ್ತಿದ್ದರು. ಇಂಥ ಗಳಿಗೆಗಳಲ್ಲಂತೂ ಅವರ ಜಯಂತಿ ಪ್ರೀತಿ ಉತ್ಕಟಾವಸ್ಥೆಗೇರಿ ಬಿಡುತ್ತಿತ್ತು; ಎದೆ ಮೆತ್ತಗಾಗಿ ಹೋಗುತ್ತಿತ್ತು; ಗಂಡು ಕಣ್ಣು ಹೆಣ್ಣಾಗಿ ತೇವಗೊಳ್ಳುತ್ತಿತ್ತು.

ಜಯಂತಿಯ ಸ್ಥಿತಿ ಯಾವ ಪೋಷಣೆ ಚಿಕಿತ್ಸೆಗಳಿಂದಲೂ ಸುಧಾರಿಸದೆ ಅದು ಅಸಾಮಾನ್ಯವೆಂದು ಕಂಡಾಗ ತಜ್ಞ ಪರೀಕ್ಷೆಯಿಂದ ಅವಳು ರಕ್ತಾರ್ಬುದದಿಂದ ನರಳುತ್ತಿದ್ದಳೆಂದೂ ಅದು ಉಲ್ಬಣಾವಸ್ಥೆಗೆ ಬರುತ್ತಿದೆಯೆಂದೂ ಸ್ಥಿರಪಟ್ಟಿತ್ತು; ಬಹಳ ಹಣ ಬೇಕಾಗುತ್ತದೆಯೆಂದು ತಿಳಿದುಬಂದಿತು. ಕ್ಷಣ ಕಾಲ ಎದೆಗೆಟ್ಟ ತಂದೆ ಬೇಗ ಸಾವರಿಸಿಕೊಂಡು ಕಾರ್ಯೋನ್ಮುಖರಾದರು. ಸಂಸಾರವನ್ನು ಇನ್ನು ಹೆಚ್ಚು ವಂಚಿಸುವುದು ಸಾಧ್ಯವಿಲ್ಲದೆ, ಋಣವನ್ನೇ ಕಂಡಿರದಿದ್ದ ಸೆಡಕಿನ ಶರ್ಮರು ಮಮತೆಯ ಮಗಳನ್ನು ಉಳಿಸಿಕೊಳ್ಳುವುದಕ್ಕೆ ಅನಿವಾರ್ಯವಾಗಿ ನಿರ್ಧರಿಸಿ ಸಾಲಮಾಡಲಾರಂಭಿಸಿದರು. ಜಯಂತಿಗೆ ಯಾವುದಕ್ಕೂ ಕೊರತೆ ಮಾಡಲಿಲ್ಲ.

ಈಗ ಋಣರೋಗ ಯುದ್ಧ, ರಾಜಯುದ್ಧ ನಡೆಯುತ್ತಿತ್ತು. ನಿರಂತರ ಘರ್ಷಣಯುದ್ಧ; ಅಪ್ಪನ ಸಾಲ ಸಾಲ ಸಾಲ, ಮಗಳ ಒಳನೋವು ನೋವು ನೋವುಗಳ ಮಧ್ಯೆ. ಸಾಲ ಏರೇರುತ್ತ ಹೊರಲಾರದ ಭಾರವಾಗುತ್ತಿತ್ತು; ಅರ್ಬುದ ಅಳಿಯುವ ಬದಲು ಇನ್ನೂ ಪ್ರಬಲವಾಗುತ್ತ ಹೋಯಿತು. ಎಂದಿನಿಂದಲೂ ಹಂಗರಿಯದೆ ತಲೆಯೆತ್ತಿ ತಿರುಗುತ್ತಿದ್ದ ಶರ್ಮರು ಈಗ ಸಿಕ್ಕ ಸಿಕ್ಕವರೊಡನೆ ಋಣಭಾರದಿಂದ ತಗ್ಗಿ ಬಗ್ಗಿ ನಡೆಯುತ್ತಿದ್ದರು. ಇನ್ನೂ ಎಂದಿನಂತೆಯೇ ಓಡಾಡುತ್ತಿದ್ದ ಜಯಂತಿ ಎಂದಾದರೂ ಹಾಸಿಗೆ ಹಿಡಿಯಬಹುದೆನ್ನುವಂತಿದ್ದಳು.

"ಹೀಗೆ ಸಾಲ ಮಾಡುತ್ತಿದ್ದರೆ ಹೇಗೆ, ಅಪ್ಪಯ್ಯ?" ಜಯಂತಿ ತನ್ನ ನೋವನ್ನೂ ನುಂಗಿಕೊಂಡು ಮೃದುವಾಗಿ ಪ್ರೀತಿ ಕನಿಕರಗಳ ಸ್ವರದಲ್ಲಿ ಕೇಳಿದಳು.

"ಏನಂದೆಯಮ್ಮ ಮಗು?" ಶರ್ಮರು ಅವಳ ಅನಿರೀಕ್ಷಿತ ಪ್ರಶ್ನೆಯಿಂದ ಅವಾಕ್ಕಾದರು. "ಇನ್ನೇನು ಮಾಡಲಿ ಚಿನ್ನ?" ಚೇತರಿಸಿಕೊಂಡು ವಿಷಾದದಿಂದ ನುಡಿದರು.

"ಹೇಗೆ ತೀರಿಸೋದು ಅಪ್ಪಯ್ಯ?"

ಶರ್ಮರಿಗೆ ಉತ್ತರ ಹೊಳೆಯಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದರು. "ನೋಡೋಣಮ್ಮ,

ಹೇಗಾದರೂ ಮಾಡೋಣ, ಮಾಡಿದರಾಯಿತು" ನಿಟ್ಟುಸಿರುಬಿಡುತ್ತ ಹೇಳಿದರು. "ನೀನು ಅದನ್ನೆಲ್ಲ ಮನಸ್ಸಿಗೆ ಹಚ್ಚಿಕೋಬೇಡಮ್ಮ. ಮೊದಲು ನೀನು ಹುಷಾರಾಗು ಎಂದಿನಂತೆ, ಅನಂತರ..."

"ಅದು ಸಾಧ್ಯವೆ ಅಪ್ಪಯ್ಯ? ಏನು ಪ್ರಯೋಜನ..."

"ಹಾಗೆಂದರೇನಮ್ಮ, ನೀನಿರುವುದು ನಡೆದಾಡುತ್ತಿರುವುದು ಸ್ವಲ್ಪ ಸಮಾಧಾನವೆ ಸಂತೋಷವೆ ನನಗೆ. ನಮ್ಮ ಈ ಪ್ರಪಂಚಕ್ಕೆ? ಇದಕ್ಕಿಂತ ಹೆಚ್ಚಿನ ಪ್ರಯೋಜನ ಏನಾಗಬೇಕು?"

"ಹಾಗಲ್ಲ ಅಪ್ಪಯ್ಯ... ನೋಡಿ, ನಿಮಗೆ ಅಮ್ಮನಿಗೆ ಅಕ್ಕಂದಿರು ಅಣ್ಣಂದಿರು ಒಟ್ಟು ಸಂಸಾರಕ್ಕೇ.ಅದರಲ್ಲಿಯೂ ವಿಶೇಷವಾಗಿ ನಿಮಗೆ ನನ್ನಿಂದ ಎಷ್ಟೊಂದು ಕಷ್ಟ ಕಾರ್ಪಣ್ಯ..."

"ಏನಿಲ್ಲ ಏನಿಲ್ಲ, ಹಾಗೆಂದುಕೊಳ್ಳಲೇಬೇಡ. ನನ್ನ ಕಂದ. ನನ್ನ–ನಮ್ಮ ಹೊಟ್ಟೆ, ಹೆತ್ತ ಹೊಟ್ಟೆ, ಉರಿದುಹೋಗುತ್ತದೆ ಅಮ್ಮಯ್ಯ," ಶರ್ಮರು ಆತುರ ಉದ್ವೇಗಗಳಿಂದ ಹೇಳಿದರು.

ಸ್ವಲ್ಪ ಹೊತ್ತು ಇಬ್ಬರೂ ಮಾತಾಡಲಿಲ್ಲ, ಅವರಿಗೆ ಮಾತಾಡಲಾಗಲಿಲ್ಲ.

"ಅಪ್ಪಯ್ಯ..." ನಿಧಾನವಾಗಿ ಜಯಂತಿ ಮತ್ತೆ ಮಾತನ್ನು ಮುಂದುವರಿಸಿದಳು. "ನಿಮ್ಮ ಪ್ರೀತಿ ನನಗೆ ಗೊತ್ತು ಅಪ್ಪಯ್ಯ... ನನ್ನ ಮೇಲೆ ನನಗೂ ಪ್ರೀತಿಯಿದೆ, ಇಲ್ಲ ಅಂದುಕೊಂಡಿರಾ? ಹಾಗೆಂದು ನಾನಾದರೂ ಎಲ್ಲವನ್ನೂ ಪರಿಗಣಿಸದೆ ಇರೋದು ಹೇಗೆ? ಅದಕ್ಕೆ ನಾನು ಹೇಳೋದು. ದಯವಿಟ್ಟು ಸ್ವಲ್ಪ ಕೇಳಿ ಅಪ್ಪಯ್ಯ..."

"ಏನಮ್ಮ ಕೇಳೋದು ಅದೂ?" ಕೊಂಚ ಅಸಹನೆ ಬೆರೆತ ಧ್ವನಿ ಮಾತು.

"ಅಪಯ್ಯ... ಅಪ್ಪಯ್ಯ... ತಪ್ಪು ತಿಳಿದುಕೋಬೇಡಿ... ವಿಚಾರ ಮಾಡಿನೋಡಿ. ಬೇಡಿಕೋತೀನಿ... ಇದು ವಾಸಿಯಾಗೋದಲ್ಲ ಈ ರಿಕ್ತಾರ್ಬುದ ಕಾಹಿಲೆ... ಎಷ್ಟು ದಿನ ಇರಿಸುತ್ತದೋ ಅಷ್ಟೇ... ನಿಮಗೂ ಅದು ಗೊತ್ತೇ ಇದೆ..."

"ಹಾಗಾದರೆ? ಏನು ಮಾಡು ಅಂತೀಯ? ವಿಷ ಕೊಟ್ಟುಬಿಡು ಅಂತೀಯೇನು ನನಗೆ?" ಪ್ರೀತಿ ಕೋಪ, ದಯಾ ಕ್ರೌರ್ಯದಿಂದ ಬಂದಿತು, ಅಪ್ಪಯ್ಯನ ಕಠಿಣ ಮಾತು.

"ಹಾಗಲ್ಲ ಅಪ್ಪಯ್ಯ, ಖಂಡಿತ ಹಾಗಲ್ಲ..."

"ಮತ್ತೇನಮ್ಮಾ ಮತ್ತೇನಮ್ಮಾ?" ಆರ್ದ್ರರಾಗಿ ಕೂಗಿಕೊಂಡರು.

"ಹೇಳಲೆ ಅಪ್ಪಯ್ಯಾ?"

ಶರ್ಮರು ಮೌನವಾಗಿದ್ದರು. ಅದನ್ನೇ ಅವಳು ಒಪ್ಪಿಗೆಯೆಂದು ಭಾವಿಸಿ ಬಳಸಿಕೊಂಡಳು.

"ನಾನು ಹೇಳೋದು... ಹೇಳೋದು...ಏನು ಅಂದ್ರೆ... ಈ ಸಾಲ ಖರ್ಚು ನಿಲ್ಲಿಸಿಬಿಡೋಣ ಅಪ್ಪಯ್ಯ..."

"ಆಮೇಲೆ?"

"ಆದಂತೆ..."

"ಏನಂದೇ!"

"ಹೌದು ಅಪ್ಪಯ್ಯ... ಆದಂತೆ ಆಗಲಿ, ಆಗಿಹೋಗಲಿ."

"ಅಯ್ಯೋ ಅಯ್ಯೋ..." ತಟ್ಟನೆ ಎದ್ದು ನಿಂತರು ತಂದೆ. "ಅದೂ ವಿಷ ಕೊಟ್ಟ ಹಾಗೇ–ಇನ್ನೂ ಕೇಡು... ನರಳಿ ನರಳಿ... ಉಹುಂ ಉಹುಂ ಏನು ಮಾತಾಡ್ತೀಯಾ ಕಂದಾ? ನನಗೆ ಹೇಗಾಗ್ತಾ ಇದೆ ಗೊತ್ತೆ? ಆಗದು ಆಗದು. ಅಂಥ ಮಾತು ಆಡಲೇಬೇಡ. ಕಿವಿಗೆ ಕಾಯ್ದ ಸೀಸ ಸುರಿದ ಹಾಗೆ..."

"ನನಗೆಲ್ಲ ಗೊತ್ತು ಅಪ್ಪಯ್ಯ– ನಿಮಗೆ ಹೇಗಾಗುತ್ತೆ ಅಂತ. ನಿಮ್ಮ ಪ್ರೀತಿ, ಮೋಹ ಎಷ್ಟು ಅಂತ ನನಗೆ ತಿಳಿಯದೆ?"

"ಮತ್ತೆ?"

"ಬೇರೆ ದಾರಿಯಿಲ್ಲ ಅಪ್ಪಯ್ಯ, ನಿಮ್ಮ–ನಿಮ್ಮಗಳ ಸಂಕಟಕ್ಕೆ, ನನ್ನ ಸಂಕಟಕ್ಕೂ..."

"ಕೇಳಲಾರೆ ಕೇಳಲಾರೆ, ಸಾಕುಮಾಡಮ್ಮಾ..." ತಗ್ಗಿದ ಸ್ವರದಲ್ಲಿ, ಕಟ್ಟಿದ ಧ್ವನಿಯಲ್ಲಿ, ಕೂಗಿಕೊಳ್ಳುತ್ತ ಹೊರಟೇ ಹೋದರು, ಜಾಗ ತೊರೆದು, ಹೋಗಿ ನಿಂತರು ದಿಕ್ಕು ಕೆಟ್ಟು.

ಅವಳು ಸುಮ್ಮನಾದಳು–ಒಂದು ಕ್ಷಣ. ಮರುಕ್ಷಣದಲ್ಲಿ ದುಃಖ ಉಮ್ಮಳಿಸಿ ಬಂದಿತು. ಬಿಕ್ಕಳಿಸಿದಳು.

ಕೇಳುತ್ತಲೇ ಓಡಿ ಬಂದರು ತಂದೆ. ಮೌನವಾಗಿ ಅವಳನ್ನು ತೋಳುಗಳಿಂದ ಬಳಸಿಕೊಂಡರು–ಅವಳನ್ನು ರಕ್ಷಿಸಿಕೊಳ್ಳುವಂತೆ. ಮೆಲ್ಲಗೆ ಒಂದು ಕೈ ಮೇಲೆ

ಹೋಗಿ ಅವಳ ತಲೆಯನ್ನು ನೇವರಿಸಿತು. ಒಂದು ಬಿಸಿಯ ಹನಿ ಬಿದ್ದು ಅವಳ ಕೆನ್ನೆಯ ಕಣ್ಣೀರಿನೊಂದಿಗೆ ಬೆರೆಯಿತು.

"ಇನ್ನು—ನನ್ನ ಕಂದ— ಇನ್ನು ಮೇಲೆ ಅಂಥ ಮಾತು ಒಂದನ್ನೂ ಆಡಬೇಡ. ಆಡಲೇಬೇಡ, ಹಾಗೂ, ನಾನು ಸೈರಿಸಲಾರೆ, ಸೈರಿಸಲಾರೆ" ಬೇಡಿಕೊಳ್ಳುತ್ತ ಹೇಳಿದರು.

ಇಬ್ಬರೂ ಮುಂದೆ ಮಾತಾಡಲಿಲ್ಲ—ಆಗ.

ದಿನಗಳು ತೆವಳಿಕೊಂಡು ಹೋಗುತ್ತಿದ್ದುವು.

ಈಗ ಸಾಲ ಸಿಕ್ಕುವುದು ಸುಲಭವಾಗಿರಲಿಲ್ಲ, ಶ್ರಮಸಾಧ್ಯವಾಗಿತ್ತು. ಇನ್ನು ಯಾರನ್ನು ಕೇಳಬೇಕು, ಯಾರಿಗೆ ಕೈಯೊಡ್ಡಬೇಕೆಂಬುದು ಹೊಳೆಯೊಲ್ಲದ ಕಾಲ ಬೇಗ ಬೇಗ ಬರುತ್ತಿತ್ತು. ಹಿಂದಿನ ಸಾಲದ ಹೊರೆ ತೀರಿರಲಿಲ್ಲ; ಅಷ್ಟೇ ಅಲ್ಲ, ಮುಂದೆ ದೊಡ್ಡದಾಗುತ್ತಿತ್ತು, ತಿಟ್ಟಾಗಿದ್ದದ್ದು ದಿಣ್ಣೆಯಾಗಿ ದಿಣ್ಣೆಯಾಗಿದ್ದದ್ದು ಗುಡ್ಡವಾಗಿ, ಗುಡ್ಡವಾಗಿದ್ದದ್ದು ಬೆಟ್ಟವಾಗಿ, ಬೆಟ್ಟವಾಗಿದ್ದದ್ದು ಪರ್ವತವಾಗಿ—ಹಿಮಾಲಯ ಪರ್ವತ. ಸಾಲ ತೀರಲಿ ಬಿಡಲಿ. ಸಾಲ ಹುಟ್ಟುವುದು ಕಷ್ಟವಾಗಲಿ, ಹುಟ್ಟಿದ ಸಾಲ ಸಾಲದಿರಲಿ, ಜಯಂತಿಯ ಖರ್ಚು ಕಡಿಮೆಯಾಗುವಂತಿರಲಿಲ್ಲ; ಯಾಕೆ, ಹೆಚ್ಚಾಗುತ್ತಿರಲೇಬೇಕಾಗುತ್ತಿತ್ತು, ಆ ವ್ರಣಾರ್ಬುದದ ಉಲ್ಬಣಗೊಳ್ಳುತ್ತಿದ್ದಂತೆ. ತಾವೇ, ಆತಂಕದಿಂದ ದಣಿವಿನಿಂದ ಬಡಕಲಾದ ತಂದೆ, ದಿನೇ ದಿನೇ ಸಂಸಾರದ ಕಾರ್ಪಣ್ಯ ಹೆಚ್ಚುತ್ತಿದ್ದುದನ್ನು ಕಡೆಗಣಿಸುತ್ತ, ಮುದ್ದು ಮಗಳ ನೋವನ್ನು ನುಂಗುತ್ತ, ನುಂಗಿಸುತ್ತ, ಅವಳಂತೂ ಬಡಕಲಾಗದಂತೆ ತಮ್ಮ ಶಕ್ತಿಯನ್ನೆಲ್ಲ ಅವಳಿಗೆ ಧಾರೆಯೆರೆದು. ನೆರವಾಗಿ, ನಡೆದಾಡುತ್ತಿರುವಂತೆ ನೋಡಿಕೊಳ್ಳುತ್ತಿದ್ದರು. ಶಕ್ತಿ ಮೀರಿ ಲಾಲಿಸಿ ಪಾಲಿಸಿ ಪೋಷಿಸಿ ಹುರಿದುಂಬಿಸುತ್ತಿದ್ದ ಅಪ್ಪನ ಪ್ರೀತ್ಯರ್ಥವಾಗಿ ಮಗಳು ತನ್ನನ್ನು ಮರೆಯುತ್ತ ಧೈರ್ಯ ಪ್ರಫುಲ್ಲ ಮುದ್ರೆಯ ಮುಖವಾಡವನ್ನು ಧರಿಸಿ ತಾನೂ ಶಕ್ತಿ ಮೀರಿದ ಚೈತನ್ಯವನ್ನು ತೋರಿಸುತ್ತಿದ್ದಳು, ಎಂದಿನಂತೆಯೇ ಇದ್ದಾಳೇನೋ ಎಂದೆನ್ನಿಸುವಂತೆ.

ಮಗಳ ಮೇಲಿನ ಮೋಹದಿಂದಲೂ, ಪತಿಯ ಮೇಲಿನ ಪ್ರೀತ್ಯಾದರ ಭಕ್ತಿಗಳಿಂದಲೂ ಗೃಹಿಣಿ ಅಮ್ಮ ದಿನದಿನವೂ ಎಡೆಬಿಡದೆ ದುಡಿದು ದುಡಿದು



ಹೊಟ್ಟೆ ಕಟ್ಟಿ ಬಟ್ಟೆ ಕಟ್ಟಿ. ಸಂಸಾರದಲ್ಲಿ ಸಹಕರಿಸಿ ಸಹಕರಿಸಿ ಸವೆದು ಸವೆದು ಮೂಳೆಯಿದ್ದು ಕಣ್ಣೀರಿಳಿದು ರಕ್ತಹೀನತೆಯಿಂದ ದುರ್ಬಲರಾಗಿ, ಬೆನ್ನಟ್ಟಿದ್ದ ಕೆಮ್ಮು ಜ್ವರಾದಿ ರೋಗಕ್ಕೆ ಪಕ್ಕಾಗಿದ್ದರು. ಆದರೆ ದುಡಿಯುತ್ತಿದ್ದರು, ಅನುಭವಿಸುತ್ತಿದ್ದರು–ಸ್ತ್ರೀಸಹಜ ಮಾತೃಸಹಜ ಸತಿಸಮ ಸಹನೆಯಿಂದ, ತುಟಿ ಎರಡು ಮಾಡದೆ. ಅವರ ಬಳೆಸರ ಓಲೆಗಳಷ್ಟೇ ಅಲ್ಲ ಧಾರೆಯ ಪೀತಾಂಬರವೂ ಅಂಗಡಿಯ ಪಾಲಾಗಿದ್ದವು. ಕವಿತಾ ಆಖ್ಯಾಯಿಕಾ ನಿರುತ್ಸಾಹದಿಂದ ಕಂಗೆಟ್ಟು ಮೌನವಾಗಿ ಮೂಲೆ ಹಿಡಿದಿದ್ದರು. ಮಗ, ವ್ಯಾಸಂಗವನ್ನು ಮುಂದುವರಿಸಬೇಕೇ ಬೇಡವೇ ಎಂಬ ಸಮಸ್ಯೆ ಎದ್ದು ಕಾಡುತ್ತಿತ್ತು.

ಕಠಿಣ ಪರೀಕ್ಷೆಗೊಳಗಾಗಿದ್ದ ಶರ್ಮರ ಪಾತ್ರೆ ತುಂಬುತ್ತಿತ್ತು–ಬೈಬಲ್ಲಿನ ಜಾಬ್, ನಮ್ಮ ಹರಿಶ್ಚಂದ್ರ, ಇವರ ಕಥೆ.

ಸಾಲ ಹುಟ್ಟುವುದು ನಿಂತುಹೋಯಿತು. ಸಂಪಾದನೆ ಹೆಚ್ಚುವಂತಿರಲಿಲ್ಲ. ಸಂಸಾರ ಹೇಗಾದರೂ ನಡೆಯಲೇಬೇಕು, ಜಯಂತಿಯನ್ನು ಉಳಿಸಿಕೊಳ್ಳಲೇಬೇಕು.

ದಾರಿಯೇನು?

ಎಂದೂ ಯಾರನ್ನೂ ಒಂದು ಕಾಸು ಕೇಳಿರದಿದ್ದ ನೆಡಕಿನ ಶರ್ಮರು ಜಯಂತಿಯ ತಂದೆಯಾಗಿ ದೈನ್ಯದಿಂದ ಎಲ್ಲೆಲ್ಲಿಯೂ ಸಾಲಕ್ಕೆ ಕೈಯೊಡ್ಡಿ ಹಡೆದು, ಆ ಯತ್ನದಲ್ಲಿಯೂ ಸೋತಿದ್ದರು. ಅವರು ಈಗ ಇನ್ನೂ ಅಲ್ಪ ಸ್ವಲ್ಪ ಇದ್ದ ಬಿಗುಮಾನ ಸಂಕೋಚಗಳನ್ನು ಬಿಗಿ ಮನಸ್ಸಿನಿಂದ ಬದಿಗೊತ್ತಿ ಬಿಟ್ಟು ಬಹಿರಂಗವಾಗಿಯೇ ಆರ್ತರಾಗಿ "ಜಯಂತಿ, ನಿಮಗೆ ಇಷ್ಟೊಂದು ಸಂತಸ ತರುತ್ತಿರುವ ಜಯಂತಿ, ನಿಮ್ಮ ಮೆಚ್ಚಿನ ಮಗು ಜಯಂತಿ, ರಿಕ್ತಾರ್ಬುದ ಯಾತನೆಯನ್ನು ಅನುಭವಿಸುತ್ತಿದ್ದಾಳೆ. ಸಾಯುತ್ತಿದ್ದಾಳೆ; ಬನ್ನಿ! ನೆರವಿಗೆ ಬನ್ನಿ! ಬೇಗ ಬನ್ನಿ! ಕಾಲ ಮೀರುವುದಕ್ಕೆ ಮುಂಚೆ ಬನ್ನಿ! ಉದಾರ ಹಸ್ತದಿಂದ ಮುಂದೆ ಬನ್ನಿ! ಇವಳನ್ನು, ಈ ಬಡಪಾಯಿಯನ್ನು ಉಳಿಸಿಕೊಳ್ಳಿ! ನಿಮಗಾಗಿಯಾದರೂ ಉಳಿಸಿಕೊಳ್ಳಿ, ನಾನು, ನನ್ನ ಸಂಸಾರ, ನಮ್ಮ ತನು ಮನ ಧನ ತೆತ್ತು ಬರಿದಾಗಿದ್ದೇನೆ. ನಾವು ತೀರ ಅಸಹಾಯರಾಗಿಬಿಟ್ಟಿದ್ದೇವೆ; ನೀವೇ ಗತಿ ಮತಿ ಎಲ್ಲವೂ ಜಯಂತಿಗೆ!..." ಎಂದು ಬಗೆ ಬಗೆಯಾಗಿ ಮೊರೆಯಿಟ್ಟರು, ಬಾರಿ ಬಾರಿ ಮೊರೆಯಿಡುತ್ತಲೇ ಇದ್ದರು ಜಯಂತಿ ಪ್ರಪಂಚಕ್ಕೆ. ಆ ಹೆತ್ತ ಹೊಟ್ಟೆಗೆ ಅದೆಷ್ಟು ಸಂಕಟವಾಗಿತ್ತೋ, ಪಾಪ!

ಆ ಪ್ರಪಂಚ ನೋಡುತ್ತಿತ್ತು, ಕೇಳುತ್ತಿತ್ತು.

'ಜಯಂತಿಗೆ ಏನಾಗಿದೆ? ಅಂಥ ಚೆನ್ನಾಗಿ ಇದ್ದಾಳಲ್ಲ, ಇನ್ನೂ? ಓಡಾಡುತ್ತಲೇ ಇದ್ದಾಳಲ್ಲ; ಮನೆಮನೆಗೂ ಬರುತ್ತಿದ್ದಾಳಲ್ಲ; ಎಂದಿನ ಮಂದಹಾಸ ಚೆಲ್ಲುತ್ತಲೇ ಇದ್ದಾಳಲ್ಲ, ಸವಿ ನುಡಿಯನ್ನು ಆಡುತ್ತಲೇ ಇದ್ದಾಳಲ್ಲ? ಈ ತಂದೆಗೆ ಏನಾಗಿದೆ? ಹೀಗೆ ಕೂಗುತ್ತಿದ್ದಾರಲ್ಲ? ರಿಕ್ತಾರ್ಬುದ ಎಂದರೇನು? ರಕ್ತಾರ್ಬುದ ಎಂದು ಕೇಳಿದ್ದೇವೆ. ಅಂಥ ಮಗುವಿಗೆ ರೋಗವೆಂದರೇನು? ಏನೋ ಸುಳ್ಳು ಸುಳ್ಳು ಕಾಹಿಲೆ ಹೇಳುತ್ತಿದ್ದಾರಲ್ಲ? ಶರ್ಮರು ಸ್ವಸ್ಥರಾಗಿದ್ದಾರೆಯೆ? ಅಥವ ಭ್ರಮೆಯೆ? ಇಲ್ಲವೆ ಚಮತ್ಕಾರವೊ? ಅಂಥವರಲ್ಲವಲ್ಲ? ಯಾರಿಗೆ ಗೊತ್ತಪ್ಪ. ಅಂತೂ ನೋಡೋಣ, ತಡೆದು ನೋಡೋಣ–ಹೇಗೆ ಹೇಗೊ ಅಂತ!...' ಎಂದು ಮುಂತಾಗಿ ಆಡಿಕೊಂಡಿತು, ನಂಬಲಾರದ ಪ್ರಪಂಚ. ಶಕ್ತಪ್ರಪಂಚ ಅಲಕ್ಷ್ಯದಿಂದ ಇದ್ದುಬಿಟ್ಟಿತು, ಅದರ ರೀತಿಯಂತೆ.

ಎಷ್ಟೋ ಕಡೆಗಳಿಂದ, ನಂಬಿದವರಿಂದ, ಮರುಗಿದವರಿಂದ ನೆರವು ಬರಲಿಲ್ಲವೆಂದಲ್ಲ, ಬಂದಿತು. ಆದರೆ ಜುಜುಬಿ, ಕೇವಲ ಜುಜುಬಿ, ಅಶಕ್ತರಿಂದ. ಅದೇನು ಆರ್ಥಿಕ ಅಶಕ್ತತೆಯೋ, ಮಾನಸಿಕ ಅಶಕ್ತತೆಯೋ. ಅಂತೂ ಆ ನೆರವು ಒಡಕು ಮಡಕೆಗೆ ಹಾಕಿದ ತೊಟ್ಟು ನೀರು; ಅರ್ಬುದ ರಾವಣನ, ಕುಂಭಕರ್ಣನ, ಹೊಟ್ಟೆಗೆ ಹಾಕಿದ ಅರೆಕಾಸಿನ ಮಜ್ಜಿಗೆ. ಅದೂ ಸ್ವಲ್ಪ ಕಾಲದಲ್ಲೇ ಇಂಗಿಹೋಯಿತು. ಜಯಂತಿಯ ಯಾತನೆ ಮುಂದುವರಿಯುತ್ತಲೇ ಇತ್ತು; ತಂದೆಯ ಸಂಕಟವೂ, ತಾಯಿಯ ಕೊರಗೂ ಕಾಹಿಲೆಯೂ, ಮಕ್ಕಳ ಮಂಕೂ, ಸಂಸಾರದ ಕಷ್ಟವೂ ಅಷ್ಟೇ.

ಇಷ್ಟು ಕಾಲವೂ ರಿಕ್ತಾರ್ಬುದ ಕ್ರಿಮಿ ಕೊರೆಯುತ್ತ ಒಳಗೊಳಗೇ ಟೊಳ್ಳಾಗುತ್ತಿದ್ದ ಜಯಂತಿ ಶರೀರ ಶಕ್ತಿಯಳಿದು ಮಾನಸಿಕ ಶಕ್ತಿಯಿಂದಲೇ ನಿಭಾಯಿಸುವ ಜನರು ಯಾವುದೋ ಒಂದು ಗಳಿಗೆಯಲ್ಲಿ ಇದ್ದಕ್ಕಿದಂತೆಯೇ ಕುಸಿದುಬಿಡು

ವಂತೆ, ಒಂದು ತಿಂಗಳ ಎರಡನೆಯ ವಾರದಲ್ಲಿ ಒಂದು ರಾತ್ರಿ ಮಲಗಿದ್ದವಳು ಬೆಳಿಗ್ಗೆ ಏಳಲಾಗದೆ ಹಾಸಿಗೆ ಹಿಡಿದುಬಿಟ್ಟಳು–ಒಳಗೊಳಗೇ ಎಲ್ಲೆಲ್ಲೂ ಆವರಿಸುತ್ತಿದ್ದ ಅರ್ಬುದ ನರ ಶಕ್ತಿ ಕೇಂದ್ರವನ್ನು ತಲುಪಿ ಕಬಳಿಸಿಬಿಟ್ಟಿದ್ದಂತೆ. ಯಾತನೆಯಿಂದ ಅಪ್ಪಾ ಅಮ್ಮಾ ಎನ್ನುತ್ತ ನರಳುತ್ತಿದ್ದಳು. ಮಗ್ಗುಲಿಗೆ ಮಗ್ಗುಲಿಗ ಹೊರಳುತ್ತಿದ್ದಳು. ಸಂಸಾರವೆಲ್ಲ ಸುತ್ತ ನೆರೆಯಿತು. ಅಪ್ಪ ಅವಳನ್ನು ಅರ್ಧ ಎತ್ತಿ ಎದೆಗೊರಗಿಸಿಕೊಂಡು ಅತ್ತಿತ್ತ ಆಡಿಸುತ್ತ, ತಲೆ ಸವರಿ, ಕೆನ್ನೆ ಸವರಿ, ಗಲ್ಲ ಹಿಡಿದು ಭುಜ ತಟ್ಟುತ್ತ, ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ, 'ಏನಾಗುತ್ತಿದೆಯಮ್ಮಾ?' ಎಂದು ಉತ್ತರವಿರದ ಪ್ರಶ್ನೆ ಕೇಳುತ್ತಿದ್ದರು, 'ಸರಿಯಾಗುತ್ತೆ–ಅಂತ ಅನ್ನಿಸುತ್ತೆ, ಸ್ವಲ್ಪ ತಾಳಿಕೊ ನೋಡೋಣ. ನೀನು ಧೈರ್ಯಶಾಲಿ ಅಲ್ಲವೆ. ಇಲ್ಲದಿದ್ದರೆ ಇಷ್ಟು ದಿನ...' ಎಂದು ಮುಂತಾಗಿ ಹೇಳುತ್ತಿದ್ದರು. ಅಮ್ಮ ಹಾಲು ನೀರು ಉಪಚಾರಕ್ಕಾಗಿ ದಡಬಡನೆ ಓಡಾಡುತ್ತಿದ್ದರು, ಎಡವುತ್ತ ಮುಗ್ಗರಿಸುತ್ತ. ಹುಡುಗ ಔಷಧಿಗಾಗಿ ಹೊರಗೆ ಹೋದ. ಅಕ್ಕಂದಿರು ಪಕ್ಕದಲ್ಲಿ ಕುಳಿತು ಮೂಕ ಗೊಂಬೆಗಳಾಗಿದ್ದರು.

ನೋವು ತಿನ್ನುವ ಗುಳಿಗೆ, ಸಾಲದಿದ್ದರೆ ಇಂಜಕ್ಷನ್, ನಿದ್ದೆ ಗುಳಿಗೆಗಳ ಜೀವನ ಹನ್ನೆರಡು ದಿನಗಳಿಂದ ಸಾಗುತ್ತಿತ್ತು. ನಿದ್ದೆ ಗುಳಿಗೆ, ಜಯಂತಿಗೊಬ್ಬಳಿಗೇ ಅಲ್ಲ, ಅವಳ ಹಾಸಿಗೆಯ ಬಳಿ ಸರದಿಯಲ್ಲಿ ಕಾದಿರುತ್ತಿದ್ದ ಅಪ್ಪ ಅಮ್ಮನಿಗೂ ಬೇಕಾಗುತ್ತಿತ್ತು. ಕಾವಲಿನಿಂದ ಬಿಡುಬಿಡುವಾದಾಗಲೂ ಆತಂಕದಿಂದ ನಿದ್ರೆ ಕೊರಗಿನಿಂದ ನಿದ್ರೆ ಬಾರದಿದ್ದಾಗ. ಹಾಗೆ ನೋಡಿದರೆ ಅದೆಷ್ಟೋ ಕಾಲದಿಂದ ಜಯಂತಿಯ ಬಗ್ಗೆ ಆತಂಕ ಅಪ್ಪನ ನಿದ್ರೆಯನ್ನು ಆಗೀಗ ಕಸಿದುಕೊಳ್ಳುತ್ತಿತ್ತು. ಅವರು ಗುಳಿಗೆಗೆಮರೆ ಹೋಗಲೇಬೇಕಾಗುತ್ತಿತ್ತು; ಕ್ರಮೇಣ ಗುಳಿಗೆಯ ಭಕ್ತರಾಗಿಬಿಟ್ಟಿದ್ದರು.

ಆ ರಾತ್ರಿಯ ಸರಿ ಹೊತ್ತಿನಲ್ಲಿ ಮಗಳು ಅಪ್ಪ ಇಬ್ಬರೇ ಎಚ್ಚರವಾಗಿದ್ದ ಕಾಲ. ಸ್ವಲ್ಪ ಹೊತ್ತಿನ ಹಿಂದೆ ತೆಗೆದುಕೊಂಡಿದ್ದ ಔಷಧಿಯ ಸಹಾಯದಿಂದ ಜಯಂತಿ ತನ್ನ ಯಾತನೆಯನ್ನಷ್ಟು ಒತ್ತಿ ಹಿಡಿದಿದ್ದಳು. ಪೂರ್ತಿಯಾಗಿಯೂ ಅಲ್ಲ; ಕಣ್ಣುಬಿಟ್ಟುಕೊಂಡಿದ್ದಳು; ಅಂಗಾತ ಮಲಗಿದ್ದು ಮೇಲಿನ ಶೂನ್ಯ ಬಲ್ಬ್ ದೀಪವನ್ನು ದಿಟ್ಟಿಸುತ್ತಿದ್ದಳು–ಬಹಳ ಹೊತ್ತು. ಅನಂತರ ಮೆಲ್ಲಗೆ ಕಣ್ಣುಗುಡ್ಡೆಯನ್ನು ಪಕ್ಕಕ್ಕೆ ಸರಿಸಿದಳು; ಅಲ್ಲೇ ಪದ್ಮಾಸನ ತಪೋಭಂಗಿಯಲ್ಲಿ ಕುಳಿತು ತನ್ನಡೆಗೇ ನೋಡುತ್ತಿದ್ದ ತಂದೆಯನ್ನು ಗಮನಿಸಿದಳು.

"ಅಪ್ಪಯ್ಯ..." ಕ್ಷೀಣ ಸ್ವರ.

"ಏನು ಚಿನ್ನ?"

"ಏನೂ ಇಲ್ಲ ಅಪ್ಪಯ್ಯ..." ಮೆಲ್ಲಗೆ ಅವರ ಕಡೆಗೆ ಮಗ್ಗುಲಾಗಿ ಒಂದು ಕೈಯನ್ನು ಅವರ ತೊಡೆಯ ಮೇಲೆ ಇಟ್ಟುಕೊಂಡಳು; ಅವರ ಸೊಂಟದ ಕಡೆಗೆ ಸರಿಸಿದಳು, ಬಳಸಿಕೊಳ್ಳುವಂತೆ; ಕಣ್ಣೆತ್ತಿ ಅವರ ಕಡೆಗೇ ನೋಡುತ್ತಿದ್ದಳು.

"ಹಾಗೇಕೆ ನೋಡುತ್ತಿದೀಯಮ್ಮಾ?...ಏನು ಬೇಕು?... ಹೇಳು."

"ಅಪ್ಪಯ್ಯ,... ನನ್ನನ್ನು ಕೊಂಚ ನಿಮ್ಮ ಎದೆಗೆ ಒರಗಿಸಿಕೋತೀರಾ– ಅವತ್ತು ಮಾಡಿದಂತೆ?"

"ಹುಂ ಹುಂ, ಓಹೋ. ಅದಕ್ಕೆ ಯಾಕೆ ಮಗು ಅಷ್ಟು ಸಂಕೋಚ?... ನಿನ್ನನ್ನು ಎತ್ತಿ ಇಳಿಸಿ ಮಾಡಿದರೆ ತೊಂದರೆ, ನೋವು ಆಗೋದಿಲ್ವೇನಮ್ಮಾ?"

"ಇಲ್ಲ ಅಪ್ಪಯ್ಯ, ...ಆದರೆ ಆಗಲಿ."

ಅವರು ಅವಳ ತಲೆಗೆ ಸೋಂಕದಂತೆ ಹತ್ತಿರವಾಗಿ ಹಾಸಿಗೆಗೆ ಜರುಗಿಕೊಂಡು ಅವಳ ತಲೆ ಭುಜಗಳನ್ನು ಸ್ವಲ್ಪವೇ ಎತ್ತಿ ತಮ್ಮ ಬಲ ತೊಡೆಯನ್ನು ಕೆಳಗೆ ಸರಿಸಿ, ತಲೆಯನ್ನು ತೊಡೆಯ ಮೇಲೆ ಒರಗಿಸಿ ಇಟ್ಟುಕೊಂಡರು; ಇನ್ನೂ ಸ್ವಲ್ಪ ಅವಳನ್ನು ಮೆಲ್ಲಗೆ ಮೇಲೆಳೆದುಕೊಂಡು ಎದೆಗೆ ಒರಗಿಸಿಕೊಂಡರು. ಕ್ಷಣಕಾಲದ ಮೇಲೆ ಅವಳ ಬಲಗೈ ಅವರ ಕೊರಳನ್ನು ಬಳಸಿಕೊಂಡಿತು. ಅನಂತರ ಕೆಳಗಿಳಿದು ಅವರ ಭುಜ ಎದೆಗಳ ಮೇಲಾಡಿ ಸವರಿತು.

"ಏನಮ್ಮ, ಏನಾಗುತ್ತೆಯೋ ಮಗು? ಹೀಗೆ ಯಾಕೆ..." ಅವರು ಅವಳ ಆ ಹಸ್ತದ ಮೇಲೆ ತಮ್ಮ ಹಸ್ತವನ್ನಿಟ್ಟು ಹಿಡಿದುಕೊಳ್ಳುತ್ತ ಕೇಳಿದರು.

ಕೂಡಲೆ ಉತ್ತರ ಬರಲಿಲ್ಲ.

"ಏನೂ ಇಲ್ಲ ಅಪ್ಪಯ್ಯ... ಹಾಗೇ...ಏನೋ

ಆಸೆ ಆಯ್ತು, ಅಷ್ಟೆ– ನಾನು ಮಗು ಆಗಿದ್ದಾಗಿನಿಂದ ಇಂದಿನವರಿಗಿಂದೆಲ್ಲ ಮನಸ್ಸಿಗೆ ಬಂದು..."

"ಓ, ಅಷ್ಟೇನೇ?" ಅವರು ದೀರ್ಘವಾಗಿ ಉಸಿರು ಬಿಟ್ಟರು.

"ಅಪ್ಪಯ್ಯ,... ನನ್ನಿಂದ ನೀವು, ನೀವೆಲ್ಲ, ಏನೇನೆಲ್ಲ ಎಷ್ಟು ಕಾಲದಿಂದ ಎಷ್ಟೊಂದು..." ಅವಳಿಗೆ ಮುಂದೆ ಮಾತು ಹೊರಡಲಿಲ್ಲ.

"ಓ, ಅದೇನು ಬಿಡಮ್ಮ, ಅದೇ ಮಾತಾಡ್ತಾ ಇರ್ತಿಯಲ್ಲ, ಆಡಬೇಡ ಅಂತ ಎಷ್ಟು ಹೇಳಿದರೂ. ಅದು ನಮ್ಮ ನಮ್ಮ ಮಧ್ಯೆ ಆಡೋ ಮಾತೇ– ನಮ್ಮ?...ನಿನ್ನಿಂದ ನಾನು, ನಾವೆಲ್ಲ ಎಷ್ಟೊಂದು ಆನಂದ ಅನುಭವಿಸಿದ್ದೀವಿ ಹೆಮ್ಮೆ ಪಟ್ಟಿದ್ದೀವಿ, ಅದೆಲ್ಲ ನಿನಗೇನು ಗೊತ್ತು ಪಾಪ! ನಾವು ಅದೃಷ್ಟವಂತರು, ತಿಳಿದುಕೊ."

"ಅದೇನೋ ಹೇಗೋ ಗೊತ್ತಿಲ್ಲ ಅಪ್ಪಯ್ಯ. ನಾನು ನನ್ನ ಸ್ಥಿತಿಯಲ್ಲಿ ಹುಟ್ಟಿದ್ದೇ ತಪ್ಪಾಯಿತೇನೋ ಅನ್ನಿಸುತ್ತೆ..."

"ಹೌದು ಕಂದ, ನೀನು ಹೆಚ್ಚು ಸ್ಥಿತಿವಂತರಲ್ಲಿ.."

"ಅಲ್ಲ, ಅಲ್ಲ, ಅದಲ್ಲ ಅಪ್ಪಯ್ಯ, ನಾನು ಹೇಳಿದ್ದು; ನಾನು ನಿಮ್ಮ ಮಗಳಾದದ್ದು, ನನ್ನ ಪುಣ್ಯ, ದೊಡ್ಡ ಪುಣ್ಯ. ನಿಮ್ಮಂಥ ಅಪ್ಪ ನನಗೆ ಬೇರೆಯೆಲ್ಲಿ ಸಿಗುತ್ತಿದ್ದರು; ನಾನು ಹೀಗೆ ಬೆಳೆಯುತ್ತಿದ್ದೆನೆ? ಸಾಧ್ಯವೇ ಇಲ್ಲ. ಆ ಮಾತಲ್ಲ, ಅಲ್ಲವೇ ಅಲ್ಲ... ಈ ಕಾಯಿಲೆಯನ್ನು ಮಾತ್ರ ಅನುಭವಿಸೋದು ಇರದಿದ್ದರೆ ಅಂತ."

"ಹೌದಮ್ಮ, ಆಹಾ ಹಾಗಾಗಿದ್ದರೆ!"

"ನೀವು, ನೀವೆಲ್ಲ, ಅದರಿಂದ ಕಷ್ಟ ಅನುಭವಿಸೋದು ಬಿಡೋದರ ಮಾತು ಆಡದಿದ್ದರೂ, ನಾನಂತೂ ಈ ಯಾತನೇನ, ಎಷ್ಟೊಂದು ಕಾಲದಿಂದ ಅನುಭವಿಸ್ತಾ ಇದೀನಲ್ಲ ಅಪ್ಪಯ್ಯ. ಈಚೀಚೆಗಂತೂ ಮರಣಯಾತನೇನೇ..."

"ಅದು ನಿಜ ಅಮ್ಮ. ಅದನ್ನೂ ಇಲ್ಲ ಅಂತ ಹೇಗೆ ತಾನೆ ಹೇಳಲಿ?"

"ಅದಕ್ಕೆ–ಇದಕ್ಕೆ, ಪರಿಹಾರ, ಕೊನೆ ಯಾವಾಗ ಅಪ್ಪಯ್ಯ?"

"ಇದಕ್ಕೆ ಏನು ಹೇಳಲಿ ಮಗು? ತೋಚೋದೇ ಇಲ್ಲ. ಆದ್ರೆ ಸರಿಯಾಗುತ್ತೆ– ಇವತ್ತಲ್ಲ ನಾಳೆ. ಹುಂ, ಖಂಡಿತವಾಗಿ."

"ಅಪ್ಪಯ್ಯ, ನಮ್ಮನ್ನು ನಾವೆ ವಂಚಿಸಿಕೊಂಡಿದ್ದರಿಂದ ಏನಾಗುತ್ತೆ?... ಇಲ್ಲ ಇಲ್ಲ, ಇದು ವಾಸಿ



ಯಾಗೋದಿಲ್ಲ, ಬರಿಯ ಭ್ರಮೆ; ಇಂದು ನಾಳೆ ಅಂತ ಬರಿ ದಿನ ಎಣಿಸೋದು ಅಷ್ಟೆ ಉಳಿದಿರೋದು..."

"ಇಲ್ಲಮ್ಮಾ ಇಲ್ಲ. ಹಾಗೆ ಮಾತಾಡಬೇಡ, ಬೇಡಿಕೋತೀನಿ."

ಅವಳು ಅವರ ಮಾತನ್ನು, ಉದ್ವೇಗವನ್ನು, ಗಮನಕ್ಕೆ ತಂದುಕೊಳ್ಳಲಿಲ್ಲ. ಮಾತನ್ನು ಮುಂದುವರಿಸಿದಳು.

"ಇಂಥ ಜೀವನಾನ, ಜೀವಾನ, ಯಾಕೆ ಹೇಗಾದರೂ ಮುಂದುವರಿಸ್ತಾ ಇರಬೇಕು. ಈ ಮರಣ ಸಂಕಟಾನ ಅನುಭವಿಸ್ತಾ ಇರಬೇಕು? ಏನು ಪ್ರಯೋಜನ? ಯಾರಿಗೆ ಲಾಭ?... ನಿಮ್ಮ. ನಿಮ್ಮೆಲ್ಲರ ವಿಚಾರ ಬಿಟ್ಟರೂ, ನನಗೆ ಸಾಕಾಗಿ ಹೋಗಿದೆ ಅಪ್ಪಯ್ಯ ನಿಜವಾಗಿ, ನಿಮ್ಮಾಣೆ ನನ್ನಾಣೆ..."

"ಜೀವನದಲ್ಲಿ ಏನೇನೋ ಬರುತ್ತೆ ಮಗು. ಈಸಿ ಜಯಿಸಬೇಕಲ್ಲ. ನಿನ್ನ ಹೆಸರು ಜಯಂತಿ. ಮರೆಯಬೇಡ. ಆಗಲಿ, ಬರುವದ್ದೆಲ್ಲ ಬರಲಿ, ಹೋರಾಡೋಣ."

"ಇಲ್ಲ ಅಪ್ಪಯ್ಯ, ನಾನು ಸೋತಿದೀನಿ, ಸಂಪೂರ್ಣವಾಗಿ ಸೋತಿದೀನಿ. ನನ್ನ ಹೆಸರು ಜಯವಲ್ಲ ಈಗ, ಅಪಜಯ. ಸೋಲು. ನೀವೂ ಸೋತೇ ಇದೀರಿ. ನಾವೆಲ್ಲ ದಾರಿ ಕಾಣದಷ್ಟು ಸೋತಿದೀವಿ– ನಾನಂತೂ ಖಂಡಿತವಾಗಿ ದಿನದಿನಕ್ಕೆ ನನ್ನ ಯಾತನೆ ಹೆಚ್ಚು ಹೆಚ್ಚಾಗಿ ದಾರುಣವಾಗ್ತಾ ಇದೆ, ನಾನಿನ್ನು ತಾಳಲಾರೆ ಎನ್ನುವಷ್ಟು. ಒಂದೊಂದು ಬಾರಿ ನೋವು ಬಂದಾಗಲೂ ನನ್ನನ್ನು ಸಾವಿಗೆ ಕೊಂಡೊಯ್ದು ಹಿಂದಕ್ಕೆ ಎಳೆದುಕೊಂಡು ಬರ್‍ತಾ ಇದೆ; ನನ್ನ ಶಕ್ತಿಯನ್ನೆಲ್ಲ ಸೆಳೆದುಕೊಂಡು ಹೋಗ್ತಾ ಇದೆ. ನನಗೆ ಮರಣವೇ ಮಹಾ ಪರಿಹಾರ, ಮಹಾನವಮಿ– ಹಬ್ಬದ ಹಾಗೇ ಅನ್ನಿಸುತ್ತೆ."

"ಛಿ ಛಿ!" ಅವರು ಮಗಳ ಬಾಯಿಯ ಮೇಲೆ ಕೈಯಿಟ್ಟರು. "ಏನು ಮಾತು ಏನು ಮಾತು! ಸುಮ್ಮನಿರು! ನೋವಿನ ಭರದಲ್ಲಿ ಏನೇನೋ..."

"ಇಲ್ಲ, ಇಲ್ಲ ಅಪ್ಪಯ್ಯ. ಇದು ನಿಜವಾದ ವಿಚಾರ. ಕೇಳಿ. ನಂಬಿ."

ತಂದೆ ತಮ್ಮ ತಲೆಯನ್ನು ಪಕ್ಕಕ್ಕೆ ತಿರುಗಿಸಿಕೊಂಡರು– ಅವಳನ್ನು ನೋಡಲಾರದೆ.

"ಅಪ್ಪಯ್ಯ, ನಾನೊಂದು ಹೇಳಲೆ? ಕೇಳಿಕೊಳ್ಳಲೆ? ನಡೆಸಿಕೊಡುತ್ತೀರಾ–ನಿಮ್ಮ ಮಗಳಿಗೆ ಪ್ರೀತಿಯ ಜಯಂತಿಗೆ?..."

ಅಪ್ಪ ಏನೋ ಭಯದಿಂದ ನಡುಗಿದರು.

"ನಿನಗೇನನ್ನು ತಾನೆ ಇಲ್ಲ ಅಂದಿದೀನಿ ಮಗು–ನನ್ನ ಕೈಯಲ್ಲಾದದ್ದನ್ನು? ಆದರೆ ಈಗೇನೂ ಹೇಳಬೇಡ. ಮಾತಾಡಬೇಡ."

ಆದರೆ ಅವಳು ಮಾತನ್ನು ಮುಂದುವರಿಸದಿರಲಿಲ್ಲ.

"ಅಪ್ಪಯ್ಯ. ನೀವು ಹಿಂದೆ ಒಂದು ಸಾರಿ ಹೇಳಿದ್ದು ನೆನಪಿದೆಯೆ–ಈ ವಾಸಿಯಾಗದ ಕಾಯಿಲೆಯ ಮಾತನ್ನು ನಾನು ಆಡಿದಾಗ?"

"ಇ–ಲ್ಲ. ಅದೇನೋ ಹೋಗಲಿಬಿಡು ಮಗು. ಈಗ ಯಾಕೆ ಅದೆಲ್ಲ."

"ನೀವು ಆಗ ಪ್ರೀತಿಯ ಸಿಟ್ಟಿನಿಂದ 'ಹಾಗಾದರೆ? ಏನು ಮಾಡು ಅಂತೀಯ? ವಿಷ ಕೊಟ್ಟು ಬಿಡು ಅಂತೀಯ?' ಅಂತ ಕೇಳಿದಿರಿ."

"ಇರಬಹುದು ಬಿಡು. ಮಾತು ಬರುತ್ತೆ, ಹೋಗುತ್ತೆ. ಯಾವ ಯಾವ ಸಂದರ್ಭದಲ್ಲೋ, ಯಾವ ಯಾವ ರೀತಿಯಲ್ಲೋ, ಅರ್ಥದಲ್ಲೋ. ಅವೆಲ್ಲ ಯಾಕೆ ಈಗ."

"ಈಗ ಅದು ನಿಜವಾಗಿ ಎಂಥ ಪರಿಹಾರ ಅನ್ನಿಸ್ತಾ ಇದೆ."

"ಏನು! ಏನೂ!... ಹುಚ್ಚಮ್ಮ! ಏನು ನಿನ್ನ ಅರ್ಥ? ಸೂಚನೆ? ನಿನ್ನ ನೋವಿನಲ್ಲಿ ನೀನು ನಿಜವಾಗಿಯೂ ಹುಚ್ಚಿಯಾಗಿಬಿಟ್ಟಿದ್ದೀಯೆ. ನಾನು ಎಂಥೋನು ಅಂದುಕೊಂಡಿದ್ದೀಯೆ? ಕೊಲೆಗಾರ ಅಂತಲೆ? ತನ್ನ ಮಗಳಿಗೆ, ತನ್ನ ಮುದ್ದು ಮಗುವಿಗೇ, ನಿನ್ನಂಥ ಮಗುವಿಗೇ, ಎಂಥ ಸ್ಥಿತಿಗತಿಯಲ್ಲೇ ಆಗಲಿ, ಎಂಥ ವಿಚಾರದಿಂದಲೇ ಆಗಲಿ ವಿಷ ಕೊಡಬಲ್ಲ ಕ್ರೂರ ಕೊಲೆಗಾರ ಅಂತಲೇ? ಅಯ್ಯೋ ಅಯ್ಯೋ, ನಿನಗೆ ಹೇಗಾದರೂ ಬಂದಿತಮ್ಮ ಈ ಯೋಚನೆ?" ತಲೆ ಚಚ್ಚಿಕೊಂಡರು.

"ಅಪ್ಪಯ್ಯಾ, ಇದರಲ್ಲಿ ಕ್ರೌರ್ಯ ಎಲ್ಲಿ? ಅದು ಕೃಪೆ, ಮಹತ್ ಕೃಪೆ ನನಗೆ, ಅಪ್ಪಯ್ಯ. ನಿಮಗೂ

ತಿಳಿಯದೆ? ತಿಳಿದಿದೆ, ತಿಳಿದಿದೆ. ಇದು ಕೊಲೆಯೂ ತಾನೆ ಹೇಗೆ? ಈ ನೋವಿನ ಸಾವಿನಿಂದ ನಾನು ಬದುಕಿಕೊಳ್ತೀನಿ. ಈ ಯಾತನೆಯ ನರಕದಿಂದ ನನ್ನನ್ನು ಕಾಪಾಡುತ್ತೀರಿ; ಸುಖದ. ಕಡೆಗೆ ಬಿಡುಗಡೆಯೂ. ಸ್ವರ್ಗಕ್ಕೆ ಸೇರಿಸುತ್ತೀರಿ. ಈವರೆಗೆ ಇಷ್ಟು ವರ್ಷ ಕಾಪಾಡಿದ್ದೂ ಒಂದು ತಾಕಬಾರದೆ ಈಗ ಇದರಿಂದ ಕಾಪಾಡುವುದೇ ಒಂದು ತೂಕ. ನನಗೆ ನಿಮ್ಮಿಂದ ಆಗಬೇಕಾದ, ಆಗಲೇಬೇಕಾದ ಮಹದುಪಕಾರ, ಕಟ್ಟಕಡೆಯ ಮಹದುಪಕಾರ, ಅಪ್ಪಯ್ಯ, ಅಷ್ಟು ಮಾಡಲಾರ, ಅಷ್ಟು ಮಾಡೋದಿಲ್ಲವೆ ನನಗೆ. ನಿಮ್ಮ ಜಯಂತಿಗೆ? ಮಾಡಿಬಿಡಿ ಅಪ್ಪಯ್ಯಾ; ದಮ್ಮಯ್ಯಾ!"

"ಮಗೂ, ಜಯಂತೀ, ನಿನ್ನನ್ನು ಅರ್ಥಮಾಡಿಕೊಳ್ಳಬಲ್ಲೆ, ಅರ್ಥಮಾಡಿಕೊಳ್ಳಬಲ್ಲೆನಮ್ಮಾ!... ನಾನು ಪಾಪಿ. ಮಹಾಪಾಪಿ–ನಿನಗೆ ಜನ್ಮ ಕೊಟ್ಟು ಇಷ್ಟು ಬೆಳೆಸಿ ಈ ಅಂತ್ಯಕ್ಕೆ ತಂದವನು... ಛಿ, ಛೀ, ಕಾಪಾಡಲಾರದ ಕೂಸಿಗಾಗಿ ಹಂಬಲಿಸಿದ ಮಹಾಪಾಪಿ!... ಆದರೆ, ಆಗದಮ್ಮ, ನನ್ನಿಂದ ಆಗದಮ್ಮ, ಹೇಗೆ ಆದೀತು ಹೇಳು. ಮನುಷ್ಯನಾದವನು ನಾನು; ಮರವಾದರೆ ಕಲ್ಲಾದರೆ ಇಂಥಾದ್ದು ಸಾಧ್ಯವಾದೀತು... ಮತ್ತೆ ಈ ಮಾತನ್ನು ಎತ್ತಬೇಡಮ್ಮ, ಎತ್ತಲೇಬೇಡ... ಥೂ ನನ್ನದೆಂಥ ಹಾಳು ಜನ್ಮ!"

ಇಬ್ಬರೂ ಆಗ ಸುಮ್ಮನಾದರು. ಜಯಂತಿ ನರಳಿದಳು, ನರಳುತ್ತಿದ್ದಳು, ಹೆಚ್ಚು ಹೆಚ್ಚು ಸಂಕಟಪಡುತ್ತಿದ್ದಳು.

"ಮಗು..."

"ಏನು ಅಪ್ಪಯ್ಯ? ಬಿಟ್ಟಿರಾ?" ಕಾತರದಿಂದ ಕೇಳಿದಳು.

"ಛೆ, ಅದಲ್ಲ ತಾಯಿ—..."

"ಅಯ್ಯೋ,"

"ಕೊಂಚ ನಿದ್ರೆ ಮಾಡೋದಕ್ಕೆ ಯತ್ನಿಸಮ್ಮ"

"ಹಾಗೆಯೇ ನಿದ್ರೆ ಬಂದೀತೆ ಅಪ್ಪಯ್ಯಾ, ಈ ಯಾತನೆಯಲ್ಲಿ, ಗುಳಿಗೆಯಿಲ್ಲದೆ?"

"ಗುಳಿಗೆ ಕೊಡುತ್ತೀನಮ್ಮಾ... ಇಗೊ."

"ಕೊಡ್ತೀರಾ, ಕೊಡ್ತೀರಾ, ಕೊಡಿ" ಬಾಯಿಯನ್ನು ಅಗಲವಾಗಿ ಬಿಟ್ಟಳು.

ಶರ್ಮರು ದೂರದಲ್ಲಿ ಗೋಡೆಯಂಚಿನಲ್ಲಿದ್ದ ಔಷಧಿ ಸಾಮಾನಿನ ಸೋನೆರಿಲ್ ಮಾತ್ರೆಯ ಡಬ್ಬಿಯನ್ನು ತೆಗೆದು ಕೊಂಡು ಒಂದು ಮಾತ್ರೆಯನ್ನು ಅಂಗೈಯಿಗೆ ಬಗ್ಗಿಸಿ ಬೆರಳಲ್ಲಿ ಹಿಡಿದ ಕೊಂಡರು.

"ಒಂದೆಯೇ?... ಅದರಿಂದ ಏನಾಗುತ್ತೆ ಅಪ್ಪಯ್ಯ? ನಿದ್ರೆ ಹತ್ತೀತೆ? ಬಂದೀತೆ, ಸ್ವಲ್ಪ ಹೊತ್ತಾದರೂ, ನನಗೆ ಬೇಕಾಗಿರೋದು ದೀರ್ಘ ನಿದ್ರೆ. ದೀರ್ಘ ಧೀರ್ಘ ದೀರ್ಘ ನಿದ್ರೆ–ಮತ್ತೆ ಏಳಿಸದಂಥಾದ್ದು. ಅಷ್ಟನ್ನೂ ಡಬ್ಬಿಯದೆಲ್ಲ ಹಾಕಿ ಇಲ್ಲದಿದ್ದರೆ ಬಾಯನ್ನೇ ಬಿಡೋದಿಲ್ಲ." ಬಿಗಿಯಾಗಿ ಮುಚ್ಚಿಕೊಂಡಳು.

"ಎಂಥ ಮಾತೇ ತಾಯಿ! ಹಾಗೆಲ್ಲ ಆಡಬೇಡ ಕಂದ. ತಗೊ ಇನ್ನೊಂದು ನಿದ್ದೆ, ಜೊಂಪಾದರೂ ಹತ್ತುತ್ತೆ. ಎಷ್ಟು ಹೊತ್ತು ಬಂದರೆ, ಹೇಗೆ ಬಂದರೆ ಅಷ್ಟೇ ಸಾಕು. ಹೆಚ್ಚು ಬೇಡ, ಏನು ಅಪಾಯ ಆದೀತೋ?... ನನಗೆ ಭಯ."

"ಅಪಾಯದ, ಭಯದ, ಪ್ರಶ್ನೆಯೆಲ್ಲಿ ಅಪ್ಪಯ್ಯ, ನೀರಿನಲ್ಲಿ ಮುಳುಗಿದೋರಿಗೆ ಮಳೆಯೇನು ಚಳಿಯೇನು ಅನ್ನೋ ಹಾಗೆ?"

"ಸುಮ್ಮನೇ ಈ ಎರಡು ಮಾತ್ರೆ ನುಂಗಮ್ಮ-ಸಾಕು."

"ನೀವು ಬಹಳ ಕಠಿಣ ಅಪ್ಪಯ್ಯ; ಕೊಂಚ ಕರುಣೆ ಕನಿಕರ ತೋರಿಸಿ ಅಪ್ಪಯ್ಯ," ಅವಳು ಬಾಯಿ ಮುಚ್ಚಿಕೊಂಡು ಬಿಟ್ಟಳು. ಕಣ್ಣೀರು ಕೋಡಿ ಹರಿಯಿತು.

ಮೊಂಡ ಹಟದ ಮಗುವನ್ನು ರಮಿಸುವಂತೆ ಅವಳನ್ನು ಮುದ್ದಿಸಿ ಬಾಯಿ ಬಿಡಿಸಿ ಎರಡು ಗುಳಿಗೆ ನುಂಗಿಸುವಲ್ಲಿ ಅಪ್ಪನಿಗೆ ಸಾಕು ಸಾಕಾಯಿತು. ಅಷ್ಟಿಷ್ಟು ಹೊತ್ತಾದ ಮೇಲೆ ಅವಳು ಹಾಗೆಯೇ ತಂದೆಯ ತೊಡೆಯ ಮೇಲೆ ತಲೆಯಿಟ್ಟೇ ಕಣ್ಣು ಮುಚ್ಚಿಕೊಂಡಳು.

ಶರ್ಮರಿಗೆ ಅವಳನ್ನು ಹಾಸಿಗೆ ಸರಿಸಿ, ತಾವು ಹತ್ತಿರದಲ್ಲಿ ಚಾಪೆಯ ಮೇಲೆ ಬಿದ್ದುಕೊಳ್ಳುವ ಯೋಚನೆಯೇ ಬರಲಿಲ್ಲ. ಬೇರೆಯ ಯೋಚನೆ ತಲೆಯಲ್ಲಿ ತಳಮಳ ಕುದಿಯುತ್ತಿತ್ತು. ಅವರು ಹ್ಯಾಮ್‌ಲೆಟ್‌ನಂತಾಗಿದ್ದರು.

'ಅವಳು ಅಂದದ್ದು ಬೇಡಿದ್ದುದು ಸರಿಯೆ?... ಛಿ, ಅದು ಹೇಗೆ ಸರಿಯಾದೀತು ಬುದ್ಧಿಗೆಟ್ಟದ್ದು! ನಾನು ಹೇಳಿದ್ದದ್ದೇ, ಮಾಡಿದ್ದದ್ದೇ ಸರಿ. ಹೌದು ಹೌದು. ಸಂಪೂರ್ಣವಾಗಿ ಸರಿ. ಅದರಲ್ಲಿ ಅನುಮಾನವೇ ಇಲ್ಲ... ಆದರೂ ಅನುಭವಿಸುವವಳು– ಆ ನರಕ ಹಿಂಸೆಯನ್ನು ನಿತ್ಯವೂ ಗಳಿಗೆಗಳಿಗೆಯಲ್ಲೂ ಅನುಭವಿಸುತ್ತಿರುವವಳು ಅವಳಲ್ಲ? ನಾನೇನು ಅನುಭವಿಸುತ್ತಿದ್ದೇಲೆ, ಹೋಲಿಕೆಯಿಂದ–ಎಷ್ಟೇ ಕಷ್ಟ ಕಾರ್ಪಣ್ಯ ಅನಾರೋಗ್ಯ ಏನೇನು ಅಂದುಕೊಂಡರೂ ? ಇಷ್ಟಕ್ಕೂ ಇದು ಮುಖ್ಯವೇ ಅಲ್ಲ. ಇಷ್ಟಾದರೂ ಅವಳನ್ನು ಉಳಿಸಿಕೊಳ್ಳಲಾಗುತ್ತಿಲ್ಲವೆಂಬ ವ್ಯಥೆ ತಪ್ಪುವಂತಿಲ್ಲ... ಹೌದು, ಆ ರಿಕ್ತಾರ್ಬುದದ ಹಿಡಿತದಿಂದ ಅವಳನ್ನು ಪಾರಾಗಿಸುವ ಶಕ್ತಿ ನನಗಿಲ್ಲ; ಅವಳು ಅಂದ ಹಾಗೆಯೇ ದಿನ ಎಣಿಸುವುದಷ್ಟೆ, ಅವಳನ್ನು ನೋಡಿ ಸಂಕಟ ಪಡುತ್ತಿರುವುದಷ್ಟೆ. ಅದರಿಂದ ಅವಳಿಗೆ ಯಾವ ಪರಿಹಾರವೂ ಇಲ್ಲ. ಈ ನಿವಾರಣೆಯಿಲ್ಲದ ಚಿತ್ರಹಿಂಸೆ ಅವಳಿಗೆ, ನಮಗೂ, ಇನ್ನೂ ಎಷ್ಟು ಕಾಲವೊ–ಅವಳೇ ಹೇಳಿದಂತೆ... ಮತ್ತೆ?...ಮತ್ತೆ? ಅವಳ ದೃಷ್ಟಿಯಿಂದ ನೋಡಿದರೆ... ಅದೇ ಮುಖ್ಯ, ಅದೇ ಎಲ್ಲ, ಅಲ್ಲವೆ?... ಅವಳ ಹಿತಕ್ಕಾಗಿಯಾದರೂ– ಹಿತ!... ಅಯ್ಯೋ...ಛಿ ಛೀ, ನಾನೇನು ಯೋಚಿಸುತ್ತಿದ್ದೇನೆ,? ಹೇಗಾದರೂ ಬಂದಿತು ಈ ಯೋಚನೆ!... ಉಹುಂ, ಉಹುಂ, ಬಿಟ್ಟೆ, ಬಿಟ್ಟೆ, ಬಿಟ್ಟು ಬಿಟ್ಟೆ ಅದನ್ನು! ಹೋಗಲಿ, ಹಾಳಾಗಿ ಹೋಗಲಿ, ಅದು! ಮತ್ತೆ ಬರುವಂತಿಲ್ಲ ಅದು, ಕರೆಯುವಂತಿಲ್ಲ ಅದನ್ನು. ಹುಂ...ಹುಂ... ಆ ಬಡಪಾಯಿ ಹಾಗೆ ಅಂಗಲಾಚಿದಳಲ್ಲ ಅವಳಿಗೆ ಹೇಗಾಗುತ್ತಿರಬೇಕು, ಅದನ್ನು ಯಾಚಿಸುವುದಕ್ಕೆ! ಕರುಣೆ–ಕನಿಕರ ಎಂದಳಲ್ಲ! ಹಾಗಲ್ಲ ವಾದಿಸಿದಳಲ್ಲ, ನನ್ನಲ್ಲಿ, ಬುದ್ಧಿಯಲ್ಲಿ ಎದೆಯಲ್ಲಿ, ಅಲ್ಲೋಲ ಕಲ್ಲೋಲ ಎಬ್ಬಿಸಿ ಬಿಟ್ಟಳಲ್ಲ. ಆ ಆ ನೋಡಿದೆಯಾ, ನೋಡಿದೆಯೇ; ಬಂದಿತಲ್ಲ ಮತ್ತೆ ಭೂತ ಪಿಶಾಚಿ ಅದೇ ಪಿಶಾಚಿ ಹೋದ ಬಾಗಿಲಿನಿಂದ ಹೊಡೆದು ಓಡಿಸಿದುದು, ಗವಾಕ್ಷಿಯಿಂದ,... ಅದು ತಾನಾಗಿಯೇ ವೇಗಾಗುತ್ತದೆಯೋ ಹಾಗೆಯೇ ಆಗಲಿ. ಅದಕ್ಕೆ ಕೈ ಹಾಕುವುದರೆಂದರೇನು– ಅಬ್ಬಬ್ಬ!... ನಾನೇ ಜನ್ಮ ಕೊಟ್ಟು ಮುದ್ದಿಸಿ ಬೆಳೆಸಿ, ಹುಂ, ಏನೆಲ್ಲ ಪಾಡು ಪಟ್ಟು, ಸಂಸಾರಕ್ಕೆ, ಪಾಡು ಪಡಿಸಿ, ಇಷ್ಟು ಕಾಲ ಬೆಳೆಸಿದ ನನ್ನ ಜಯಂತಿ ನನ್ನಿಂದಲೇ...ಛಿ, ಆ ಮಾತೇ ಇಲ್ಲ, ಯಾಕೆ... ನಾನು, ನಾವು ಎಷ್ಟೇ ಮಾಡಿದ್ದರೂ, ಈಗ ಅವಳ ಮರಣಯಾತನೆಯನ್ನು ನಾನು ತೆಗೆದುಕೊಳ್ಳಲಾಗುತ್ತಿಲ್ಲವಲ್ಲಾ; ಅದು ಸಾಧ್ಯವಾಗಿದ್ದರೆ! ಅವಳು ಆರೋಗ್ಯದಿಂದಿದ್ದು ನಲಿಯುವುದನ್ನು ನೋಡು ಸಾಧ್ಯವಾಗಿದ್ದರೆ! ... ಅದರ ಬದಲು ಅದಕ್ಕೆ ವಿರುದ್ಧವಾಗಿ ಅವಳು ಸಹಿಸಲಾರದೆ ನರಳುತ್ತಿರುವುದನ್ನು ದಿನದಿನ ಕ್ಷಣಕ್ಷಣಕ್ಕೂ ನೋಡಿ ನೋಡಿ ನೋಡುತ್ತಿರುವುದಾಗಿದೆಯಲ್ಲ, ಸಹಿಸುತಿರುವುದಾಗಿದೆಯಲ್ಲ. ಅಸಹ್ಯ ವೇದನೆಯನ್ನು ಇನ್ನೂ ಇನ್ನೂ ಇನ್ನೂ ಸಹಿಸುತ್ತಲೇ ಇರುವುದು ಹೇಗೆ ಹೇಗೆ ಹೇಗೆ–ಅವಳು, ನಾನು ನಾವು, ಇದಕ್ಕೆ ಕೊನೆ ಎಲ್ಲಿ? ಎಂದು? ಹೇಗೆ?... ಏನು ಮಾಡಲಿ? ಮಾಡಲಿ? ಮಾಡದಿರಲಿ? ಏನೂ ತೋರುವುದೇ ಇಲ್ಲವಲ್ಲಾ– ಈ ದಿಗ್ಭ್ರಮೆ, ಬುದ್ಧಿ ಭ್ರಮೆಯಲ್ಲೀ...!'

ಮಗಳು ಸ್ವಲ್ಪ ಕಣ್ಣು ಮುಚ್ಚಿಕೊಂಡಿದ್ದರೂ ತಂದೆಯ ಕಣ್ಣು ತೆರೆದುಕೊಂಡೇ ಇದ್ದಿತು, ಉರಿಯುತ್ತಿತ್ತು, ಎದೆಯಂತೆಯೇ. ವಿರುದ್ಧ ಯೋಚನೆಗಳ ಭಾವನೆಗಳ ಯುದ್ಧ ನಿರಂತರವಾಗಿ ನಡೆಯುತ್ತಿತ್ತು, ಆಗಲೂ, ಮುಂದಿನ ದಿನಗಳಲ್ಲೂ. ಆ ಅರ್ಥವಿಲ್ಲದ ಅರ್ಬುದ ಯುದ್ಧ, ಈ ಘೋರ ಅಂತರ್ಯುದ್ಧಗಳ ಇಕ್ಕಳದಲ್ಲಿ ಸಿಕ್ಕಿ ಶರ್ಮರು ಒದ್ದಾಡುತ್ತಿದ್ದರು. ಘರ್ಷಣೆಯಲ್ಲಿ ರಕ್ತಜರ್ಜರಿತರಾಗುತ್ತಿದ್ದರು. ಬುದ್ಧಿ ಮುಚ್ಚು ಮುಚ್ಚಾಗುತ್ತಿತ್ತು. ಜಯಂತಿಯ ನೋವು ಅವಳ ಮುಖವನ್ನು ಕಿವಿಚಿ ಹಿಂಡಿ ವಿಕಾರಗೊಳಿಸುತ್ತಿದ್ದ ಗಳಿಗೆಯಲ್ಲಿ ಶರ್ಮರ ಎದೆಯಲ್ಲಿ ಪಪ್ಪು ಗಟ್ಟಿಯಾಗುತಿರುತ್ತಿತ್ತು; ಮರುಗಳಿಗೆಯಲ್ಲಿ ಮಗಳ ಸೌಮ್ಯ, ಮೃದು ಮುದ್ದು ಮುಖಮುದ್ರೆಯ ಬೆಚ್ಚನೆ ಬೆಳಕು ತಂದೆಯನ್ನು ಅಂಗುಷ್ಠದಿಂದ ನೆತ್ತಿಯ ವರೆಗೂ

ಬೆಣ್ಣೆಯ ಬೊಂಬೆಯಂತೆ ಕರಗಿಸಿಬಿಡುತ್ತಿತ್ತು. ಹೀಗಾಗಿ ಅವಳ ಕಡೆಗೆ ನೋಡುವುದಕ್ಕೂ ಅವರಿಗೆ ಹೆದರಿಕೆಯಾಗುತ್ತಿತ್ತು. ಕೆಲವೊಂದು ಸಮಯ ಕಲ್ಲಾಗಿದ್ದೇನೆಂದುಕೊಂಡು ಜಯಂತಿಯ ಕೋಣೆಗೆ ಕಾಲಿಟ್ಟವರು ಹಾವಾಗಿ ಹೊರಟು ಬರುತ್ತಿದ್ದರು.

ಇನ್ನೂ ಕೆಲವು ದಿನಗಳು ಕಳೆದುವು.

ಮತ್ತೊಂದು ಅಪ್ಪನ ಸರದಿಯ ಸರಿರಾತ್ರಿ. ಹಿಂದಿನಂತೆ ಧ್ಯಾನಭಂಗಿಯಲ್ಲಿ ಕುಳಿತಿದ್ದರು.

"ಅಯ್ಯೋ... ಅಪ್ಪಾ!" ಜಯಂತಿಯ ನರಳು ಕೂಗು.

"ಮಗೂ!" ಧ್ಯಾನಮಗ್ನರಾಗಿದ್ದವರು ವಿಮುಖರಾದಂತೆ ಕಣ್ಣು ಬಿಟ್ಟರು.

"ಸಹಿಸಲಾರೆ... ಸಹಿಸಲಾರೆನಪ್ಪಾ... ದೇವರೇ. ನನ್ನಪ್ಪಾ. ನೀನಾದರೂ ಸ್ವಲ್ಪ ದಯೆ ತೋರಿಸಪ್ಪಾ!"

ಅದೇ, ಅದೇ, ಅದೇ–ಬಗೆಯ ಕರೆ, ಮೊರೆ, ಅತ್ತ, ಇತ್ತ, ಇತ್ತ ಅತ್ತ ಹೊರಳಾಟ, ಸೋತ ಮೈ ಮುಖಗಳ ಬೆವರು, ಇಳಿದ ನೀರು, ಅದೇ ಉಪಚಾರ, ಚಿಕಿತ್ಸೆ, ನೋವು ಗುಳಿಗೆ ನುಂಗು–ಏನಾಯಿತೋ ಆಗಲಿಲ್ಲವೋ; ಅವಳು ಸಂಕಟ ಪಡುತ್ತಲೇ ಇದ್ದಳು.

"ಮಗು... ಮಗೂ" ಶರ್ಮರು ಅವಳ ತಲೆಯನ್ನು ಸವರಿದರು, ಮುಖವನ್ನು ಒರೆಸಿದರು.

"ಅಪ್ಪಾ–ಯ್ಯಾ... ಅಪ್ಪಾ... ಯ್ಯಾ... ನೀವು ಎಷ್ಟು ಒಳ್ಳೆಯೋರು! ಎಷ್ಟು ಒಳ್ಳೆಯೋರು!

ಅಪ್ಪಾ—ಅಯ್ಯೋ! ... ತಡೀಲಾರೆನಪ್ಪಾ. ತಡೀಲಾರೆನಪ್ಪಾ—ಯಪ್ಪಾ... ಹೀಗೆ ಹೋಗಬಾರದೆ. ಈ ಜೀವ. ಅರ್ಥವಿಲ್ಲದ ಈ ಜೀವ. ಈ ನೋವು ಕಿತ್ತು ಕಿತ್ತು ತಿನ್ನುತ್ತಿದೆಯಲ್ಲಪ್ಪಾ... ಶ್ ಶ್... ಸಾಕಪ್ಪಾ. ಸಾಕು. ಸಾಕು."

ಜಯಂತಿ ಶರ್ಮರಿಂದ ಬೇರೆಯ ಕಡೆಗೆ ಹೊರಳಿಕೊಂಡಳು. ಈಗ ಅವಳ ಮುಖ ಅವರಿಗೆ ಕಾಣುತ್ತಿರಲಿಲ್ಲ ಸಧ್ಯ !

ಶರ್ಮರಿಗೆ ಒಳಗೇ ಹೇಗೆ ಹೇಗೋ ಆಗುತ್ತಿತ್ತು. ವಿಪರೀತ ತಳಮಳ ಸಂಕಟ. ವರ್ಣನಾಸಾಧ್ಯ. ಕಂಡೇ ಇರದಿದ್ದ ರೀತಿ. 'ಏನು ಮಾಡಲಿ? ಏನು ಮಾಡಲಿ?' ಹಲ್ಲು ಕಚ್ಚಿತ್ತು, ಹುಬ್ಬು ಗಂಟಾಗಿತ್ತು; ಕಣ್ಣು ಕಿರಿದಾಗಿತ್ತು, ತುಂಬಿ ಬರುತ್ತಿತ್ತು. ಕೈ ಅದುರುತ್ತಿತ್ತು. ಮೈ ನಡುಗುತ್ತಿತ್ತು ತಮ್ಮನ್ನು ತಾವೇ ಬಿಗಿ ಹಿಡಿಯುತ್ತಿದ್ದರು... ಗೋಡೆಯ ಅಂಚಿನಲ್ಲಿದ್ದ ಸೀಸೆ ಪೊಟ್ಟಣ ಡಬ್ಬಿಗಳನ್ನೆಲ್ಲ, ನೀರಿನ ಪಾತ್ರೆ ಬಟ್ಟಲುಗಳನ್ನೂ ಹಾಸಿಗೆಯ ಬಳಿಯಲ್ಲಿ, ಅವಳ ಕೈಯಿಗೆ ಸಿಕ್ಕುವಂತೆ ಇಟ್ಟುಬಿಟ್ಟರು. ಅವಳ ತಲೆ ಮೈ ತಡವಬೇಕೆನ್ನಿಸಿತು, ಆದರೆ ಹೆದರಿದರು—ಅವಳು ಇತ್ತ ತಿರುಗಿಬಿಟ್ಟರೆ! ಮುಖ ತೋರಿಸಿಬಿಟ್ಟರೆ! ಬೇಡ! ಬೇಡ! 'ಜಯಂತಿ! ಮಗು! ಕಂದ!' ಎಂದು ಕೂಗಿಕೊಳ್ಳಬೇಕೆನ್ನಿಸಿತು— ಊಹುಂ, ತಡೆದುಕೊಂಡುಬಿಟ್ಟರು. ಬಾಯಿಗೆ ಟವಲನ್ನು ತುರುಕಿಸಿಕೊಂಡು, ಸದಿಲ್ಲದೆ ಹೇಗೋ ತತ್ತರಿಸುತ್ತ ಮೇಲೆದ್ದು, ಕಳ್ಳ ಹೆಜ್ಜೆಯಿಡುತ್ತ ಅಲ್ಲಿಂದ ಹೊರಟು ಬಂದುಬಿಟ್ಟರು; ತಮ್ಮ ಕೋಣೆಯ ಹಾಸಿಗೆಯ ಮೇಲೆ ಗೊಪ್ಪನೆ ಬೋರಲಾಗಿ ಬಿದ್ದುಕೊಂಡರು; ಬಾಯಿಗೆ ಬಟ್ಟೆಯಿಟ್ಟುಕೊಂಡೇ ಬಿಕ್ಕಿ ಬಿಕ್ಕಿದರು.

ಬೆಳಿಗ್ಗೆ ಅಮ್ಮ ನೋಡಿದಾಗ ಜಯಂತಿಯ ಹಾಸಿಗೆಯ ಬಳಿ ಪಾತ್ರೆ ಉರುಳಿತ್ತು; ಕುಡಿಯುವ ನೀರು ಅಲ್ಲಲ್ಲಿ ಚೆಲ್ಲಿ ಕೋಡಿ ಹರಿದಿತ್ತು; ಸೀಸೆ ಪೊಟ್ಟಣ ಡಬ್ಬಿಗಳಲ್ಲಿ ಒಬ್ಬೆಗಂಟೆ ಗೆಯ ಖಾಲಿ ಡಬ್ಬಿ ಹಾಸಿಗೆಯ ಮೇಲಿತ್ತು; ಅಂಗಾತ ಮಲಗಿದ್ದ ಬಡಪಾಯಿ ಜಯಂತಿಯ ಮುಖಮುದ್ರೆ ಶಾಂತವಾಗಿತ್ತು. ಚಿರ ಶಾಂತ ಮುದ್ರೆ.

ಅಮ್ಮ ಜಯಂತಿಯ ಕೊರೆಯುವ ಕೈ ಮುಟ್ಟಿ ಕಿಟ್ಟನೆ ಕಿರುಚಿಕೊಂಡು ಕೂಡಲೆ ಗಂಡನ ಕೋಣೆಗೆ ಓಡಿದರು.

ಶರ್ಮರು ಹಿಂದೆ ಬಿದ್ದುಕೊಂಡಿದ್ದಂತೆಯೇ ಇನ್ನೂ ಬಿದ್ದಿದ್ದರು, ಪ್ರಜ್ಞಾಹೀನರಾಗಿದ್ದರು. ಅವರ ಬಲಗೈ, ಬಲಭಾಗವೇ, ಬಿದ್ದುಹೋಗಿತ್ತು-ಲಕ್ವ ಹೊಡೆದು.

ಜಯಂತಿ ಪ್ರಪಂಚ ಶೂನ್ಯವಾಯಿತು.

ಜಯಂತಿ ಹೋಗಿಬಿಟ್ಟಳೆ? ಅಂ?... ಹೇಗೆ ಹೋಗಿಬಿಟ್ಟಾಳು, ಸ್ಮರಣೆಯಲ್ಲಿ, ಅಷ್ಟೊಂದು ಜನರ ಸ್ಮರಣೆಯಲ್ಲಿ, ಇರುವವರೆಗೂ?

ಶುಕ್ರಾಚಾರ್ಯರ ಸಂಜೀವಿನೀ ವಿದ್ಯೆಯನ್ನು ತಿಳಿದ, ಸಿರಿಸಂಜೀವಿನಿಯನ್ನು ಹೊಂದಿದ ಪುಣ್ಯವಂತರು, ಯಾರಾದರೂ ಮುಂದೆ ಬಂದರೆ, ಜಯಂತಿ ಬೂದಿಯಿಂದ, ಶೂನ್ಯದಿಂದಲೂ, ಎದ್ದು ಓಡೋಡಿ ಬಂದಾಳು, ನಲಿನಲಿಯುತ್ತ ಲಾವಣ್ಯವತಿ ಜಯಂತಿ ಬಂದಾಳು; ಹಾಸಿಗೆ ಹಿಡಿದ ತಂದೆಯೂ ಎದ್ದು ಕುಳಿತಾರು ಚೇತರಿಸಿಕೊಂಡು, ನೋಡಿ ಆನಂದಿಸಿಯಾರು ಮುದ್ದು ಕಂದನನ್ನು ಮತ್ತೆ ನೋಡಿ; ಜಯಂತಿಯ ಜಗತ್ತು ಮತ್ತೆ ತುಂಬಿಕೊಂಡೀತು ಅವಳಿಂದ... ಅಂಥ ಪುಣ್ಯಾತ್ಮರು ಯಾರು? ಯಾರು? ✡



ಕವಿಗಳೂ ಮಕ್ಕಳೂ ಬಲು ವಿಚಿತ್ರ ಜೀವಿಗಳು. ಯಾಕೆಂದರೆ ಅವರೇನು ಹೇಳುತ್ತಾರೆಂಬುದು ಯಾರಿಗೂ ಅರ್ಥವಾಗುವುದಿಲ್ಲ.

-ಅನಾಮಿಕ

# ಬಂಪರ್ ಬಹುಮಾನ ರೂ.1,00,000



## ಸುಲಭ ರೀತಿಯಲ್ಲಿ ಐಶ್ವರ್ಯಗಳಿಸುವ ವಿಧಾನ

100/ ರೂಪಾಯಿಗಳ ವೈಶ್ಯ ಬ್ಯಾಂಕ್ ಸುವರ್ಣ ಮಹೋತ್ಸವದ ನಗದು ಪ್ರಮಾಣ ಪತ್ರವನ್ನು ಕೊಂಡುಕೊಳ್ಳಿ. ಅದು ಕೇವಲ 63 ತಿಂಗಳಲ್ಲಿ 152-50 ರೂಪಾಯಿಗಳಾಗಿ ಬೆಳೆಯುವುದನ್ನು ನೋಡಿ ವರ್ಷಕ್ಕೆ ಶೇಕಡ 10 ರೂಪಾಯಿಗಳು ಆಕರ್ಷಕ ಬಡ್ಡಿ. ಇದರ ಜೊತೆಗೆ ಐಶ್ವರ್ಯ ಭಾಗ್ಯ ಕೂಡ

**ಬಂಪರ್ ಬಹುಮಾನ 1,00,000 ರೂಗಳು**

ಒಟ್ಟು ನಡೆಯುವ 10 ಡ್ರಾಗಳಲ್ಲಿ ಪ್ರತಿಯೊಂದು ಡ್ರಾನಲ್ಲೂ ಇರುವ ನಿಮ್ಮ ಬಹುಮಾನದ ಅದೃಷ್ಟ ಪಟ್ಟಿ

| | | | | |
|---|---|---|---|---|
| ಮೊದಲನೇ | ಬಹುಮಾನ | 50,000 | (ಒಂದು ಬಹುಮಾನ) | 50,000 |
| ಎರಡನೇ | ಬಹುಮಾನ | 25,000 | (ಒಂದು ಬಹುಮಾನ) | 25,000 |
| ಮೂರನೇ | ಬಹುಮಾನ | 10,000 | (ಒಂದು ಬಹುಮಾನ) | 10,000 |
| ನಾಲ್ಕನೇ | ಬಹುಮಾನ | 5,000 | (ಎರಡು ಬಹುಮಾನಗಳು) | 10,000 |
| ಐದನೇ | ಬಹುಮಾನ | 2,500 | (ಐದು ಬಹುಮಾನಗಳು) | 12,500 |
| ಆರನೇ | ಬಹುಮಾನ | 1,000 | (15 ಬಹುಮಾನಗಳು) | 15,000 |
| ಏಳನೇ | ಬಹುಮಾನ | 500 | (30 ಬಹುಮಾನಗಳು) | 15,000 |
| ಎಂಟನೇ | ಬಹುಮಾನ | 100 | (200 ಬಹುಮಾನಗಳು) | 20,000 |



## ದಿ ವೈಶ್ಯ ಬ್ಯಾಂಕ್ ಲಿಮಿಟೆಡ್

ಆಡಳಿತ ಕಚೇರಿ ೭೨, ಸೆಂಟ್ ಮಾರ್ಕ್ಸ್ ರಸ್ತೆ, ಬೆಂಗಳೂರು-೫೬೦೦೦೧

ಅಧ್ಯಕ್ಷರು ಟಿ. ಕೆ. ಕೆ ಭಗವತ್

# ನೀವೆಷ್ಟು ಸಂತುಷ್ಟರು?

ಪುಂಡಿಕ್ಯಾ ಗಣಪಯ್ಯ ಭಟ್ಟ

ನಿಮ್ಮ ವಯಸ್ಸೇನು. ನಿಮ್ಮ ಎತ್ತರವೆಷ್ಟು ಎಂದು ಪ್ರಶ್ನಿಸಿದಲ್ಲಿ ತಟಕ್ಕನೆ ಉತ್ತರಿಸೀರಿ. ಆದರೆ ನಿಮ್ಮ ಜೀವನವೆಷ್ಟು ಸಂತೋಷಮಯ. ನೀವೆಷ್ಟು ಸಂತುಷ್ಟರು ಎಂಬ ಪ್ರಶ್ನೆಗೆ ನಿಖರವಾದ ಉತ್ತರ ನಿಮ್ಮಿಂದ ಅಸಾಧ್ಯವಾದೀತು. ಹಲವಾರು ಮಂದಿ ಸಂತುಷ್ಟ ವ್ಯಕ್ತಿಗಳಲ್ಲಿ ಕಂಡು ಬರುವ ಸಾಮಾನ್ಯ ಗುಣಲಕ್ಷಣಗಳ ಆಧಾರದಂತೆ ಮನಶ್ಶಾಸ್ತ್ರಜ್ಞರು ರೂಪಿಸಿದ ಈ ಕೆಳಗಿನ ಪ್ರಶ್ನೋತ್ತರ ಮಾಲಿಕೆ ಪ್ರಾಯಶಃ ನಿಮಗೆ ಈ ದಿಶೆಯಲ್ಲಿ ಸಹಕಾರಿಯಾದೀತು.

ಪ್ರತಿ ಪ್ರಶ್ನೆಗೂ ಅದರ ಜೊತೆ ಕೊಡಲಾದ ಉತ್ತರಗಳ ಪೈಕಿ ನಿಮ್ಮ ಮನಸ್ಸಿಗೆ ಅತ್ಯಂತ ಸರಿ ಎನಿಸುವ ಉತ್ತರವನ್ನಾರಿಸಿ ಗುರುತಿಸಿಟ್ಟುಕೊಳ್ಳಿ. ಕೊನೆಯಲ್ಲಿ, ಲೇಖನದ ಅಂತ್ಯದಲ್ಲಿ ಕೊಡಲಾದ ಸರಿಯುತ್ತರಗಳೊಡನೆ ತಾಳೆ ನೋಡಿ. ನೆನಪಿಡಿ, ಈ ಪರೀಕ್ಷೆ ನಿಮ್ಮ ಪ್ರಾಮಾಣಿಕತೆಯ ಮೇಲೆ ಹೊಂದಿಕೊಂಡಿದೆ. ಪ್ರಶ್ನೆಗೆ ನಿಮಗೆ ಸರಿ ಎನಿಸುವ ಉತ್ತರವನ್ನಾರಿಸಬೇಕೇ ಹೊರತು ಯಾವ ಉತ್ತರ ಸರಿಯಿರಬಹುದು ಎಂದು ತರ್ಕಿಸಿ ಆಯ್ಕೆ ಮಾಡುವ ಯತ್ನ ಸಲ್ಲ.

(೧) ಆಯ್ಕೆಯ ಸ್ವಾತಂತ್ರ್ಯವಿತ್ತಲ್ಲಿ, ಈ ಕೆಳಗಿನ ಉದ್ಯೋಗಗಳ ಪೈಕಿ ನೀವಾವುದನ್ನು ಆರಿಸುವಿರಿ?

ಅ) ಸಫಲರಾದಲ್ಲಿ ಅತ್ಯುನ್ನತ ಹುದ್ದೆಗೆ ಬಡ್ತಿ ಹೊಂದುವ ಸೌಲಭ್ಯವಿರುವ ಅತ್ಯಂತ ಕಷ್ಟದ ಹಾಗೂ ಚಾಲೆಂಜಿಂಗ್ ಎನಿಸುವ ಉದ್ಯೋಗ.

ಬ) ನಿಮ್ಮ ಕರ್ತೃತ್ವಶಕ್ತಿ–ಪ್ರತಿಭೆಗಳಿಗೆ ಸರಿ ಹೊಂದುವ, ಆದ್ದರಿಂದ ಯಶಸ್ವಿಯಾಗಿ ನಿಭಾಯಿಸಬಲ್ಲ ಉದ್ಯೋಗ.

ಕ) ಅತ್ಯಂತ ಪ್ರಭಾವಶಾಲಿ ಹಾಗೂ ಪ್ರಮುಖ ವ್ಯಕ್ತಿಯೊಬ್ಬರ ಜೊತೆ ನಿಕಟ ಸಂಪರ್ಕವಲ್ಲಿರಲು ಸಾಧ್ಯತೆಯಿರುವ ಗೌರವಯುತ ಉದ್ಯೋಗ.

(೨) ಇತರರಿಗೆ ಸಹಾಯ ಮಾಡುವುದನ್ನು ನೀವು ಅಪೇಕ್ಷಿಸುತ್ತೀರಾ?

ಅ) ಹೌದು, ಸಹಾಯವನ್ನಪೇಕ್ಷಿಸಿದಲ್ಲಿ ನಿರಾಕರಿಸಲಾರೆ.

ಬ) ಹೌದು, ಆದರೆ ಅದು ಅನುಕೂಲಕರವಾಗಿದ್ದಲ್ಲಿ ಹಾಗೂ ಒಬ್ಬ ವ್ಯಕ್ತಿಗೆ ನಿಜವಾಗಿ ಸಹಾಯವಾಗಬಹುದಾದ ಪಕ್ಷದಲ್ಲಿ ಮಾತ್ರ.

ಕ) ಹೌದು ಎನ್ನಲಾರೆ, ಆದರೆ ಯಾವುದಾದರೂ ಒತ್ತಡದ ಕಾರಣಗಳಿದ್ದಲ್ಲಿ ಅಥವಾ ಆ ವ್ಯಕ್ತಿಗೆ ಸಹಾಯ ಮಾಡಬೇಕಾದ ಜವಾಬ್ದಾರಿ ನನ್ನದಾಗಿದ್ದಲ್ಲಿ ಸಹಾಯ ಮಾಡುವೆ.

(೩) ನಿಮ್ಮ ನಿದ್ರಾಕ್ರಮಕ್ಕೆ ಈ ಕೆಳಗಿನ ವಿವರಣೆಗಳ ಪೈಕಿ ಯಾವುದು ಸರಿಹೊಂದುತ್ತದೆ?

ಅ) ಸುಲಭವಾಗಿ ಬೀಳುವ ಗಾಢ ನಿದ್ರೆ.

ಬ) ಹಗುರಾದ ನಿದ್ರೆ, ಸುಲಭವಾಗಿ ಎಚ್ಚರಾಗಬಲ್ಲೆ.

ಕ) ಗಾಢನಿದ್ರೆ, ಆದರೆ ನಿದ್ರೆ ಹತ್ತುವಲ್ಲಿ ತೊಂದರೆ ಬಹಳ.

(೪) ಕೆಲ ಸಂದರ್ಭಗಳಲ್ಲಿ ನೀವು ಏಕಾಂಗಿಯಾಗಿ ಸಮಯ ಕಳೆಯಲಪೇಕ್ಷಿಸುವುದುಂಟೆ?

ಅ) ಹೌದು, ನನಗೆ ಅತ್ಯಂತ ಶಾಂತಿಮಯ ಕ್ಷಣಗಳೆಂದರೆ ನಾನು ಏಕಾಂಗಿಯಾಗಿರುವುದು.

ಬ) ಇಲ್ಲ, ಸುತ್ತಮುತ್ತ ಜನ ತುಂಬಿರುವುದನ್ನು ನಾನು ಮೆಚ್ಚುವೆ.

ಕ) ಇಲ್ಲ, ಆದರೆ ಏಕಾಂಗಿತನವನ್ನು ನಾನು ಸಹಿಸಬಲ್ಲೆ.

(೫) ನಿಮ್ಮ ಪರಿಸರವನ್ನು ವ್ಯವಸ್ಥಿತವಾಗಿ ಸ್ವಚ್ಛವಾಗಿಟ್ಟುಕೊಳ್ಳುವ ಕುರಿತು ನಿಮ್ಮ ಅನಿಸಿಕೆ ಏನು ?

ಅ) ಅತಿ ಅಗತ್ಯ. ಅವ್ಯವಸ್ಥಿತ ಹಾಗೂ ಅಸ್ವಚ್ಛ ವಾತಾವರಣವನ್ನು ಸಹಿಸಬಲ್ಲೆನಾದರೂ ಸ್ವಂತಕ್ಕೆ ನಾನದನ್ನು ಮೆಚ್ಚಲಾರೆ.

ಬ) ಅಗತ್ಯ. ನನ್ನ ಪರಿಸರ ಈಗಿರುವುದಕ್ಕೂ ಹೆಚ್ಚು ವ್ಯವಸ್ಥಿತ ಹಾಗೂ ಸ್ವಚ್ಛವಾಗಿರಬೇಕೆಂದು ಹಲ ಬಾರಿ ಅನಿಸುವುದುಂಟು.

ಕ) ಅಗತ್ಯ. ನನ್ನ ಪರಿಸರ ವ್ಯವಸ್ಥಿತವಿದೆ. ಆದರೆ ಈ ವಿಚಾರದಲ್ಲಿ ತಲೆ ಕೆಡಿಸುವ ಪ್ರವೃತ್ತಿ ನನ್ನದಲ್ಲ.

(೬) ಈ ಕೆಳಗಿನವುಗಳ ಪೈಕಿ ಮಿತ್ರನೊಬ್ಬನಲ್ಲಿ ಇರಲೇಬಾರದೆಂದು ನೀವು ಬಯಸುವ ಗುಣ ಯಾವುದು?

ಅ) ಬಾಹ್ಯಾಡಂಬರ, ಕಪಟತನ.

ಬ) ಅಸಹಾಯ ಹಾಗೂ ನಿರ್ಬಲರೊಂದಿಗೆ ಕ್ರೂರ ವರ್ತನೆ.

ಕ) ಅಸಂಬದ್ಧ ವರ್ತನೆ, ವಾಚಾಳಿತನ.

(೭) ಕಳೆದ ಆರು ತಿಂಗಳಲ್ಲಿ ಅಸೌಖ್ಯದಿಂದಾಗಿ ಎಷ್ಟು ಬಾರಿ ನೀವು ಗೃಹಬಂದಿಯಾಗಿರಬೇಕಾದ ಪ್ರಸಂಗ ಒದಗಿದೆ?

ಅ) ಒಮ್ಮೆಯೂ ಇಲ್ಲ.

ಬ) ಒಂದು ಬಾರಿ.

ಕ) ಎರಡು ಅಥವಾ ಹೆಚ್ಚು ಬಾರಿ.

(೮) ನೀವೆಷ್ಟು ಸಮಯಪರರು?

ಅ) ಅತ್ಯಂತ ಸಮಯಪರ. ಸಮಯ ಪ್ರಜ್ಞೆ ಯಾವಾಗಲೂ ನನ್ನ ಚಿತ್ತದಲ್ಲಿರುತ್ತದೆ.

ಬ) ಸಮಯಪರನಲ್ಲ. ಮುಂಚಿತವಾಗಿಯೇ ತಯಾರಿ ನಡೆಸಿದರೂ ಸಮಯಕ್ಕೆ ಸರಿಯಾಗಿ ಸೇರುವಲ್ಲಿ ವಿಫಲನಾಗುವೆ.

ಕ) ಸಮಯಪರ. ಸೇರಬೇಕಾದ ಕಡೆ ಸಮಯಕ್ಕೆ ಸರಿಯಾಗಿ ತಲುಪುವೆ.

(೯) ನಿಮಗೆ ಕೇಡೆಣಿಸಿದವರ ಮೇಲೆ ನಿಮ್ಮ ಸಿಟ್ಟು ಎಷ್ಟು ಕಾಲ ಉಳಿಯುವುದು?

ಅ) ಬಹಳ ಕಾಲ. ಕೇಡೆಣಿಸಿದವರನ್ನು ಸುಲಭವಾಗಿ ಕ್ಷಮಿಸಲಾರೆ.

ಬ) ಅನತಿಕಾಲ. ಅವರ ಮೇಲೆ ಸಿಟ್ಟಾಗುವುದುಂಟು, ಆದರೆ ದ್ವೇಷ ತಾಳುವುದು ಅಪರೂಪ.

ಕ) ಸಿಟ್ಟು ಬಹಳ ಕಾಲ ಉಳಿಯದು, ಆದರೆ ನಂತರ ಆ ವ್ಯಕ್ತಿಯೊಂದಿಗೆ ಸಂಪರ್ಕ ಕುಂಠಿತಗೊಳಿಸುವೆ.

(೧೦) ನಿಮ್ಮ ಆತ್ಮೀಯರೊಬ್ಬರಿಗೆ ಅತ್ಯಂತ ಶೋಕ ಪರಿಸ್ಥಿತಿ ಎದುರಾಗಿದೆ– ಪ್ರಾಯಶಃ ಅವರ ನಿಕಟ ಬಂಧುವೊಬ್ಬರ ಮರಣ. ನಿಮ್ಮ ಪ್ರತಿಕ್ರಿಯೆ?

ಅ) ಅವರ ದುಃಖ ಶಮನವಾಗುವಂತೆ ಸಮಾಧಾನಪಡಿಸುವೆ ಹಾಗೂ ಅವರನ್ನು ಪ್ರಸನ್ನ ಚಿತ್ತರನ್ನಾಗಿಸಲೆತ್ನಿಸುವೆ.

ಬ) ನನ್ನ ಮನಸ್ಥಿತಿ ಹದಗೆಡುವುದು, ಯಾಕೆಂದರೆ ನನ್ನಾತ್ಮೀಯರಿಗೊದಗಿದ ಶೋಕ ಸ್ಥಿತಿ ನನಗೊದಗಿದಂತೆಯೇ.

ಕ) ಅವರ ದುಃಖದಲ್ಲಿ ನಾನೂ ಸಹಭಾಗಿ ಎಂದವರಿಗೆ ಗೊತ್ತುಪಡಿಸುವೆ, ಆದರೆ ಅವರೊಡನೆ ಎಂದಿನಂತೆ ವ್ಯವಹರಿಸುವೆ.

೧೧) ನಿಮ್ಮ ಬಾಳ ಸಂಗಾತಿಯಾಗುವವರಲ್ಲಿ ನಿಮ್ಮ ನಿರೀಕ್ಷೆ?

ಅ) ರೂಪ ಬ) ಶ್ರೀಮಂತಿಕೆ

ಕ) ಮೇಧಾವಿತನ ಡ) ಹೊಂದಿಕೊಳ್ಳುವ ಗುಣ

ಇ) ಗಾಢವಾದ ಪ್ರೇಮ.

(೧೨) ಯಾವ ಹೇಳಿಕೆ ನಿಮ್ಮ ಸಾಮಾಜಿಕ ವರ್ತನೆಗೆ ಸರಿಯಾದ ವಿವರಣೆ ಎನಿಸಬಲ್ಲುದು?

ಅ) ಕೆಲವೇ ಮಂದಿ ಆತ್ಮೀಯರೊಂದಿಗೆ ನಿಕಟ ಸಂಪರ್ಕ.

ಬ) ಸಾಮಾಜಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು. ನೂರಾರು ಮಂದಿಯ ಪರಿಚಯ.

ಕ) ಅನೇಕ ಮಿತ್ರರು, ಆದರೆ ನಿಕಟ ಸಂಪರ್ಕ ಕಮ್ಮಿ. ಎಲ್ಲರೊಂದಿಗೂ ಸ್ನೇಹಮಯ ವರ್ತನೆ.

(೧೩) ಈ ಕೆಳಗಿನ ಹೇಳಿಕೆಗಳ ಪೈಕಿ ನೀವಾವುದನ್ನು ಒಪ್ಪುತ್ತೀರಿ?

ಅ) ಸಮಯ ಅತ್ಯಂತ ವೇಗವಾಗಿ ಓಡುತ್ತಿದೆ.

ಬ) ಸಮಯ ನಿಧಾನವಾಗಿ ಚಲಿಸುತ್ತಿದೆ.

ಕ) ದಿನಗಳು ಅತಿ ದೀರ್ಘ, ಆದರೆ ವಾರ–ತಿಂಗಳುಗಳು ವೇಗವಾಗಿ ಚಲಿಸುವುವು.

ಡ) ದಿನಗಳು ಕಳೆಯುವುದೇ ತಿಳಿಯುವುದಿಲ್ಲ. ಆದರೆ ವಾರ–ತಿಂಗಳುಗಳು ಅತಿ ದೀರ್ಘ.

(೧೪) ನಿಮ್ಮ ಪ್ರಸಕ್ತ ಸ್ಥಿತಿಯ ಕುರಿತು–ಸ್ವಂತ ಗುಣಲಕ್ಷಣಗಳು, ಸ್ನೇಹಿತರು, ಬಂಧುಗಳು, ಉದ್ಯೋಗ, ಭವಿಷ್ಯ ಇತ್ಯಾದಿ–ನಿಮ್ಮ ಅನಿಸಿಕೆ?

ಅ) ಅತ್ಯುತ್ತಮ. ಇನ್ನೂ ಉತ್ತಮ ಭವಿಷ್ಯ ನಿರೀಕ್ಷೆ.

ಬ) ಉತ್ತಮ. ಅಸಾಧಾರಣ ಎನ್ನುವ ಮಟ್ಟಕ್ಕಿಲ್ಲದಿದ್ದರೂ. ಪರವಾಗಿಲ್ಲ, ನಿಧಾನವಾಗಿ ಮೇಲೇರುತ್ತಿದೆ.

ಕ) ಸಾಧಾರಣ, ಉತ್ತಮ ಭವಿಷ್ಯಕ್ಕಾಗಿ ಪ್ರಯತ್ನ.

ಡ) ಅನಿಸಿಕೆಗಳು ಆಗಾಗ ಬದಲಾಗುವುದುಂಟು. ಕೆಲಬಾರಿ ಈ ಕುರಿತು ತೃಪ್ತಿ, ಹಲಬಾರಿ ಅತೃಪ್ತಿ.

ನೀವು ಗುರುತು ಮಾಡಿಟ್ಟುಕೊಂಡ ಉತ್ತರಗಳನ್ನು ಈ ಕೆಳಗಿನ ಪಟ್ಟಿಯೊಂದಿಗೆ ತಾಳೆ ನೋಡಿ. ಪ್ರತಿ ಸರಿಯುತ್ತರಕ್ಕೂ ಒಂದೊಂದು ಅಂಕಗಳನ್ನು ಕೂಡಿಸುತ್ತ ಹೋಗಿ.

೧. ಬ ೪. ಕ ೭. ಅ ೧೦. ಕ ೧೩. ಡ
೨. ಬ ೫. ಕ ೮. ಕ ೧೧. ಡ ೧೪. ಬ
೩. ಅ ೬. ಬ ೯. ಬ ೧೨. ಕ

ನೀವು ಗಳಿಸಿದ ಅಂಕ ಮೂರು ಅಥವಾ ಅದಕ್ಕಿಂತ ಕಡಿಮೆಯಿದ್ದಲ್ಲಿ ಸಂತುಷ್ಟ ಜೀವನ ನಿಮ್ಮದಲ್ಲ ಎನ್ನದೆ ವಿಧಿಯಿಲ್ಲ. ನಾಲ್ಕು ಅಂಕಗಳು ಸಾಧಾರಣ, ಆರು ಉತ್ತಮ ಸಂತುಷ್ಟ ಜೀವನದ ಅನುಭವ ನಿಮಗಿದೆ ಎನ್ನಬಹುದು. ಏಳು ಅಥವಾ ಅದಕ್ಕಿಂತ ಹೆಚ್ಚು ಅಂಕಗಳು ನಿಮ್ಮದಾಗಿದ್ದಲ್ಲಿ ಸಂತುಷ್ಟ ವ್ಯಕ್ತಿಗಳ ಸಾಲಿಗೆ ಸೇರಲು ನೀವು ಅರ್ಹರು ಎಂಬುದು ನಿಸ್ಸಂಶಯ.

ಸಂತುಷ್ಟ ವ್ಯಕ್ತಿ ಜೀವನದಲ್ಲಿ ಕ್ರಿಯಾತ್ಮಕ ಹಾಗೂ ಪ್ರಯೋಜನಕರ ಕಾರ್ಯಗಳಿಗೆ ಪ್ರಾಮುಖ್ಯ ನೀಡುವ, ಅಲ್ಲದೆ ತನ್ನ ಕರ್ತೃತ್ವಶಕ್ತಿಯ ಸೂಕ್ತ ಉಪಯೋಗವಾಗಬೇಕೆಂಬಾಸೆ ಆತನಿಗೆ.

(೧) ಇತರರಿಗೆ ಸಹಾಯ ಮಾಡುವುದನ್ನು ಮೆಚ್ಚುವನಾದರೂ ಸ್ವಾರ್ಥತ್ಯಾಗದ ಮೇರೆ ಮೀರಲಾರ.

(೨) ಸುಲಭವಾಗಿ ಹತ್ತುವ ಗಾಢ ನಿದ್ರೆ ಸಂತುಷ್ಟ ವ್ಯಕ್ತಿಗಳ ಲಕ್ಷಣಗಳಲ್ಲೊಂದು ಎಂಬುದು ಸಂಶೋಧನೆಗಳಿಂದ ಸಿದ್ಧಪಟ್ಟ ವಿಚಾರ.

(೩) ಸ್ವಂತಿಕೆಗೆ ಆತನದು ಹೆಚ್ಚಿನ ಪ್ರಾಧಾನ್ಯ. ಪಕ್ಷಾಂಗಿತನ ಕೂಟಗಳೆರಡನ್ನೂ ಸಮಾನವಾಗಿ ಆತ ಮೆಚ್ಚುವನಾದರೂ ಅವುಗಳ ಮೇಲೆ ಆತ ಹೊಂದಿಕೊಂಡಿರಲಾರ,

(೪,೧೩) ಸಾಮಾನ್ಯವಾಗಿ ಆತ ವ್ಯವಸ್ಥಿತ ಹಾಗೂ ಸಮಯಪರ (೫, ೮).

ಜನರ ಚಿಕ್ಕ ಪುಟ್ಟ ಅಸಂಬದ್ಧ ವರ್ತನೆಗಳನ್ನಾತ ಸಹಿಸಬಲ್ಲನಾದರೂ, ಕ್ರೂರತೆ ಹಾಗೂ ನಾಶ ಪ್ರವೃತ್ತಿಗಳ ವಿರೋಧಿ (೭) ಇತರ ಭಾವಾವೇಶಗಳಲ್ಲಿ ಪಾಲ್ಗೊಳ್ಳಲು ಆತ ನಿರಾಕರಿಸುವ (೧೦) ತಾನು ಮಾಡಿದ್ದೇ ಸರಿ ಎನ್ನುವ ಭಾವನೆ ಆತನದಲ್ಲ(೯) ಜೀವನ ಸಂಗಾತಿಯನ್ನಾರಿಸುವಲ್ಲಿ ಬಾಹ್ಯ ಸುಂದರ, ಮೆಚ್ಚು ಪ್ರೇಮಗಳಿಗಿಂತ ಹೊಂದಿಕೊಳ್ಳುವ ಗುಣಕ್ಕೆ ಆತನ ಪ್ರಾಧಾನ್ಯ (೧೧) ಬಹಳ ಮಂದಿ ಕ್ರಿಯಾಶೀಲ, ಕಾರ್ಯತತ್ಪರ ವ್ಯಕ್ತಿಗಳಂತೆ ದಿನಗಳು ವೇಗವಾಗಿ ಓಡುತ್ತಿವೆ ಎಂದಾತನ ಭಾವನೆ, ಆದರೆ ವಾರ ತಿಂಗಳುಗಳು ಕೊನೆಯಿಲ್ಲದವು ಎನಿಸುವುದು (೧೩) ಕೊನೆಯಲ್ಲಿ, ಸಂತುಷ್ಟ ವ್ಯಕ್ತಿಯಲ್ಲಿ ಅಭಿವೃದ್ಧಿ ಪ್ರಜ್ಞೆ ಹಾಗೂ ಆತ್ಮತೃಪ್ತಿ ಕಂಡುಬರುವುದು ಸಾಮಾನ್ಯ. ✡

***************

ನಂಜನಗೂಡಿನಲ್ಲಿ 'ಸತೀ ಹಿತೈಷಿಣೀ ಗ್ರಂಥಮಾಲೆ'ಯ ಶ್ರೀಮತಿ ತಿರುಮಲಾಂಬಾ ೧೯೧೬ರ ಅಕ್ಟೋಬರ್‌ನಲ್ಲಿ ಮಹಿಳೆಯರಿಗಾಗಿಯೇ ಪ್ರಾರಂಭಿಸಿದ ಪತ್ರಿಕೆ 'ಕರ್ನಾಟಕ ನಂದಿನಿ.' ಇದು ನಂಜನಗೂಡಿನಲ್ಲಿ ಪ್ರಕಟವಾಗುತ್ತಿದ್ದರೂ ಧಾರವಾಡದ ಕೃಷ್ಣ ಮುದ್ರಣಾಲಯದಲ್ಲಿ ಮುದ್ರಣವಾಗುತ್ತಿತ್ತು. ಗೌರವಧನ ನೀಡುವ ಪರಿಪಾಠವಿದ್ದ ಈ ಪತ್ರಿಕೆ ಆರ್ಥಿಕ ತೊಂದರೆಯಿಂದ ನಿಂತಿತು.

ಹಿಂದಿ ಕಥೆ

# ಒಂಟಿ ಧ್ವನಿ

ಮೂಲ: **ಪ್ರೇಮಚಂದ**

ಕನ್ನಡಕ್ಕೆ: **ನಚಿಕೇತ**

ಅಂದು ಚಂದ್ರಗ್ರಹಣದ ದಿನ. ರಾತ್ರಿ ಜರುಗಲಿದ್ದ ಚಂದ್ರಗ್ರಹಣಕ್ಕೆ ಠಾಕೂರ ದರ್ಶನ್‌ಸಿಂಗನ ಮನೆಯಲ್ಲಿ ಸಡಗರ. ಠಾಕೂರ ದಂಪತಿಗಳು ಗಂಗಾಸ್ನಾನಕ್ಕಾಗಿ ಪ್ರಯಾಣ ಹೊರಡುವ ಸಿದ್ಧತೆ ನಡೆಸಿದ್ದರು. ಅವರ ಹಿರಿಯ ಸೊಸೆ ತನ್ನ ಮಾವನ ಹಳೆಯ ನಿಲುವಂಗಿಯೊಂದನ್ನು ದುರಸ್ತಿ ಮಾಡುತ್ತಿದ್ದಳು, ಎರಡನೆಯ ಸೊಸೆ ಠಾಕೂರನ ಪೇಟವನ್ನು ಕೈಯಲ್ಲಿ ಹಿಡಿದು ಅದನ್ನು ಯಾವ ರೀತಿ ಸರಿಪಡಿಸಬೇಕೆಂದು ತಿಳಿಯದೆ ಕಸಿವಿಸಿಗೊಂಡಿದ್ದಳು. ಅವರ ಇಬ್ಬರು ಹೆಣ್ಣುಮಕ್ಕಳು ಅಡಿಗೆ ಮನೆಯಲ್ಲಿ ಕಾರ್ಯಮಗ್ನರಾಗಿದ್ದರು. ಯಾರು ಅವರ ಜೊತೆ ಹೊರಡಬೇಕೆಂಬುದರ ಬಗ್ಗೆ ಚಿಕ್ಕ ಹುಡುಗರು ತಮ್ಮ ತಮ್ಮಲ್ಲೇ ಜಗಳ ಪ್ರಾರಂಭಿಸಿದ್ದರು. ಠಾಕೂರಾಣಿ ಅವರನ್ನು ಸಮಾಧಾನಗೊಳಿಸಲು ಯತ್ನಿಸುತ್ತಿದ್ದಳು. ಮಧ್ಯೆ ಮಧ್ಯೆ ತನ್ನ ಸೊಸೆಯರಿಗೆ ಕೆಲವು ಆಜ್ಞೆಗಳನ್ನೂ ನೀಡುತ್ತಿದ್ದಳು: "ಇಂದು ಗ್ರಹಣ ಬಿಡುವ ಮುಂಚೆ ಯಾರೂ ಹೊಸಲು ದಾಟಬಾರದು," "ಕಬ್ಬಿಣದ ಸಾಮಾನುಗಳನ್ನು ಯಾರೂ ಮುಟ್ಟಕೂಡದು". "ಒಬ್ಬ ಭಿಕ್ಷುಕನನ್ನೂ ಇಂದು ಬರಿಗೈಯಿಂದ ಕಳುಹಿಸಕೂಡದು" ...ಇತ್ಯಾದಿ ಇತ್ಯಾದಿ. ಆದರೆ ಆಕೆಯ ಕಟ್ಟಪ್ಪಣೆಗಳು ಸೊಸೆಯರ ಮೇಲೆ ನಿರೀಕ್ಷಿತ ಪರಿಣಾಮ ಬೀರುತ್ತಿರಲಿಲ್ಲ. ಅವರು ಮನಸ್ಸಿನಲ್ಲಿಯೇ, "ಈ ಅತ್ತೆ ಒಂದು ಸಾರಿ ಮನೆಯಿಂದ ಹೊರಟರೆ ಸಾಕು, ಮೇಲೆ ಹೋಗಿ ಸ್ವೇಚ್ಛೆಯಿಂದ ಉಯ್ಯಾಲೆ ಆಡಬಹುದು," ಎಂದು ತರ್ಕಿಸುತ್ತಿದ್ದರು.

ಠಾಕೂರಸಿಂಗನಿಗೆ ಈಗ ಇಳಿಪ್ರಾಯ. ಆತ ತನ್ನ ಇಡೀ ಜೀವಿತದಲ್ಲಿ ಪ್ರತಿ ಬಾರಿಯೂ ಗ್ರಹಣ ಸ್ನಾನವನ್ನು ಗಂಗಾನದಿಯಲ್ಲೇ ಮಾಡುತ್ತಿದ್ದ. ಇದು ಆತನಿಗೆ ಬಹಳ ಹೆಮ್ಮೆಯ ವಿಷಯವಾಗಿತ್ತು. ಪ್ರಾಯದಲ್ಲಿರುವಾಗ ಸೇನೆಯಲ್ಲಿ ಕೆಲ ಕಾಲ ಸೇವೆ ಸಲ್ಲಿಸಿದ್ದ ಠಾಕೂರ್ ಸಿಂಗನಿಗೆ ಶಿಸ್ತು ಮೈಗೂಡಿ ಹೋಗಿತ್ತು. ತತ್ಪರಿಣಾಮವಾಗಿ ಆತ ಎಂತಹ ಸಂದರ್ಭಗಳನ್ನೂ ಧೈರ್ಯದಿಂದ ಎದುರಿಸುತ್ತಿದ್ದ. ಎಂತಲೇ ಆತ ತನ್ನೂರಿನ ಜನರಿಂದ ಅಪಾರ ಮೆಚ್ಚುಗೆ ಗಳಿಸಿದ್ದ ಅಷ್ಟೇ ಅಲ್ಲ. ಆಗಿಂದಾಗ ಧರ್ಮಗಳ ಬಗ್ಗೆ ನಡೆಯುತ್ತಿದ್ದ ಚರ್ಚೆಗಳಲ್ಲೆಲ್ಲ ಆತನದೇ ಕಡೆಯ ಮಾತಾಗಿರುವುದರಿಂದ ಘಟಾನುಘಟಿಗಳೂ ಆತನೊಂದಿಗೆ ವಾದಿಸಲು ಹಿಂಜರಿಯುತ್ತಿದ್ದರು.

ಠಾಕೂರ್ ದಂಪತಿಗಳು ತಮ್ಮ ಗ್ರಾಮದಿಂದ ಹೊರಟು ಮುಖ್ಯ ರಸ್ತೆಯನ್ನು ತಲುಪಿದಾಗ, ಮಧ್ಯಾಹ್ನದ ಸಮಯವಾಗಿತ್ತು. ಅಲ್ಲಿ ಸಾಗುತ್ತಿದ್ದ ಅಪಾರ ಜನಸ್ತೋಮದಲ್ಲಿ ಗಂಡಸರು, ಹೆಂಗಸರು, ದೊಡ್ಡವರು, ಚಿಕ್ಕವರು, ದೃಢಕಾಯರು, ಅಶಕ್ತರು ಹೀಗೆ ಎಲ್ಲರೂ ಇದ್ದರು. ಸರಿಯಾಗಿ ಕಣ್ಣು ಕಾಣದವರನ್ನು ಕೆಲವರು ಕೈ ಹಿಡಿದು ನಡೆಸಿಕೊಂಡು ಹೋಗುತ್ತಿದ್ದರೆ, ಕೆಲವರು ಹಣ್ಣು ಮುದುಕರನ್ನು ತಮ್ಮ ಹೆಗಲುಗಳ ಮೇಲೆ ಕೂರಿಸಿಕೊಂಡು ಹೋಗುತ್ತಿದ್ದರು. ಕೆಲವರು ಬಟ್ಟೆಯ ಗಂಟುಗಳನ್ನು ಹಿಡಿದುಕೊಂಡಿದ್ದರೆ ಮತ್ತೆ ಕೆಲವರು ಚೆಂಬುಗಳನ್ನು ಹಾಗೂ ಜಪಮಾಲೆಗಳನ್ನು ಹಿಡಿದಿರುತ್ತಿದ್ದರು. ಪಾದರಕ್ಷೆಗಳನ್ನು ಕೊಳ್ಳಲಾರದ ಕೆಲವು ನತದೃಷ್ಟ

ತಮ್ಮ ಕಾಲುಗಳಿಗೆ ಚಿಂದಿ ಬಟ್ಟೆಯನ್ನು ಸುತ್ತಿ [illegible] [illegible]ತ್ತಿದ್ದರು. ಆದರೆ ಎಲ್ಲರ ಮುಖ ದಲ್ಲಿಯೂ ತೀರ್ಥಯಾತ್ರೆ ಕೈಗೊಳ್ಳುವ ಅಪರಿ [illegible]! ಜನರು ಅಕ್ಕ ಪಕ್ಕದ ಹಳ್ಳಿಗಳಿಂದ [illegible] ರಸ್ತೆಯಲ್ಲಿ ಒಂದಾಗಿ ಸಾಗುತ್ತಿ ದ್ದುದು ಒಂದು ನದಿಯು ತನ್ನ ಸಣ್ಣ ಸಣ್ಣ ಉಪ [illegible] ಕೂಡಿಕೊಂಡು ತನ್ನ [illegible] ಸಮುದ್ರವನ್ನು ಸೇರಲು ಧಾವಿಸುತ್ತಿರುವ ದೃಶ್ಯ ವನ್ನು ನೆನಪಿಗೆ ತರುವಂತಿತ್ತು.

ಎಲ್ಲರೂ ಗಂಗಾನದಿಯ ತೀರವನ್ನು ತಲುಪಿ ದಾಗ ಸಂಜೆಯ ಸಮಯ. ಎತ್ತ ದೃಷ್ಟಿ ಹಾಯಿ ಸಿದರೂ ಬರಿ ತಲೆಗಳೇ! ಎಲ್ಲರ ಬಾಯಲ್ಲೂ ಒಂದೇ ಧ್ವನಿ; 'ಗಂಗಾ ಮಾತಾಕೀ ಜೈ, ಗಂಗಾ ಮಾತಾಕೀ ಜೈ' [illegible] ಸ್ಫೂರ್ತಿ [illegible] ಎಲ್ಲರ ಪ್ರಾರ್ಥನೆಗಳನ್ನೂ ಮೌನದಿಂದ ಸ್ವೀಕರಿಸುವ, ಸರ್ವರನ್ನೂ ಸಮಾನ ದೃಷ್ಟಿಯಿಂದ ಕಾಣುವ, ನೀಲ ವರ್ಣದಿಂದ ಸುಂದರ ವಾಗಿ ಕಂಗೊಳಿಸುತ್ತಿದ್ದ, ಪರಮ ಪಾವನವಾದ ಗಂಗಾ ನದಿ ತನ್ನ ಅಪಾರ ಭಕ್ತರನ್ನು ಕಂಡು ಎಂದೂ ಇಲ್ಲದ ಉತ್ಸಾಹವನ್ನು ಪ್ರಕಟಿಸುತ್ತಿ ರುವಂತೆ ಭಾಸವಾಗುತ್ತಿತ್ತು. ದೂರ ದೂರದಿಂದ ತನ್ನ ಮಡಿಲನ್ನೇ ಆಶ್ರಯಿಸಿ ಬಂದ ಪ್ರಿಯಕರ ರನ್ನು ಎಂದಿಗೆ ಆಲಿಂಗಿಸಿಕೊಂಡೇನೋ ಎಂದು ಗಂಗೆ ಚಡಪಡಿಸುತ್ತಿರುವಂತೆ ತೋರುತ್ತಿತ್ತು.

ಗ್ರಹಣ ಹಿಡಿಯಲು ಇನ್ನೂ ಬಹಳ ಸಮಯ ವಿದ್ದುದರಿಂದ ಜನರೆಲ್ಲರೂ ಗುರಿಯಿಲ್ಲದೆ ಅತ್ತಿಂದಿ- ತ್ತ ಅಡ್ಡಾಡತೊಡಗಿದರು. ಕೆಲವರು ಯಕ್ಷಿಣಿ [illegible] ಆಕರ್ಷಿತರಾದರೆ ಮತ್ತೆ ಕೆಲವರು ಅಲ್ಲಿಯೇ ನಡೆಯುತ್ತಿದ್ದ ಟಗರು [illegible] ನೋಡುತ್ತ ನಿಂತರು. ಠಾಕೂರ್ ಸಿಂಗನ ದೃಷ್ಟಿಯಲ್ಲಿ ಇವೆಲ್ಲವೂ ಬಾಲಿಶ. ಅವನು ಅಲ್ಲೇ ಸ್ವಲ್ಪ ದೂರದಲ್ಲಿ ಕಾಣುತ್ತಿದ್ದ ಚಪ್ಪರದೆಡೆಗೆ [illegible] ದೊಡ್ಡ ಸಭೆ ಸೇರಿತ್ತು. [illegible] ಸುಶಿಕ್ಷಿತರೇ ಆಗಿದ್ದರು. ಅವರ ಮಧ್ಯದಲ್ಲಿ ಈತನೂ ಹೋಗಿ [illegible] ಜನರ ಪೈಕಿ ತಾನೊಬ್ಬನೇ ಈ ಸಭೆಗೆ ಬಂದಿದ್ದ ವಿಚಾರ ಆತನಿಗೆ ಕೊಂಚ



ಹೆಮ್ಮೆಯ ವಿಷಯವೇ ಆಗಿತ್ತು.

ಆ ದೊಡ್ಡ ಸಭೆಯಲ್ಲಿ ಸುಮಾರು ಎರಡು ಮೂರು ಸಾವಿರ ಜನರು ಸೇರಿದ್ದರು. ಉತ್ಸಾಹ ಶಾಲಿ ಯುವಕರು ಮುಂಭಾಗದಲ್ಲಿ ಕುಳಿತಿದ್ದರು. ಹರಟೆ ಕೊಚ್ಚಲು ಅದೊಂದು ಸುಸಂದರ್ಭ ಅವ ರಿಗೆ! ಮತ್ತೆ ಕೆಲವರಿಗೆ ತಾವೇ ಇತರರಿಗಿಂತ ಹೆಚ್ಚು ತಿಳಿದವರು ಎಂಬ ಬಿಗುಮಾನ! ಅಂದಿನ ಪ್ರವಚನ ಕಾರರು ಒಂದು ಅತ್ಯಂತ ಗಹನವಾದ ವಿಚಾರ ವನ್ನು ತಮ್ಮ ಗಂಭೀರವಾದ ಶೈಲಿಯಲ್ಲಿ ಹೇಳು ತ್ತಲಿದ್ದರು. ಆ ಸಭೆಯಲ್ಲಿ ಚಪ್ಪಾಳೆಗಳ ಸದ್ದೇ ಕೇಳಿ ಬರುತ್ತಿರಲಿಲ್ಲವಾದ್ದರಿಂದ ಸಭಿಕರ ಪ್ರತಿಕ್ರಿಯೆ ನಿರಾಶಾದಾಯಕವಾಗಿತ್ತೆಂಬುದು ಸ್ವತಃಸಿದ್ಧ ವಾಗಿತ್ತು.

ಅವರ ಭಾಷಣದ ಈ ರೀತಿ ಇತ್ತು: "ಸ್ನೇಹಿ ತರೆ, ನಮ್ಮ ಸಮಾಜದಲ್ಲಿ ಅಸ್ಪೃಶ್ಯ ಜಾತಿ ಯೊಂದು ಇಂದಿಗೂ ಅಸ್ತಿತ್ವದಲ್ಲಿದೆ ಎಂಬ ವಿಚಾರ ನಮ್ಮೆಲ್ಲರಿಗೆ ಮಾತ್ರವಲ್ಲ, ಇಡೀ ಭಾರತ ದೇಶಕ್ಕೇ ಅಪಮಾನವೆನಿಸುವಂತಹ ಕಟು ಸತ್ಯ. ನಾವು ಹರಿಜನರನ್ನು ನಾಯಿಗಳಿಗಿಂತ ಕಡೆಯಾಗಿ ಕಾಣುತ್ತಿದ್ದೇವಷ್ಟೇ ಅಲ್ಲ, ಅವರ ನೆರಳೂ ನಮ್ಮ ಮೇಲೆ ಬೀಳದಂತೆ ಎಚ್ಚರ ವಹಿಸುತ್ತಿದ್ದೇವೆ! ಅವರ ಇಂದಿನ ಪರಿಸ್ಥಿತಿ ಹಾಗೂ ಅವರ ಜೀವನ ಮಟ್ಟ, ನಮ್ಮ ತಾಯ್ನಾಡಿಗೆ ಬಹಳ ಕಾಲದಿಂದಲೂ ಕಳಂಕಪ್ರಾಯವಾಗಿದೆಯೆಂಬುದರಲ್ಲಿ ಸಂಶಯ ವಿಲ್ಲ. ಅವರ ದೌರ್ಭಾಗ್ಯಕ್ಕೆ ನಿಜವಾದ ಕಾರಣರು ನಾವೇ ಅಲ್ಲದೆ ಬೇರೆ ಯಾರೂ ಅಲ್ಲ. ಆದುದರಿಂದ, ಸೋದರರರೆ, ಇನ್ನು ಮುಂದಾದರೂ ಹರಿಜನ ರನ್ನು ಕನಿಕರದಿಂದ ಸಹಾನುಭೂತಿಯಿಂದ ಸೌಜ ನ್ಯದಿಂದ ಕಾಣುತ್ತೇವೆಂದು ಈ ಪುಣ್ಯಭೂಮಿ ಯಾದ ಕಾಶಿಯಲ್ಲಿ ಈ ಪಾವನವಾದ ಗಂಗಾ ತೀರದಲ್ಲಿ ನನಗೆ ವಚನ ನೀಡುವ ನಿರ್ಧಾರವನ್ನು ತಾವೆಲ್ಲರೂ ಇಂದು ಕೈಗೊಳ್ಳುತ್ತೀರೆಂದು ಹೃತ್ಪೂ ರ್ವಕವಾಗಿ ಆಶಿಸುತ್ತೇನೆ. ಇದರಿಂದ ನೀವು ಆ ಬಡಪಾಯಿಗಳನ್ನು ಉದ್ಧರಿಸುವುದಕ್ಕಿಂತಲೂ ಹೆಚ್ಚಾಗಿ ನಿಮ್ಮ ಹಾಗೂ ನಿಮ್ಮ ದೇಶದ ಉದ್ಧಾ ರವನ್ನು ಮಾಡುತ್ತೀರೆಂಬುದನ್ನು ಚೆನ್ನಾಗಿ ನೆನಪಿನಲ್ಲಿಡಿ. ನನಗೆ [illegible] ಅಂಟಿ ಕೊಂಡು ಬಂದಿರುವ ಈ ಅಸ್ಪೃಶ್ಯತೆಯ ಜಾಡ್ಯ ವನ್ನು ಸಂಪೂರ್ಣವಾಗಿ ನಿರ್ಮೂಲಗೊಳಿಸುವುದು ನಾವು ಹೇಳುವಷ್ಟು ಸುಲಭವಲ್ಲ ಎಂಬುದನ್ನು ನಾನೂ ಒಪ್ಪುತ್ತೇನೆ. ಅಷ್ಟೇ ಅಲ್ಲ, ಅವರನ್ನು ನಮ್ಮ ಸಹೋದರರಂತೆಯೇ ಭಾವಿಸಿ ಅಪ್ಪಿಕೊ ಳ್ಳಲು, ರಾಮ ಹಾಗೂ ಕೃಷ್ಣರಿಗಿದ್ದ ಧೈರ್ಯ ಆತ್ಮವಿಶ್ವಾಸಗಳೇ ಬೇಕಾದೀತು! ಹರಿಜನರೊಡನೆ ಮದುವೆ ಸಂಬಂಧ ಬೆಳೆಸಿ ಎಂದಾಗಲಿ, ಅವ ರೊಡನೆ ಸಹಭೋಜನ ಮಾಡಿ ಎಂದಾಗಲಿ ನಾನು ನಿಮ್ಮನ್ನು ಕೋರುತ್ತಿಲ್ಲ. ಆದರೆ ಅವರನ್ನೂ ಮಾನವೀಯ ದೃಷ್ಟಿಯಿಂದ ನೋಡಲು ಕಲಿ ಯಿರಿ ಎಂದಷ್ಟೇ ಕೇಳಿಕೊಳ್ಳುತ್ತಿದ್ದೇನೆ. ಇದು ತಪ್ಪೆ? ಉದಾರಣೆಗೆ ತಮ್ಮ ಸ್ವಂತ ಮನೆ ಊರು ದೇಶಗಳನ್ನು ಬಿಟ್ಟು, ತಮ್ಮ ಬಂಧುಗಳು, ಸ್ನೇಹಿತ ರನ್ನೆಲ್ಲಾ ತೊರೆದು, ತಮ್ಮ ವೈಯಕ್ತಿಕ ಸುಖಾ- ಪೇಕ್ಷೆಗಳನ್ನೆಲ್ಲಾ ಬದಿಗೊತ್ತಿ ತಮ್ಮ ಇಡೀ ಜೀವಿ- ತವನ್ನೇ ಮಾನವ ಸೇವೆಗಾಗಿ ಮುಡಿಪಾಗಿಡಲು ಮುಂದಾಗುವ ಕ್ರೈಸ್ತ ಸಂನ್ಯಾಸಿ-ಸನ್ಯಾಸಿನಿಯ ರನ್ನು ನೋಡಿ ನಾವು ನಿಜಕ್ಕೂ ನಾಚಿಕೆಯಿಂದ ತಲೆ ತಗ್ಗಿಸಬೇಕು. ಪರದೇಶದಿಂದ ಬಂದ ಪರಿಶುದ್ಧ ಸಂನ್ಯಾಸಿನಿಯೊಬ್ಬಳು ಮೈಯಲ್ಲಾ ಕಿ[illegible] ಳಿಂದ ತುಂಬಿರುವ ನಮ್ಮ ದೇಶದ ನಿರ್ಭಾಗ್ಯ ಮಗುವೊಂದನ್ನು ಎತ್ತಿಕೊಂಡು ಅತ್ಯಂತ ಆತ್ಮೀ ಯವಾಗಿ ಉಪಚರಿಸುತ್ತಿರುವ ದೃಶ್ಯವೊಂದನ್ನು ನೋಡಿದಾಗ, ಆಕೆಯೆದುರು ತಲೆಬಾಗಿ ಗೌರವ ಸೂಚಿಸಬೇಕೆಂದು ನನಗೆ ಖಂಡಿತವಾಗಿಯೂ ಅನಿ ಸದೇ ಇರುವುದಿಲ್ಲ. ಅಂದಮೇಲೆ ನಾವು ಕಡೆಯ ಪಕ್ಷ ನಮ್ಮ ದೇಶದ ಪ್ರಜೆಗಳೇ ಆದ ಹರಿಜನ ರಿಗೆ ಅನುಕಂಪ ದಯೆಗಳನ್ನಾದರೂ ತೋರಿಸಲು ಸಾಧ್ಯವಿಲ್ಲವೆ? ಇಂತಹ ಸರಳವಾದ ಆದರ್ಶ ವನ್ನು ಪಾಲಿಸಲಾರೆವಷ್ಟು [illegible] ಇಲ್ಲ, ನಾವು ನಿಜಕ್ಕೂ ಅಷ್ಟೊಂದು ಕಠಿಣ ಹೃದ- ಯರಲ್ಲ. ಅಷ್ಟೊಂದು [illegible] ಎಂದು ನಾನು ನಂಬಿದ್ದೇನೆ. [illegible] ನಮ್ಮ ದೇಶದ ಧೀರರೂ ಉತ್ಸಾಹಶಾಲಿಗಳು ಆದ ಅನರ್ಘ ಯುವಕರಲ್ಲವೆ? [illegible] ಮುಂದಾದರೂ ಹರಿಜನರನ್ನು [illegible]



ರೇಣುಕ

ಬಹಳ ದಿನಗಳ ಹಿಂದೆ. ಒಂದು ದಿನ ಮೂವರು ಚಿಕ್ಕ ಬಾಲಕರು ನಾರ್ವೆಯ ಸರೋವರವೊಂದರ ಬಳಿ ಆಡಿಕೊಳ್ಳುತ್ತಿದ್ದರು. ಅವರು ನಾರ್ವೆಯ ರಾಜ ಓಲಫ್‌ನ ಮಲ ಸಹೋದರರಾಗಿದ್ದರು.

ಸರೋವರದ ಬಳಿ ವಿಹಾರಾರ್ಥವಾಗಿ ಬಂದ ಓಲಫ್ ದೊರೆ ಆಟವಾಡುತ್ತಿದ್ದ ಬಾಲಕರ ಬಳಿ ಬಂದು ಅವರು ಆಡುತ್ತಿರುವುದನ್ನೇ ಗಮನಿಸ ತೊಡಗಿದ. ಅವರಲ್ಲಿ ದೊಡ್ಡ ಹುಡುಗರಿಬ್ಬರು ಮಣ್ಣಿನಲ್ಲಿ ಮನೆಯನ್ನು ಕಟ್ಟಿ, ಅದರ ಮುಂದೆ ಹೊಲ ಮಾಡಿ, ಸುತ್ತಲೂ ಚಿಕ್ಕ ಕಡ್ಡಿಗಳನ್ನು ನೆಟ್ಟು ಹೊಲ ಮನೆಯ ಆಟವಾಡುತ್ತಿದ್ದರು. ಅವರಿಬ್ಬರಿಗೂ ಚಿಕ್ಕವನಾದ ಹೆರಾಲ್ಡನಿಗೆ ಕೇವಲ ಮೂರು ವರ್ಷ ವಯಸ್ಸು. ಆತ ಚಿಕ್ಕ ಚಿಕ್ಕ ಮರದ ಚಕ್ಕೆಗಳನ್ನು ಒಂದಕ್ಕೊಂದು ಸೇರಿಸಿ ದಾರದಿಂದ ಬಿಗಿದು ನೀರಿನಲ್ಲಿ . ತೇಲಿಬಿಟ್ಟು ಅವು ನೀರಿನ ಮೇಲೆ ವೇಗವಾಗಿ ಹೋಗುವುದನ್ನೇ ನೋಡುತ್ತಾ ಆನಂದಿಸುತ್ತಿದ್ದ.

"ಮಗು, ನೀನು , ನೀರಿನ ಮೇಲೆ ಮರದ ಚಕ್ಕೆಗಳನ್ನು ತೇಲಿಬಿಡುತ್ತಿರುವುದಾದರೂ ಏಕೆ?" ರಾಜ ಓಲಫ್ ಕುತೂಹಲದಿಂದ ಹೆರಾಲ್ಡನನ್ನು ಪ್ರಶ್ನಿಸಿದ.

"ಅವು ನನ್ನ ಯುದ್ಧನೌಕೆಗಳು" ಗಂಭೀರವಾಗಿ ನುಡಿದ ಆ ಪುಟ್ಟ ಬಾಲಕ.

ಹೆರಾಲ್ಡನ ಮಾತಿಗೆ ರಾಜ ಮುಗುಳ್ನಕ್ಕು,

"ನೀನು ನಿಜವಾದ ಯುದ್ಧನೌಕೆಗಳನ ಹೊಂದುವ ಕಾಲ ಮುಂದೆ ಬರಬಹುದು" ಎಂದು ನುಡಿದು ಬಾಲಕನ ಬೆನ್ನು ತಟ್ಟಿದ.

ಹೊಲ ಮನೆಯ ಆಟವಾಡುತ್ತಿದ್ದ ಹಿರಿಯ ಬಾಲಕರಿಬ್ಬರನ್ನು ಕರೆದು ಓಲಫ್ ಕೇಳಿದ,

"ದೊಡ್ಡವರಾದ ಮೇಲೆ ನೀವು ಏನಾಗ ಬಯ ಸುತ್ತೀರಿ?"

"ಊರಿನಾಚ ಈ ಸರೋವರದ ವರೆಗಿನ ಭೂಮಿಯನ್ನೆಲ್ಲಾ ನಾನೊಬ್ಬನೇ ಪಡೆದು ಅದನ್ನು ಉತ್ತಿ ಬಿತ್ತಿ ಗೋದಿಯ ಬೆಳೆಯನ್ನು ಬೆಳೆದು ದೊಡ್ಡ ಜಮೀನ್ದಾರನಾಗುತ್ತೇನೆ." ಎಂದು ನುಡಿದ ಹಿರಿಯ ಬಾಲಕ.

"ನಾನು ಹಸುಗಳನ್ನು ಸಾಕಲು ಇಷ್ಟಪಡು ತ್ತೇನೆ. ನಾನು ಸಾಕಿದ ಹಸುಗಳ ಹಿಂಡು ನೀರು ಕುಡಿಯಲು ಸರೋವರಕ್ಕೆ ಬಂದಾಗ ಅಲ್ಲಿ ಒಂದಿಂಚು ಸ್ಥಳವೂ ತೆರವಾಗಿರದೆ ನನ್ನ ಹಸುಗಳೇ ತುಂಬಿರುತ್ತವೆ," ಎಂದು ಒಡನೆ ನುಡಿದ ಎರಡ ನೆಯ ಬಾಲಕ.



"ಪಾಪ! ಪೆಟ್ರೋಲಿನ ಬೆಲೆ ಹೆಚ್ಚಾದ ಕಾರಣ

ಅನಂತರ ರಾಜ ಓಲಫ್‌ನು ನೀರಿನ ಮೇಲೆ ಆಟದ ಹಡಗುಗಳನ್ನು ತೇಲಿಬಿಡುತ್ತಿದ್ದ ಹೆರಾಲ್ಡನ ಕಡೆ ತಿರುಗಿ, "ನನ್ನ ಪುಟ್ಟ ಬಾಲಕನೇ, ದೊಡ್ಡವನಾದ ಮೇಲೆ ನೀನು ಏನಾಗಬಯ ಸುತ್ತಿ?" ಎಂದು ನಗುತ್ತಾ ಕೇಳಿದ.

ಅದಕ್ಕೆ ಆ ಪುಟ್ಟ ಬಾಲಕ "ನಾನು ದೊಡ್ಡವ ನಾದ ಮೇಲೆ ನನಗಾಗಿ ಹೋರಾಡುವ ಜನರ ಗುಂಪು ಕಟ್ಟಿಕೊಳ್ಳುತ್ತೇನೆ. ಆ ಗುಂಪು ಎಷ್ಟು ದೊಡ್ಡದಿರುತ್ತದೆಂದರೆ ನನ್ನ ಅಣ್ಣಂದಿರಿಬ್ಬರ ಹೊಲದ ಗೋದಿಯ ಬೆಳೆಯನ್ನು ಹಸುವಿನ ಹಿಂಡನ್ನೆಲ್ಲಾ ಒಂದೇ ಊಟಕ್ಕೆ ತಿಂದು ತೇಗ ಬಹುದು," ಎಂದು ಹಿಂದೆ ಮುಂದೆ ನೋಡದೆ ಉತ್ತರಿಸಿದ.

ಚಿಕ್ಕ ಬಾಲಕನ ವಯಸ್ಸಿಗೆ ಮೀರಿದ ಉತ್ತರ ವನ್ನು ಕೇಳಿ ರಾಜನಿಗೆ ಸಂತೋಷವಾಯಿತು. ಆತ ಮುಗುಳ್ನಕ್ಕು "ಮುಂದೆ ಒಂದು ದಿನ ನೀನು ರಾಜನಾಗಬಹುದು," ಎಂದು ಬಾಲಕನ ಬೆನ್ನು ತಟ್ಟಿದ. ಅವನು ನಿಜವನ್ನೇ ನುಡಿದಿದ್ದ.

ಬಾಲ್ಯ ಸರಿದು ಯೌವನಕ್ಕೆ ಅಡಿಯಿಡತೊಡ ಗಿದ ಹೆರಾಲ್ಡ್ ಯುದ್ಧವಿದ್ಯೆಯಲ್ಲಿ ಅಪರಿಮಿತ ಪರಿಣತಿಯನ್ನು ಪಡೆಯತೊಡಗಿದ. ಅವನ ಹತ್ತೊಂಬತ್ತನೆಯ ವಯಸ್ಸಿಗೆ ಯುದ್ಧನೌಕೆ ಗಳನ್ನು ನಡೆಸುವುದರಲ್ಲಿ ಅವನನ್ನು ಸರಿಗಟ್ಟು ವವರು ನಾರ್ವೇ ದೇಶದಲ್ಲಿಯೇ ಬೇರೊಬ್ಬನಿರಲಿಲ್ಲ.

ಅಣ್ಣ ಓಲಫ್ ದೊರೆಯ ಜೊತೆಯಲ್ಲಿ ಅನೇಕ ಯುದ್ಧಗಳಲ್ಲಿ ಹೋರಾಡಿ ಅಪಾರ ಅನುಭವ ವನ್ನು ಗಳಿಸಿ ಹೆರಾಲ್ಡ್ ನುರಿತ ಯೋಧನಾದ. ಹೆರಾಲ್ಡನ ಅಣ್ಣಂದಿರಾದರೊ ಬಾಲ್ಯದ ದಿನಗಳಲ್ಲಿ ಇಚ್ಛಿಸುತ್ತಿದ್ದಂತೆ ದೊಡ್ಡ ಕೃಷಿ ಕ್ಷೇತ್ರಗಳ ಒಡೆಯ ರಾಗಿ ಅಪಾರವಾದ ಹಸುಗಳ ಹಿಂಡನ್ನು ಸಾಕುತ್ತ ಸಂತೃಪ್ತ ಜೀವನವನ್ನು ನಡೆಸಲಾರಂಭಿಸಿದರು.

ಕ್ರಿ. ಶ. ೧೦೩೦ರಲ್ಲಿ ಸ್ಟಿಕ್‌ಲೆಸ್ಟೆಂಡ್ ಬಳಿ ರಾಜ

ಹೋರಾಡಿ ವಿಜಯಿಯಾದ. ಆದರೆ ಯುದ್ಧದಲ್ಲಿ ಅವನ ಪ್ರೀತಿಯ ಸಹೋದರ ದೊರೆ ಓಲಫ್ ಕೊಲ್ಲಲ್ಪಟ್ಟ. ಬೈಜೆಂಟೈನ್ ಚಕ್ರವರ್ತಿಯ ಪರವಾಗಿ ಸ್ಕ್ಯಾಂಡಿನೇವಿಯನ್ ಸೇನೆಯನ್ನು ಅನೇಕ ಯುದ್ಧಗಳಲ್ಲಿ ಮುನ್ನಡೆಸಿ ಚಕ್ರವರ್ತಿಗೆ ವಿಜಯವನ್ನು ಗಳಿಸಿಕೊಟ್ಟ. ಬಾಲ್ಟಿಕ್ ಸಾಗರವನ್ನು ದಾಟಿ ಸ್ವೀಡನ್ನಿಗೆ ಹೋಗಿ ನಾರ್ವೆಯ ಬದ್ಧ ಶತ್ರುಗಳಾದ ಡ್ಯಾನಿಶ್ಮರ ವಿರುದ್ಧವಾಗಿ ಯುದ್ಧ ಒಪ್ಪಂದವನ್ನು ಮಾಡಿಕೊಂಡು ಬಂದ. ಕ್ರಿ. ಶ. ೧೦೪೭ರಲ್ಲಿ ಹೆರಾಲ್ಡನು ನಾರ್ವೆಯ ರಾಜನಾದ.

ಆತ ತನ್ನ ಆಳ್ವಿಕೆಯಲ್ಲಿ ದೇಶದಲ್ಲಿನ ಚರ್ಚುಗಳ ಪ್ರಾಬಲ್ಯವನ್ನು ಕೊನೆಗಾಣಿಸಿದ. ನಾರ್ವೆ ಮತ್ತು ಡೆನ್ಮಾರ್ಕ್ ದೇಶಗಳ ನಡುವೆ ಯುದ್ಧವಾಗಲೆಲ್ಲಾ ಗಡಿಗೆ ಸಮೀಪದಲ್ಲಿದ್ದ ರಾಜಧಾನಿ ಟ್ರಾಂಡ್ಹ್ಯೆಮ್ ನಗರ ಆಪತ್ತಿಗೊಳಗಾತ್ತಿತ್ತು. ಈ ಕಾರಣದಿಂದ ಕ್ರಿ. ಶ. ೧೦೫೦ ರಲ್ಲಿ ಹೆರಾಲ್ಡ್ ದೇಶದ ಒಳನಾಡಿನಲ್ಲಿ ಓಸ್ಲೋ ನಗರವನ್ನು ಸ್ಥಾಪಿಸಿ ಅದನ್ನು ರಾಜ್ಯದ ನೂತನ ರಾಜಧಾನಿಯನ್ನಾಗಿ ಮಾಡಿಕೊಂಡ.

ನೌಕಾಸಮರದಲ್ಲಿ ಅಪ್ರತಿಮ ವೀರನಾದ ಹೆರಾಲ್ಡ್ ನಾರ್ವೆಯ ಕಡಲ್ದೊರೆಗಳಲ್ಲೆಲ್ಲಾ ಪ್ರಖ್ಯಾತನು ಮತ್ತು ಕೊನೆಯವನು. ಇಂಗ್ಲೆಂಡಿನ ರಾಜ ಎಡ್ವರ್ಡ್ ದಿ ಕನ್‌ಫೆಸರ್ ಮರಣಿಸಲು (ಕ್ರಿ. ಶ. ೧೦೬೬) ಹೆರಾಲ್ಡನು ಮುನ್ನೂರು ಯುದ್ಧನೌಕೆಗಳೊಂದಿಗೆ ಇಂಗ್ಲೆಂಡನ್ನು ಮುತ್ತಿದನು. ಪುಲ್‌ಫೋರ್ಡ್ ಬಳಿ ಇಂಗ್ಲಿಷ್ ಸೈನ್ಯ ಸೋತು ದಿಕ್ಕೆಟ್ಟು ಓಡಿಹೋಯಿತು. ಆದರೆ ಅದೇ ವರ್ಷ ಸ್ಟ್ಯಾಮ್‌ಫರ್ಡ್ ಬ್ರಿಜ್ ಬಳಿ ನಡೆದ ಇನ್ನೊಂದು ಕದನವೇ ಹೆರಾಲ್ಡನ ಜೀವಿತದಲ್ಲಿ ಕೊನೆಯದಾಯಿತು. ಕದನದಲ್ಲಿ ಇಂಗ್ಲಿಷರು ಗೆದ್ದು ಹೆರಾಲ್ಡ್ ದೊರೆ ಕೊಲ್ಲಲ್ಪಟ್ಟ. ಮುನ್ನೂರು ಯುದ್ಧನೌಕೆಗಳ ಪೈಕಿ ಉಳಿದಿದ್ದ ಇಪ್ಪತ್ತನಾಲ್ಕು ಯುದ್ಧನೌಕೆಗಳು ಹೆರಾಲ್ಡನ ಶವದೊಂದಿಗೆ ನಾರ್ವೆಗೆ ಹಿಂದಿರುಗಿದುವು. ಆತನ ಅವಸಾನದೊಂದಿಗೆ ನಾರ್ವೆಯ ಇತಿಹಾಸದ ಒಂದು ಉಜ್ವಲ ಅಧ್ಯಾಯ ಮುಗಿದಂತಾಯಿತು.

ಹೆರಾಲ್ಡ್ ಬಾಲಕನಿದ್ದಾಗ ಸರೋವರದ ಬಳಿ ಆಡುತ್ತ ಓಲಫ್ ದೊರೆಯ ಬಳಿ ಹೇಳಿದಂತೆ ದೊಡ್ಡವನಾದ ಮೇಲೆ ಸೈನ್ಯವನ್ನು ಕಟ್ಟಿ ನೂರಾರು ಯುದ್ಧನೌಕೆಗಳನ್ನು ಹೊಂದಿ ಅನೇಕ ಯುದ್ಧಗಳನ್ನು ಜಯಿಸಿ ನಾರ್ವೆಗೆ ಹೆಸರು ತಂದ. ಆದರೆ ಅವನ ಸೈನಿಕರು ಅವನ ಅಣ್ಣಂದಿರ ಹೊಲಗಳಲ್ಲಿ ಬೆಳೆದ ಗೋದಿಯನ್ನಾಗಲೀ ಹಸುಗಳನ್ನಾಗಲೀ ಕಬಳಿಸುವ ಪ್ರಯತ್ನ ಮಾಡಲಿಲ್ಲ. ✪



ಬೊಗಳಿ ಬೊಬ್ಬೆಯ ಹಾಕಿ
ಕಚ್ಚಿ ಬಿಚ್ಚುವ ಹಾಗೆ ಬೆಂಬತ್ತಿ
ಕಚ್ಚಿ ಜಲ್ಲಣ ಹರಿಸುತವೆ.
ಶ್ವಾನ ಸ್ವಭಾವ.
ಹೂಂಕರಿಸಿ ಹೆದರಿಸಿ, ನೆಗೆದು
ಡಿಕ್ಕಿಯ ಹೊಡೆದಾಡಿ ಬಡಿದಾಡಿ
ಒಂದಕ್ಕಿನ್ನೊಂದು ಆಹಾರ.
ಇದು ಸಿಂಹ-ಕರಡಿಗಳ ತೆರ.

ಮಗು ನೀ ನಾಯಾಗಬೇಡ,
ಹಿಂಸ್ರ ಪಶುವಾಗಬೇಡ.
ಬೊಗಳಲಿಕೆ ಅಲ್ಲವಯ್ಯಾ ಬಾಯಿ
ಪ್ರಿಯ ನುಡಿಗಳಾಡಲಿಕೆ.
ಕತ್ತರಿಸಂವುದಕಲ್ಲವಯ್ಯಾ ಕಯ್ಯಿ
ಕರುಣೆಯಲಿ ಕರೆಯಲಿಕೆ.

(ಐಸಾಕ್ ವ್ಯಾಟ್ಸ್‌ನ ಇಂಗ್ಲೀಷು
ಕವಿತೆಯ ರೂಪಾಂತರ)

–ಗೋವಾ

ಅವರು ಜಾಂಬಿಯಾದಲ್ಲೂ
ಕನ್ನಡದ ಕಂಪು ಬೀರಿದ್ದಾರೆ

# ಕವಿ ರಾಮಚಂದ್ರ ಶರ್ಮ

ಸಂದರ್ಶನ: **ಜಿ. ಪಿ. ಬಸವರಾಜು**

ವಿಶಾಲ ಹಣೆ. ಹಿಂದಕ್ಕೆ ಮೆಟ್ಟಿಲು ಮೆಟ್ಟಿಲಾಗಿ ಬಾಚಿದ, ಬೆಳ್ಳಗಾಗುತ್ತಿರುವ ಕೂದಲು, ನುಣುಪಾಗಿ ಷೇವು ಮಾಡಿದ ಕೆನ್ನೆಗಳು, ಅಚ್ಚುಕಟ್ಟಾಗಿ ಕತ್ತರಿಸಿದ ಮೀಸೆ, ತುಸು ಕೆಂಪೇರಿದ ಕಣ್ಣುಗಳು. ಜಾಂಬಿಯಾದಲ್ಲಿರುವ ಕನ್ನಡದ ಕವಿ ಬಿ.ಸಿ. ರಾಮಚಂದ್ರ ಶರ್ಮ ಅವರದು ಆಕರ್ಷಕ ರೂಪ.

ಗಾಂಧೀ ಬಜಾರಿನ ಹೋಟೆಲೊಂದರಲ್ಲಿ ಕುಳಿತು ಗಾಜಿನ ಮೂಲಕ ರಸ್ತೆಯಲ್ಲಿ ನಡೆದಾಡುವ ಜನರನ್ನು, ಮರದ ಟೊಂಗೆಗಳ ಮೇಲೆ ಬಂದು ಕುಳಿತು-ಕೊಳ್ಳುತ್ತಿದ್ದ ಪಕ್ಷಿಗಳನ್ನು ನೋಡುತ್ತ, ವಿಚಾರವನ್ನು ಮಥಿಸಿ ಮಥಿಸಿ, ಬೆರಳುಗಳ ಮಧ್ಯೆ ಉರಿಯುವ ಸಿಗರೇಟನ್ನು ಮರೆತು ಎರಡೂ ಕೈಗಳಲ್ಲಿ ಭಾವಾಭಿನಯಿಸುತ್ತ, ಆಡುವ ಮಾತು ಕೇಳುವವನ ಹೃದಯದಾಳಕ್ಕೆ ಇಳಿಯುತ್ತವೆಯೋ ಇಲ್ಲವೋ ಎಂಬುದನ್ನು ಆಗಾಗ ಗಟ್ಟಿ ಮಾಡಿಕೊಳ್ಳುತ್ತ ಮಾತಿನಲ್ಲಿ ಮೈಮರೆತಿದ್ದರು. ಅನೇಕ ವರ್ಷಗಳ ಕಾಲ ವಿದೇಶವಾಸ್ತವ್ಯದ ಫಲವಾಗಿ ಮಾತಿನಲ್ಲಿ ಧಾರಾಳವಾಗಿ ತೂರಿ ಬರುತ್ತಿತ್ತು ಆಂಗ್ಲ ಭಾಷೆ.

ಕಳೆದ ಮೂರು ದಶಕಗಳಿಂದ ಕನ್ನಡದಲ್ಲಿ ಕಥೆ ಕಾವ್ಯ ನಾಟಕಗಳನ್ನು ಬರೆಯುತ್ತ ನವ್ಯ ಮಾರ್ಗದ ಆರಂಭ ಬರಹಗಾರರಲ್ಲಿ ಒಬ್ಬರಾಗಿ ತಮ್ಮದೇ ಆದ ಭಾಷೆ, ಶೈಲಿ, ವಿಶಿಷ್ಟ ವ್ಯಕ್ತಿತ್ವಗಳನ್ನು ಉಳಿಸಿಕೊಂಡಿರುವ ಬಿ. ಸಿ. ರಾಮಚಂದ್ರ ಶರ್ಮ ಈಗ ದೂರದ ಜಾಂಬಿಯಾದಲ್ಲಿದ್ದಾರೆ.

ಜಾಂಬಿಯಾ (ಆಫ್ರಿಕ) ದೂರವಿದೆ ನಿಜ. ಆದರೆ ಜಾಂಬಿಯಾದಲ್ಲಿ ಕನ್ನಡದ ಕಂಪಿದೆ. ಕನ್ನಡದ ವಾತಾವರಣವಿದೆ. ಕನ್ನಡದ ಜನರಿದ್ದಾರೆ. ಕನ್ನಡದ ಮೂವತ್ತು ಸಂಸಾರಗಳು ಲುಸಾಕದಲ್ಲಿವೆ. ಅಲ್ಲೊಂದು ಕನ್ನಡ ಸಂಘವೂ ಇದೆ. ತಿಂಗಳಿಗೊಂದರಂತೆ ಕನ್ನಡದ ಕಾರ್ಯಕ್ರಮಗಳು ಅಲ್ಲಿ ನಡೆಯುತ್ತವೆ. ಕಾವ್ಯ ವಾಚನ, ಕವಿಗಳ ಪರಿಚಯ ಇತ್ಯಾದಿ ಕಾರ್ಯಕ್ರಮಗಳೂ ನಡೆಯುತ್ತವೆ. ಎ.ಕೆ. ರಾಮಾನುಜನ್ ಅಲ್ಲಿಯ ಜನಪ್ರಿಯ ಕವಿ, ಕೆ.ಟಿ. ಗಟ್ಟಿ ಜನಪ್ರಿಯ ಕಾದಂಬರಿಕಾರ, ಯಶವಂತ ಚಿತ್ತಾಲರ 'ಕಥೆಯಾದಳು ಹುಡುಗಿ'ಯನ್ನು ಅನೇಕರು ಮೆಚ್ಚಿಕೊಂಡಿದ್ದಾರೆ. ನೃತ್ಯ, ಸಂಗೀತ, ಸಾಹಿತ್ಯಗಳನ್ನು ಮೇಳವಿಸಿದ ಕಾರ್ಯಕ್ರಮಗಳನ್ನು ಈ ಸಂಘ

ಏರ್ಪಡಿಸುತ್ತದೆ. ವರ್ಷಕ್ಕೊಮ್ಮೆ ಜಾಂಬಿಯನ್ನರನ್ನು ಹಾಗೂ ಇತರರನ್ನು ಆಹ್ವಾನಿಸಿ ಅವರಿಗೆ ಕನ್ನಡ ಸಂಸ್ಕೃತಿಯನ್ನು ಪರಿಚಯ ಮಾಡಿಸುವ ಯತ್ನವೂ ನಡೆಯುತ್ತಿದೆ. ಈ ಸಂಘ ಹುಟ್ಟಿದ್ದು ೧೯೭೫ರಲ್ಲಿ, ರಾಮಚಂದ್ರ ಶರ್ಮ ಇದರ ಕಾರ್ಯದರ್ಶಿ.

ಬೆಳಗಿನ ಹೊತ್ತು. ಗದ್ದಲದ ಹೋಟೆಲೊಂದರಲ್ಲಿ ಕುಳಿತು ದೋಸೆ ತಿನ್ನುತ್ತಿದ್ದೆವು. ದೋಸೆಯಿಂದಲೇ ಮಾತು ಆರಂಭವಾಯಿತು.

ಪ್ರಶ್ನೆ: ಲುಸಾಕದಲ್ಲಿ ದೋಸೆ ಸಿಗುವುದಿಲ್ಲವೇ?

ಶರ್ಮ: ಸಿಗುತ್ತದೆ. ಹೋಟೆಲಿನಲ್ಲಲ್ಲ; ಮನೆಯಲ್ಲಿ. ಅಲ್ಲಿ ಹೋಟಲುಗಳೇ ಇಲ್ಲ.

ಪ್ರಶ್ನೆ: ಹಾಗಾದರೆ ಗೆಳೆಯರು ಕುಳಿತು ಚಾ ಕುಡಿಯುತ್ತ ಹರಟೆ ಕೊಚ್ಚಲು ಸ್ಥಳ?

ಶರ್ಮ: ಸ್ಥಳ ಮನೆಯಲ್ಲಿಯೇ, ಬ್ರಿಟಿಷರು ತಮ್ಮ ಅನುಕೂಲಕ್ಕಾಗಿ ಕಟ್ಟಿಕೊಂಡಿದ್ದ ದೊಡ್ಡ ಬಂಗಲೆಗಳೇ ಸಾಮಾನ್ಯವಾಗಿ ಅನೇಕರ ಮನೆಗಳಾಗಿರುವುದರಿಂದ ಈ ಮನೆಗಳಲ್ಲಿ ವಿಶಾಲ ಹಾಲ್‌ಗಳಿವೆ. ಅಲ್ಲಿ ಎಷ್ಟು ಜನ ಗೆಳೆಯರು ಬೇಕಾದರೂ ಕುಳಿತು ಹರಟಬಹುದು.

ಪ್ರಶ್ನೆ: ಅಲ್ಲಿನ ಹವೆ ?

ಶರ್ಮ: ಹೀಗೆಯೇ, ಬೆಂಗಳೂರಿನಂತೆಯೇ. ಆದರೆ ಚಳಿಗಾಲದಲ್ಲಿ ಸ್ವಲ್ಪ ಚಳಿ ಹೆಚ್ಚು; ಬೇಸಿಗೆಯಲ್ಲಿ ಸೆಕೆ ಹೆಚ್ಚು.

ಪ್ರಶ್ನೆ: ಜನ?

ಶರ್ಮ: ತುಂಬ ಮೃದು. ಆದರೆ ಅಲ್ಲಿಯೂ ಇತ್ತೀಚೆಗೆ ಕಳ್ಳತನ, ದರೋಡೆ, ಖೂನಿ ಜಾಸ್ತಿಯಾಗುತ್ತಿದೆ.

ಜಾಂಬಿಯಾದ ಬಗ್ಗೆ ಮಾತನಾಡುತ್ತ ಆಡುತ್ತ ಶರ್ಮ ಜಾಂಬಿಯಾದೊಂದಿಗೆ ಒಂದಾದರು. ಜಾಂಬಿಯಾ ನಿಜಕ್ಕೂ ಯುವ ಜನರ ದೇಶ. ಅಲ್ಲಿನ ಮಂತ್ರಿಗಳ ವಯಸ್ಸೆಂದರೆ ೨೯–೩೦. ಭಾರತದಲ್ಲಿರುವಂತೆ ಮುದಿ ವಯಸ್ಸಿನ ಮಂತ್ರಿಗಳು ಅಲ್ಲಿಲ್ಲ. ಅಧ್ಯಕ್ಷ ಕೆನೆತ್ ಕೌಂಡಾ ಒಬ್ಬರೇ ಹಿರಿಯ ವಯಸ್ಸಿನವರು (೫೫). ಈ ಮಂತ್ರಿಗಳು ನಮ್ಮ ಮಂತ್ರಿಗಳಂತಲ್ಲ. ಸರಳವಾಗಿ ಬದುಕುತ್ತಾರೆ. ಕ್ಯೂಗಳಲ್ಲಿ ನಿಂತು ಅಂಗಡಿಗಳಲ್ಲಿ ಸಾಮಾನು ಕೊಳ್ಳುತ್ತಾರೆ. ಎಷ್ಟೋ ಬಾರಿ ಇಂಥ ಕ್ಯೂಗಳಲ್ಲಿ ನಿಂತ ಸಂದರ್ಭದಲ್ಲಿಯೇ ನಾನು ಶಿಕ್ಷಣ ಸಚಿವರೊಂದಿಗೆ ಅನೇಕ ಶೈಕ್ಷಣಿಕ ವಿಚಾರಗಳನ್ನು ಚರ್ಚಿಸಿದ್ದೇನೆ, ಎನ್ನುತ್ತಾರೆ ಶರ್ಮ.

ಈ ಮಧ್ಯೆ ಶರ್ಮ ಮುಕ್ತವಾಗಿ ಹೊಗಳಿದ್ದು, ನೈರೇರಿ ಮತ್ತು ಕೆನೆತ್ ಕೌಂಡಾ ಅವರನ್ನು. ನೈರೇರಿ ನಿಜವಾದ ಅರ್ಥದಲ್ಲಿ ಸಮಾಜವಾದಿ. ಸ್ವಂತಿಕೆಯ ಚಿಂತನಶೀಲ. ಪ್ರಗತಿಪರ ಹಾಗೂ ಕ್ರಾಂತಿಕಾರಕ ವಿಚಾರಧಾರೆಯ ಮನುಷ್ಯ. ಪಾಶ್ಚಾತ್ಯ ಮೂಲದ ವಿಚಾರಗಳನ್ನು ಆಫ್ರಿಕದ ಸಂದರ್ಭದಲ್ಲಿಟ್ಟು ನೋಡಿ ಅಳವಡಿಸಿಕೊಳ್ಳಲು ಯತ್ನಿಸುತ್ತಿರುವಾತ. ಆಡುವ ಮಾತಿನ ಅರ್ಥವನ್ನು ತಿಳಿದುಕೊಂಡು, ನುಡಿ-ನಡೆಯ ಸಾಮರಸ್ಯ ಕಾಯ್ದುಕೊಂಡು ಬದುಕುತ್ತಿರುವ ನಿಷ್ಠಾವಂತ.

ಗಾಂಧೀಜೀ ಅವರ ಬಗ್ಗೆ ತುಂಬ ಭಕ್ತಿ–ಗೌರವ ಇರಿಸಿಕೊಂಡಿರುವ ಕೌಂಡಾ ಅವರಿಗೆ ಅಹಿಂಸಾ ಮಾರ್ಗದಲ್ಲಿ ಅಚಲ ನಂಬಿಕೆ. ಹೀಗಾಗಿ ಈ ರಾಷ್ಟ್ರದ political philosophy ಮಾನವತಾವಾದ. ಮನುಷ್ಯನ ಬಗ್ಗೆ ಪ್ರಾಥಮಿಕ ಕಾಳಜಿಯೇ ಇದರ ಮುಖ್ಯ ಉದ್ದೇಶ.

ಜಾಂಬಿಯಾಕ್ಕೆ ಸ್ವಾತಂತ್ರ್ಯ ಬಂದದ್ದು ತುಂಬ ತಡವಾಗಿ, ೧೯೬೪ರಲ್ಲಿ. ಆಗ ಹೆಚ್ಚೆಂದರೆ ಇಡೀ ರಾಷ್ಟ್ರದಲ್ಲಿದ್ದ ಪದವೀಧರರ ಸಂಖ್ಯೆ ೧೦೦. ಹೀಗಾಗಿ ಇಲ್ಲಿನ ಜನ ಇನ್ನೂ ಪೂರ್ಣ ಸ್ವಾವಲಂಬಿಗಳಾಗಿಲ್ಲ. ಇನ್ನೂ ೧೦–೧೫ ವರ್ಷಗಳ ಕಾಲ ಹೊರಗಿನವರಿಗೆ ಅವಕಾಶ ಇದೆ.

ಜಾಂಬಿಯಾದಲ್ಲಿರುವ ವರೆಗೆ I am a committed Zambian ಎನ್ನುವ ಶರ್ಮ ೧೯೭೨ರಿಂದ ಜಾಂಬಿಯಾ ರಾಷ್ಟ್ರಕ್ಕೆ ನಿಷ್ಠರಾಗಿಯೇ ಇದ್ದಾರೆ. ಅದಕ್ಕೆ ಮುನ್ನ ಇಥಿಯೋಪಿಯಾ, ಇಂಗ್ಲೆಂಡುಗಳಲ್ಲಿ ಮನಃಶಾಸ್ತ್ರದ ಸಂಶೋಧಕರೂ ಅಧ್ಯಾಪಕರೂ ಆಗಿದ್ದ ಅವರು ಆಗಲೂ ಈ ನಿಷ್ಠೆಯನ್ನು ಕಾಯ್ದುಕೊಂಡವರೇ. 'ಇನ್‌ವಾಲ್ವ್‌ಮೆಂಟ್ ಬೇಕು. ಇಲ್ಲವಾದರೆ ಬಹಳ ಕಷ್ಟ' ಎನ್ನುತ್ತಾರೆ ಶರ್ಮ.

ಜಾಂಬಿಯಾ ಸರಕಾರದ ಶಿಕ್ಷಣ ಇಲಾಖೆಯಲ್ಲಿ ಮನಃಶಾಸ್ತ್ರ ಸೇವೆಯ ಮುಖ್ಯಸ್ಥರಾಗಿರುವ ಶರ್ಮ ಅವರಿಗೆ ತಮ್ಮ ಪಾಲಿನ ಕೆಲಸ ಮಾಡಿ ಮುಗಿಸಿಯಾಯ್ತು ಎಂಬ ತೃಪ್ತಿ. ಆದ್ದರಿಂದ ಮುಂದಿನ ವರ್ಷ ಸ್ವದೇಶಕ್ಕೆ ಮರಳುವ ಹುಬಬ.

'ಇಲ್ಲಿ ನಿಮಗೊಂದು ಉದ್ಯೋಗ ಎಂಬುದು



(ಫೋಟೋ : ಕೆ. ಜಿ. ಸೋಮಶೇಖರ)

ಸಿಕ್ಕುವುದಿಲ್ಲ?' ಎಂದು ಪ್ರಶ್ನಿಸಿದಾಗ ಶರ್ಮ ಉತ್ತರಿಸಿದರು. "ಇಲ್ಲಿ ಉದ್ಯೋಗ ಸಿಕ್ಕೊಲ್ಲ ಎಂಬುದು ಗೊತ್ತು. ಇಲ್ಲಿನ ಉದ್ಯೋಗ, ಅದರಲ್ಲಿನ ರಾಜಕೀಯ ಹೇಸಿಗೆ ಹುಟ್ಟಿಸುತ್ತವೆ. Freelancer ಆಗಿ ದುಡಿಯುತ್ತೇನೆ, ಓದಿಷ್ಟು ಬರೆಯುತ್ತೇನೆ."

ಪ್ರಶ್ನೆ: ಭಾರತಕ್ಕೆ ಬರುವ ಮಾತನಾಡುತ್ತೀರಿ. ಬರೆಯುವ ಆಸೆ ಇಟ್ಟುಕೊಂಡಿದ್ದೀರಿ. ಸದ್ಯದ ಭಾರತದ ರಾಜಕೀಯ ಸ್ಥಿತಿಯನ್ನು ಗಮನಿಸಿದಾಗ ಮುಂದೆ ಅಭಿವ್ಯಕ್ತಿ ಸ್ವಾತಂತ್ರ್ಯ ಈ ರಾಷ್ಟ್ರದಲ್ಲಿ ಉಳಿಯಬಹುದೆ ?

ಶರ್ಮ: ಈ ರಾಷ್ಟ್ರದಲ್ಲಿ ಮನಸ್ಸಿನಲ್ಲಿರೋದನ್ನ ಹೇಳೋ ಸ್ವಾತಂತ್ರ್ಯ ಯಾವಾಗಲೂ—ತುರ್ತು ಪರಿಸ್ಥಿತಿಯ ಸಂದರ್ಭ ಬಿಟ್ಟು (ಆಗಲೂ 'ಯಾರಾದರೂ' ಹೇಳಿರಬಹುದು) ಇದ್ದೇ ಇದೆ. ಅಧಿಕಾರ ವರ್ಗದಿಂದ ನೆರವು, ಪ್ರೋತ್ಸಾಹ ಬಯಸಿ ಹೋದಾಗ ಮಾತ್ರ ಈ ಸ್ವಾತಂತ್ರ್ಯ ಇಲ್ಲವಾಗಬಹುದು. ನಾನಂತೂ ಇಂಥ ನೆರವು, ಪ್ರೋತ್ಸಾಹಗಳಿಗೆ ಕೈಯೊಡ್ಡುವವನಲ್ಲ. ಆದ್ದರಿಂದ ಈ ಪ್ರಶ್ನೆ ನನಗೆ ಉದ್ಭವಿಸುವುದಿಲ್ಲ.

ರಾಮಚಂದ್ರ ಶರ್ಮ ೧೯೪೮ರಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿದವರು. ಅವರ ಮೊದಲ ಕವನ ಸಂಕಲನ 'ಹೃದಯ ಗೀತೆ' ಪ್ರಕಟವಾದದ್ದು ೧೯೫೧ರಲ್ಲಿ. ಎಂ. ಗೋಪಾಲಕೃಷ್ಣ ಅಡಿಗ ಹಾಗೂ ಎಸ್. ಆರ್. ಎಕ್ಕುಂಡಿ ಶರ್ಮರ ಕವಿತೆಯಲ್ಲಿನ ಮುಖ್ಯ

ಗುಣಗಳನ್ನು ಗುರುತಿಸಿ ಬೆನ್ನು ತಟ್ಟಿದಂದಿನಿಂದ ಇಂದಿನವರೆಗೆ ಅವ್ಯಾಹತವಾಗಿ ಶರ್ಮ ಕನ್ನಡದಲ್ಲಿ ಬರೆಯುತ್ತಲೇ ಬಂದಿದ್ದಾರೆ. ಹೃದಯ ಗೀತೆ, ಏಳು ಸುತ್ತಿನ ಕೋಟೆ, ಬುವಿ ನೀಡಿದ ಸ್ಫೂರ್ತಿ, ಹೇಸರ ಗತ್ತೆ ಮತ್ತು ಬ್ರಾಹ್ಮಣ ಹುಡುಗ ಕವನ ಸಂಕಲನಗಳಾದರೆ (ಇತ್ತೀಚೆಗೆ ಇಂಗ್ಲೀಷ್‌ನಲ್ಲೂ ಒಂದು ಕವನ ಸಂಕಲನ ಪ್ರಕಟಿಸಿದ್ದಾರೆ) ಮಂದಾರಕುಸುಮ, ಏಳನೇ ಜೀವ, ಬೆಳಗಾಯಿತು ಕಥಾ ಸಂಕಲನಗಳು; ಬಾಳಗೀತೆ, ನೀಲಿ ಕಾಗದ, ವೈತರಣಿ, ಸೆರಗಿನ ಕೆಂಡ ಮತ್ತು ಸೆರಳು ನಾಟಕಗಳು. ಪ್ರತಿಭಾ ಸಂದರ್ಶನ–ಸಂದರ್ಶನಗಳ ಒಂದು ಸಂಕಲನ.

ಇಷ್ಟೆಲ್ಲ ಪ್ರಕಾರಗಳಲ್ಲಿ ಬರೆದ ಶರ್ಮರು ಕಾದಂಬರಿಯನ್ನು ಯಾಕೆ ಬರೆಯಲಿಲ್ಲ?

'ಸೋಮಾರಿತನ; ಸುಸ್ತು. ೧೦–೧೫ ಪುಟ ಬರೆಯುವುದರಲ್ಲೇ ಕೈಕಾಲು ಮನಸ್ಸು ಎಲ್ಲವೂ ಸುಸ್ತು. ನನ್ನ ಪದ್ಯಗಳನ್ನು ನೋಡಿ, ಉದ್ದ ಪದ್ಯಗಳನ್ನು ನಾನು ಬರೆದೇ ಇಲ್ಲ' ಎಂದರು ಶರ್ಮ.

ಮುಂದಿನ ವರ್ಷ ಕಾದಂಬರಿಯೊಂದನ್ನು ಬರೆಯುವ ತಮ್ಮ 'ಮುಗುಂ ಉದ್ದೇಶ' ವನ್ನು ಶರ್ಮ ಗುಟ್ಟಾಗಿ ಹೇಳಿದರು.

ಪ್ರಶ್ನೆ: ಹಾಗಾದರೆ ನಿಮ್ಮ ಕಾದಂಬರಿ, ಕನ್ನಡದಲ್ಲಿ ಈ ವರೆಗೆ ಬಂದಿರುವ ಕಾದಂಬರಿಗಳಿಗಿಂತ ಭಿನ್ನವಾಗಿರುತ್ತದೆಯೋ?

ಶರ್ಮ: (ನಗುತ್ತ) ಇರಬಹುದು. ಯಾಕೆಂದರೆ ನಾನು ಇತ್ತೀಚೆಗೆ ಕನ್ನಡದಲ್ಲಿ ಬರುತ್ತಿರುವ ಕಾದಂಬರಿಗಳನ್ನು ಓದುತ್ತಿಲ್ಲ. ಜಾಂಬಿಯಾದಲ್ಲಿ ಸಿಗುವುದೇ ಇಲ್ಲ.

ಪ್ರಶ್ನೆ: 'ಹೃದಯಗೀತ'ಕ್ಕೆ ಹಿನ್ನುಡಿ ಬರೆಯುತ್ತ ಎಸ್.ಆರ್. ಎಕ್ಕುಂಡಿ 'ಜನತೆಯ ಕಾವ್ಯ ಜನತೆಯ ಭಾಷೆಯಲ್ಲಿರಬೇಕು' ಎಂದರು. ಅಂದರೆ ಕಾವ್ಯದ ಭಾಷೆ ಆಡುಮಾತೇ?

ಶರ್ಮ: ಈ ಬಗ್ಗೆ ನನ್ನ ವಿಚಾರ ಈಗ ಸ್ವಲ್ಪ ಬದಲಾಗಿದೆ. ಜನ ಆಡಿದ ಭಾಷೆಯನ್ನೇ ಉಪಯೋಗಿಸುವ ಬಲತ್ಕಾರ ಯಾವ ಕವಿಗೂ ಇರಬಾರದು. ಕಾವ್ಯಭಾಷೆಯ ಮೂಲ ದ್ರವ್ಯ ಆಡು ಭಾಷೆಯೇ. ಅದನ್ನು ಕವಿಯಾದವನು ತನ್ನ ಅನುಭವಕ್ಕೆ, ವಸ್ತುಸ್ಥಿತಿಕತೆಗೆ ತಕ್ಕಂತೆ ಬಗ್ಗಿಸಿಕೊಳ್ಳುತ್ತಾನೆ. ಅಡಿಗರೂ ಆಡು ಭಾಷೆಯನ್ನೇ ಪೂರ್ಣವಾಗಿ ಬಳಸಿಕೊಂಡಿಲ್ಲ. ತಮ್ಮ ಕಾವ್ಯವನ್ನು ಸಂಕ್ಷಿಪ್ತವಾಗಿ, ಶಕ್ತಿಯುತವಾಗಿ ಹೇಳಲು, ಆಡು ಭಾಷೆಯನ್ನು ಬದಲಾಯಿಸಿಕೊಂಡಿದ್ದಾರೆ. ಸಂಸ್ಕೃತ ಬಳಸಿದ್ದಾರೆ. ಈ ದೃಷ್ಟಿಯಿಂದ ನೋಡಿದರೆ ಪುಟ್ಟಪ್ಪನವರ ಬಗ್ಗೆ ಮಾಡಿದ ಟೀಕೆಯನ್ನು ಅಡಿಗರ ಬಗ್ಗೆಯೂ ಮಾಡಬೇಕಾಗುತ್ತದೆ.

ಪ್ರಶ್ನೆ: ೧೯೫೭ರಷ್ಟು ಹಿಂದೆಯೇ ನೀವು–

ಎಂದಿಗಯ್ಯ, ಎಂದಿಗೆ? ಎಂದಿಗೋ, ಎಂದಿಗೆ?
ನನ್ನ ನಾಡ ಮುಂದಿಗೆ,
ತಿಳುವು ಮೊಳೆವುದೆಂದಿಗೆ?
ನಾಡ ನೂರು ಕೋಟಿ ಗಂಡು ಹೆಣ್ಣು ಕೂಸು
ಕುನ್ನಿಗೆ, ಹುಟ್ಟಿಗಂಟಿ ಬಂದ ಚಿತ್ತದಾಸ್ಯ
ಕಳೆವುದೆಂದಿಗೆ?

–ಎಂದು ಪ್ರಶ್ನಿಸಿ ಕಳಕಳಿ ವ್ಯಕ್ತಪಡಿಸಿದ್ದೀರಿ. ಇಷ್ಟು ವರ್ಷಗಳ ನಂತರ ಈ ಸಾಲುಗಳನ್ನು ಮತ್ತೆ ಮೆಲುಕುಹಾಕಿದಾಗ ನಿಮಗೆ ಏನನ್ನಿಸುತ್ತದೆ?

ಶರ್ಮ: ಆ ಚಿತ್ತ ದಾಸ್ಯ ನಮ್ಮಲ್ಲಿ ಇನ್ನೂ ಹೋಗಿಲ್ಲ. ಬರೆಹಗಾರರಲ್ಲಿ, ವಿಮರ್ಶಕರಲ್ಲಿ ಈ ದಾಸ್ಯ ಇನ್ನೂ ಇದೆ. ಜನರಲ್ಲಂತೂ ಇದು ಖಂಡಿತಾ ಹೋಗಿಲ್ಲ. ಉಳಿದವರಲ್ಲಿರುವ ಚಿತ್ತ ದಾಸ್ಯವನ್ನು ಹೋಗಲಾಡಿಸಬೇಕಾದ ಬರಹಗಾರನಲ್ಲೇ ಈ ದಾಸ್ಯ ಇದೆ ಎಂದರೆ ಅಂದಿನ ಆ ಸಾಲುಗಳು ಇಂದಿಗೂ ಅರ್ಥಪೂರ್ಣ.

ಪ್ರಶ್ನೆ: ಈ ಚಿತ್ತ ದಾಸ್ಯ ತೊಡೆದು ಹಾಕಲು ನೀವು ಸೂಚಿಸುವ ಮಾರ್ಗ?

ಶರ್ಮ: ವಿದ್ಯಾಭ್ಯಾಸ: ನಮ್ಮ ವಿದ್ಯಾಭ್ಯಾಸದ ಕ್ರಮವನ್ನು ಬದಲಿಸುವುದರಿಂದ ಚಿತ್ತ ಮುಕ್ತಿ ಸಾಧ್ಯ. ಆದರೆ ನಮ್ಮಲ್ಲಿ ಅದು ಯಾವತ್ತೂ ಬರೋಲ್ಲ. ನಮ್ಮದು ಸಂಪ್ರದಾಯಶರಣ ಸಮಾಜ. ಇಲ್ಲಿ ದೇವರು, ಗುರು ಅಥವಾ ಬಾಬಾ, ರಾಜಕಾರಣಿ ಅಥವಾ ಮಠಾಧಿಪತಿ ಇರೋದು ಸಾಮಾನ್ಯ. ಇದೆಲ್ಲ ಇರುವವರೆಗೆ ಚಿತ್ತ ದಾಸ್ಯ ಇರೋದೇ. ಸ್ವಂತಿಕೆಯ ಚಿಂತನಶೀಲತೆಯನ್ನು ಪ್ರೋತ್ಸಾಹಿಸಿದಾಗ ಮಾತ್ರ ಚಿತ್ತ ದಾಸ್ಯ ಹೋಗುತ್ತದೆ.

ಪ್ರಶ್ನೆ: ಹಿಂದೊಮ್ಮೆ ನೀವು ಕಮ್ಯೂನಿಸ್ಟ್ ಪಕ್ಷದಲ್ಲಿದ್ದಿರೆಂದು ಕೇಳಿದ್ದೇನೆ. ಈಗಲೂ ಆ ಪಕ್ಷದಲ್ಲಿದ್ದೀರಾ?

ಶರ್ಮ: ಹಿಂದೆ ಲೆಫ್ಟಿಸ್ಟ್ ಒಲವಿತ್ತು. ಇವತ್ತಿ

ಸಿ ಅದಿದೆ. ಕಮ್ಯೂನಿಸಂನ ಮೂಲ ಕನಸು ಎಲ್ಲರಿಗೂ ತಿನ್ನಲು ಅನ್ನ, ಇರಲು ಸೂರು ಬೇಕು ಎಂಬುದು. ಎಲ್ಲ ಒಳ್ಳೆಯ ಧರ್ಮಗಳ ಸಾಹಿತ್ಯಗಳ ಆಶಯವೂ ಇದೇ. ಈ ದೇಶದ ಎಲ್ಲ ತರದ ದಾರಿದ್ರ್ಯ ನೋಡಿದಾಗ ಪ್ರತಿಯೊಬ್ಬ ಸಾಹಿತಿಗೂ ಹೀಗನ್ನಿಸದೆ? ಆಶ್ಚರ್ಯವೇನು? ಪ್ರಾಣಿಗಳಲ್ಲೂ ಕಾಣದಂಥ ಹಲ್ಕಾತನ, ಸ್ವಾರ್ಥ, ಕ್ರೌರ್ಯ ಮನುಷ್ಯರಿಗೆ ಮಾತ್ರ ಸಾಧ್ಯ.

ಪ್ರಶ್ನೆ: ಸಾಹಿತಿಯಾದವನಿಗೆ ರಾಜಕೀಯ ಪಕ್ಷವೊಂದರ ಜೊತೆಗೆ ಯಾವ ಸಂಬಂಧ ಇರಬೇಕು?

ಶರ್ಮ: ಇಂಡಿಯಾದ ಇಂದಿನ ರಾಜಕೀಯ ಸಂದರ್ಭವನ್ನು ಗಮನಿಸಿದಾಗ ಈ ಪ್ರಶ್ನೆಗೆ ಉತ್ತರ ಸಾಧ್ಯವೇ ಇಲ್ಲ. ಯಾವುದೇ ರಾಜಕೀಯ ಪಕ್ಷಕ್ಕೆ ಒಂದು ಪ್ರಣಾಳಿಕೆ, ನಿಲುವು ಇಲ್ಲದೆ ಹೋದಾಗ ಬಹಳ ಕಷ್ಟವಾಗುತ್ತೆ. ಹಿಂದಿನ ಸಲ ನಾನು ಭಾರತಕ್ಕೆ ಬಂದಾಗ ಇಂದಿರಾ ಗಾಂಧೀ ಹೊರಟುಹೋಗಿದ್ದರು. ಈಗ ಮುರಾರ್ಜಿ ಹೊರಟು ಹೋಗಿದ್ದಾರೆ. ಅಧಿಕಾರಕ್ಕಾಗಿ ಕಿತ್ತಾಡುವ ರಾಜಕಾರಣಿಗಳಿಂದಾಗಿ ಸದ್ಯದ ಸ್ಥಿತಿ ತೀರ ಗೊಂದಲಮಯವಾಗಿದೆ. ಅನಂತಮೂರ್ತಿಯವರ ಮಾತ್ನಲ್ಲಿ ಈಗ ದೊಡ್ಡ ಪಕ್ಷ ಬಿದ್ದಿರಬೇಕು. ನಮ್ಮ ಮೌಲ್ಯಗಳೆಲ್ಲ ದೊರಗಿನ ಮೌಲ್ಯಗಳ, ಘಟನೆಗಳ ಮೇಲೆ ನಿಂತಿವೆ. ಇಂಥ ದರಿದ್ರ ಸ್ಥಿತಿಯಲ್ಲಿ ಸಾಹಿತಿಯಾದವನು ಬಹಳ ಯೋಚಿಸಬೇಕು.

ಪ್ರಶ್ನೆ: ಸಾಹಿತಿಯಾದವನ 'ಕಮಿಟ್‌ಮೆಂಟ್' ಏನಾಗಿರಬೇಕು?

ಶರ್ಮ: ತಾನು ಬರೆಯಬೇಕೆನಿಸಿದ್ದಕ್ಕೆ, ಸತ್ಯಸಂಧನಾಗಿ, ಸಮರ್ಪಕ ಅಭಿವ್ಯಕ್ತಿ ಕೊಡಲು ಬದ್ಧನಾಗಿರಬೇಕು. ಬರೆಯುವ ಸಾಹಿತ್ಯ, ಬದುಕುವ ವಿಧಾನಕ್ಕೆ ಸಾಂಗತ್ಯ ಇರಬೇಕು. ಸಾಹಿತಿ ತನ್ನ ಬರವಣಿಗೆಯ ಮೂಲಕ ಯಾವುದನ್ನು ಘೋಷಿಸುತ್ತಾನೋ ಅದಕ್ಕೆ ಕಂಕಣಬದ್ಧನಾಗಿ ಬದುಕಬೇಕು. ಇಲ್ಲವಾದರೆ ಬರಿಯ ಬೂಟಾಟಿಕೆಯಾಗುತ್ತೆ.

ಪ್ರಶ್ನೆ: ಇಷ್ಟು ವರ್ಷಗಳ ಸಾಹಿತ್ಯ ರಚನೆಯಲ್ಲಿ ನಿಮ್ಮ ಹುಡುಕಾಟ ಏನಾಗಿತ್ತು?

ಶರ್ಮ: ಹುಡುಕಾಟ? ನಿನ್ನೆಯವರೆಗೂ ಇದನ್ನೇ ಯೋಚಿಸುತ್ತಿದ್ದೆ. ನನ್ನ ಕಾದಂಬರಿಗೆ "ಅನ್ವೇಷಣೆ" ಎನ್ನುವ ಹೆಸರನ್ನು ಇಡಲೇ ಎಂದು ಯೋಚಿಸುತ್ತಿದ್ದೆ(ನಗು). ಬಹುಶಃ ದರ್ಶನ (philosophy) ಇನ್ನೂ ಸಿಕ್ಕಿಲ್ಲವೇನೋ ಎನಿಸುತ್ತೆ. ಯಾವುದೇ ದೇವರಿಗೆ. ಮತಕ್ಕೆ ಶರಣಾಗದ morality ನನ್ನದು. ಈ ದೃಷ್ಟಿಯಿಂದ ಮಾನವತಾವಾದದಲ್ಲಿ ನನಗೆ ನಂಬಿಕೆ ಇದೆ. ಹೀಗಾಗಿ ನಾನು ಬರೆದಿರುವುದರಲ್ಲಿ ನೋವೇ ಜಾಸ್ತಿ.

ಪ್ರಶ್ನೆ: ನವ್ಯ ಮಾರ್ಗದ ಆರಂಭ ಬರಹಗಾರರಲ್ಲಿ ಒಬ್ಬರಾದ ನಿಮಗೆ ಈ ಮಾರ್ಗದ ಸತ್ವ ತೀರಿ ಹೋಯಿತು ಎನಿಸುತ್ತಿದೆಯೋ?

ಶರ್ಮ: ಯಾವ ಸಾಹಿತ್ಯದ ಮಾರ್ಗವೇ ಆಗಲಿ ೨೫–೩೦ ವರ್ಷ ಉಳಿಯಬಹುದು. ನಂತರ ಅದೇ ಒಂದು ಸಂಪ್ರದಾಯವಾಗುತ್ತದೆ. ಹಾಗೆಯೇ ಹೊಸ ತಲೆಮಾರಿನವರ ಅಭಿವ್ಯಕ್ತಿಗೆ ಸವಾಲೂ ಆಗುತ್ತದೆ. ಸೃಜನಶೀಲ ಯುವಬರಹಗಾರರ ಹೊಸ ಮಾರ್ಗ ಹುಡುಕಬೇಕಾಗುತ್ತದೆ. ನವ್ಯ ಮಾರ್ಗ ಮುಗಿದಿದೆ ಎನ್ನಲು ಅಂತಿಮ ಮೆರವಣಿಗೆ ಹೋದದ್ದು ನಾನು ನೋಡಲಿಲ್ಲ. ನವ್ಯ ಮಾರ್ಗ ವಿಮರ್ಶಕರು ಕೊಟ್ಟ ಹೆಸರು. ಅಡಿಗರನ್ನೇ ತೆಗೆದುಕೊಂಡರೆ ಅವರ ಕಾವ್ಯ ಮಾರ್ಗ ಇನ್ನೂ ಉಳಿದಿದೆ. ಅಲ್ಲದೆ ನವ್ಯ ಮಾರ್ಗದಲ್ಲಿ ಬರೆದವರೆಲ್ಲ ಒಂದೇ ಥರ ಬರೆಯಲಿಲ್ಲ. ಒಬ್ಬೊಬ್ಬರೂ ತಮ್ಮ ತಮ್ಮ ಅಭಿವ್ಯಕ್ತಿಯನ್ನು ಬೇರೆ ಬೇರೆ ರೀತಿಯಲ್ಲಿ ಹಿಡಿದಿಟ್ಟಿದ್ದಾರೆ.

ಪ್ರಶ್ನೆ: ನವ್ಯದ ಹೆಸರಿನಲ್ಲಾದ ಖೋಟಾ ಸಾಹಿತ್ಯ ರಚನೆ?

ಶರ್ಮ: ಇದು ಎಲ್ಲ ಕ್ಷೇತ್ರದಲ್ಲೂ ಇರುವಂಥದು. ದೇವರು ಕಡಿಮೆ ಇದ್ದಾಗ ಭಕ್ತರು ಜಾಸ್ತಿ. ಸ್ವರ್ಗಕ್ಕಿರುವ ಪಿಕೆಟ್‌ಗೇಟ್‌ನಲ್ಲಿ ಒಬ್ಬರಿಗೇ ಪ್ರವೇಶವಾದರೂ, ಈ ಗೇಟ್‌ನ ಮುಂದೆ ಗುಂಪೇ ನಿಂತಿರುತ್ತೆ. ಯಾವ ಆಕರ್ಷಕ ಚಳವಳಿ ಬಂದರೂ, ಹಿಂಬಾಲಕರು ಇದ್ದೇ ಇರುತ್ತಾರೆ. ನಿಜವಾದ ಸೃಜನಶೀಲ ಕಾರ್ಯಕ್ಕೆ ಹಿಂಬಾಲಕರು ಬೇಕಾಗಿಯೇ ಇಲ್ಲ.

ಪ್ರಶ್ನೆ: ಕನ್ನಡದಲ್ಲಿ ಇತ್ತೀಚೆಗೆ ತಲೆ ಎತ್ತಿರುವ ಶೂದ್ರ, ದಲಿತ ಹಾಗೂ ಎಡಪಂಥೀಯ ಚಳವಳಿಗಳು ಹೊಸ ಸಾಹಿತ್ಯ ಮಾರ್ಗವೊಂದನ್ನು ತೋರಿಸಬಲ್ಲವೇ?

ಶರ್ಮ: ಸ್ಪಷ್ಟವಾಗದ ಸಮಸ್ಯೆಗಳ ಬಗ್ಗೆ ಗಮನ ಸೆಳೆಯುವುದು ಅಗತ್ಯ. ಪ್ರಗತಿ ಶೀಲ ಸಾಹಿತ್ಯದ ಚಳವಳಿ ಬಂದಾಗ ಅದು ಸಮಾಜದ ಕೆಲವು ನಿರ್ದಿಷ್ಟ

ಸಮಸ್ಯೆಗಳತ್ತ ಗಮನ ಸೆಳೆಯಿತು. ಸಾಹಿತ್ಯದಲ್ಲಿ ಹೀಗೆ ಕಾಲಕಾಲಕ್ಕೆ ಪುನರ್‌ಪರಾಮರ್ಶೆ ನಡೆಯುತ್ತಿರುತ್ತೆ. ಅದರಿಂದ ಕೆಟ್ಟದೇನೂ ಆಗ್ತಾ ಇಲ್ಲ. ಕೆಟ್ಟದ್ದು ಮಾನವ-ಮಾನವ ಸಂಬಂಧದಲ್ಲಿ ಆಗ್ತಿರಬಹುದು. ಶೂದ್ರ-ಬ್ರಾಹ್ಮಣ ಗದ್ದಲದಲ್ಲಿ ಸುಮತಿ ಲಂಕೇಶನನ್ನು, ಲಂಕೇಶ ಸುಮತಿಯನ್ನು ಮಾತನಾಡಿಸಬಹುದು. ಬ್ರಾಹ್ಮಣನೊಬ್ಬ ಹರಿಜನರ ಬಗ್ಗೆ ಬರೆಯುವುದು ಫ್ಯಾಶನ್ ಆಗುತ್ತೆ. ಆದರೆ ಹರಿಜನರಲ್ಲೇ ಒಬ್ಬ ತನ್ನ ಅಭಿವ್ಯಕ್ತಿಗೆ ಮಾರ್ಗ ಕಂಡುಕೊಂಡಾಗ ಅದು ಅರ್ಥಪೂರ್ಣವಾಗಬಹುದು. ಈ ಆಂದೋಲನಗಳು ಹೊಸ ಮಾರ್ಗವೊಂದನ್ನು ಸಾಹಿತ್ಯದಲ್ಲಿ ನಿರ್ಮಿಸುವ ಬಗ್ಗೆ ತುಂಬ ಅನುಮಾನ ಇದೆ. ಕಾರಣ ನವ್ಯ ಕಾವ್ಯದ ಮಾರ್ಗ ಆರಂಭವಾದದ್ದು ಸಾಹಿತ್ಯದ ಬಗೆಗಿನ ಮೂಲಭೂತ ಪ್ರಶ್ನೆಗಳಿಂದ, ಕಾಳಜಿಯಿಂದ, ವಸ್ತು, ಭಾಷೆ, ರೂಪ(form)ಗಳ ಬಗ್ಗೆ. ಈಗಿನ ಆಂದೋಲನಗಳು ಬರಿಯ ವಸ್ತುವಿನ ಬಗ್ಗೆ ಸೀಮಿತವಾಗಿರುವ ಕಾರಣ ಇವುಗಳ ವ್ಯಾಪ್ತಿ ಕಡಿಮೆಯಾಗುತ್ತದೆ.

ಪ್ರಶ್ನೆ: ಹಾಗಾದರೆ ಈ ಆಂದೋಲನಗಳು ಬಹುಕಾಲ ಉಳಿಯುವುದಿಲ್ಲವೇ?

ಶರ್ಮ: ಅದು ಸಾಹಿತಿಯ ವ್ಯಕ್ತಿತ್ವವನ್ನು ಅವಲಂಬಿಸಿದ್ದು. ಮ್ಯಾಕ್ಸಿಂ ಗಾರ್ಕಿಯಂಥ ದಲಿತ ಸಾಹಿತಿಯೊಬ್ಬ ಬಂದರೆ ಯಾಕೆ ಬಹಳ ಕಾಲ ಉಳಿಯುವುದಿಲ್ಲ? ಬದುಕಿನ ಒಂದಂಶವನ್ನು ಮಾತ್ರ ಇಡೀ ಬದುಕು ಎಂದು ಪರಿಗಣಿಸಿದಾಗ ತಪ್ಪಾಗುತ್ತೆ.

ಪ್ರಶ್ನೆ: ಕಾಮವೊಂದನ್ನೇ ಇಡೀ ಬದುಕು ಎಂದು ಪರಿಗಣಿಸಿದ್ದೇ ನವ್ಯ ಕಾವ್ಯದ ತಪ್ಪಲ್ಲವೇ?







"ಇಲ್ಲ, ಇಲ್ಲ, ಶಾಸ್ತ್ರಿಗಳೇ, ಈ ಸಲ ಹರಿಕಥೆ ಮಾಡಿಸುವುದಿಲ್ಲ. ಯಾಕೆಂದರೆ, ಹೋದ ಸಲ ನಾನು ನಿಮ್ಮ ಕಥೆಯನ್ನು 'ಟೇಪ್' ಮಾಡಿಕೊಂಡಿದ್ದೇನೆ..."

ಶರ್ಮ: ಇದು ಸರಿಯಲ್ಲ. ಅಡಿಗರು ಇಡೀ ಬದುಕಿನ ಬಗ್ಗೆ ಚಿಂತನೆ ಮಾಡುವ ಕವಿಯಲ್ಲವೇ? ನಿಜಕ್ಕೂ ನವ್ಯ ಮಾರ್ಗ ಕೆಲವು ಸಾಧ್ಯತೆಗಳ ಬಗ್ಗೆ ಶೋಧ ನಡೆಸಿತು. ಮನಸ್ಸಿನ ಪ್ರಪಂಚದ ವ್ಯಾಪಾರವನ್ನು ಅಲ್ಲಿಯವರೆಗೆ ಯಾರೂ ಬರೆಯುತ್ತಿರಲಿಲ್ಲ. ಮನಸ್ಸಿನ ಪ್ರಪಂಚಕ್ಕೆ ಹೊರ ಪ್ರಪಂಚವನ್ನೂ ತೆಗೆದುಕೊಂಡ ಕವಿ ಕೇವಲ ಕಾಮದ ಅಬ್‌ಸೆಷನ್ನಿನಿಂದ ಹೊರಬರಲಾರ.

ಪ್ರಶ್ನೆ: ಸಣ್ಣಕತೆ, ಕಾವ್ಯ, ನಾಟಕಗಳಲ್ಲಿ ಬರುತ್ತಿರುವ (ಕನ್ನಡದಲ್ಲಿ) ಇತ್ತೀಚಿನ ಬರವಣಿಗೆ ನಿರಾಶಾದಾಯಕ ಎಂಬುದು ಕೆಲವರ ಅಭಿಪ್ರಾಯ, ಇದು ಸರಿಯೆ?

ಶರ್ಮ: ನನಗೆ ಗೊತ್ತಿಲ್ಲ. ಇತ್ತೀಚೆಗೆ ಬರುತ್ತಿರುವ ಬರವಣಿಗೆ ನನಗೆ ಸಿಗುವುದೇ ಕಡಿಮೆ. ಹೀಗಾಗಿ ಈ ವಿಷಯದಲ್ಲಿ ನಿರ್ಣಯ ಹೇಳಲಾರೆ.

ಪ್ರಶ್ನೆ: ಬೇರೊಂದು ನೆಲದಲ್ಲಿ ನಿಂತು ಬೇರೊಂದು ಪರಿಸರದ ಮಧ್ಯೆ ಬೇರೆಯೇ ಜನರ ಬದುಕನ್ನು ಕಂಡು ಅನುಭವಿಸಿ ಕನ್ನಡದಲ್ಲಿ ಬರೆಯುವಾಗಿನ ನಿಮ್ಮ ಕಷ್ಟಗಳೇನು?

ಶರ್ಮ: ಮೊದಲ ಕಷ್ಟ ಭಾಷೆಯದು. ಆದು ಭಾಷೆಯ ಸಂಪರ್ಕವೇ ಕಡಿಮೆಯಾಗಿರುವುದರಿಂದ ನನ್ನದೇ ಆದ ಭಾಷೆಯನ್ನು ಸೃಷ್ಟಿಸಿಕೊಳ್ಳಬೇಕು. ಎರಡನೆಯ ಕಷ್ಟ ವಸ್ತುವಿನದು. ಕನ್ನಡದ ಸಂದರ್ಭದಲ್ಲಿ ಉದ್ಭವವಾಗುವ ಸಮಸ್ಯೆಗಳನ್ನು ಕುರಿತು ಕನ್ನಡದಲ್ಲಿ ಬರೆಯಬೇಕು. ನಿಜಕ್ಕೂ ಇದು ನಾನು ಎದುರಿಸುತ್ತಿರುವ ಸವಾಲು. ಈ ಸವಾಲನ್ನು ನಾನು ಅಂಗೀಕರಿಸಿದ್ದೇನೆ. ಸವಾಲನ್ನು ಎದುರಿಸುವ ಪ್ರಯತ್ನವನ್ನು ಬಿಟ್ಟು ಕೊಡಲು ಸಿದ್ಧನಿಲ್ಲ. ಇದೇ ನನ್ನ ಬದುಕು. ನನ್ನ involvement ಇದ್ದ ಕಡೆಯೇ ಸಾಹಿತ್ಯ ರಚಿಸಬೇಕು. ಜಾಂಬಿಯಾದಲ್ಲಿ ಕುಳಿತು ಭಾರತದ ಬದುಕಿನ ಬಗ್ಗೆ ಸಾಹಿತ್ಯ ರಚಿಸಲಾರೆ. ಈ ರೀತಿಯ ಪ್ರಯತ್ನಗಳಿಂದಲೇ ಭಾಷೆ ಪುಷ್ಟವಾಗುತ್ತದೆ ಎಂಬುದು ನನ್ನ ಭಾವನೆ.

ಪ್ರಶ್ನೆ: ಇತ್ತೀಚೆಗೆ ನೀವು ಇಂಗ್ಲೀಷ್‌ನಲ್ಲಿ ಕಾವ್ಯ ಬರೆದು ಒಂದು ಸಂಕಲನವನ್ನು ತಂದಿದ್ದೀರಲ್ಲಾ ಯಾಕೆ?

ಶರ್ಮ: ಕನ್ನಡದಲ್ಲಿ ನನ್ನ ಪದ್ಯಗಳಿಗೆ ಅಷ್ಟಾಗಿ ಮರ್ಯಾದೆ ಇಲ್ಲ ಎನಿಸುತ್ತಿದೆ. ಇಂಗ್ಲೀಷಿನಲ್ಲೂ ಬರೆಯುವ ಸಾಮರ್ಥ್ಯ ಇದೆ. ನಾನೇ ನನ್ನ ಓದುಗರನ್ನು ಸೃಷ್ಟಿಸಿಕೊಳ್ಳಲು ಸಾಧ್ಯವೇ ಅನ್ನೋ ಕಾರಣವೂ ಇರಬಹುದು. ಹಿಂದೆ ಇಂಗ್ಲೀಷಿನಲ್ಲಿ ಕಥೆ ಬರೆಯುತ್ತಿದ್ದೆ. ಆದರೂ ಕನ್ನಡದ ಮೋಹ ಬಿಟ್ಟಿಲ್ಲ. ಏನನ್ನೇ ನಾನು ಇಂಗ್ಲೀಷಿನಲ್ಲಿ ಬರೆದರೂ ಶೀಘ್ರದಲ್ಲೇ ಅಥವಾ ಸ್ವಲ್ಪ ತಡವಾಗಿ ಅದನ್ನೇ ಕನ್ನಡದಲ್ಲಿ ಬರೆಯುತ್ತೇನೆ.

ಪ್ರಶ್ನೆ: ಶಿಕ್ಷಣದ ಬದಲಾವಣೆ ಬಗ್ಗೆ ಜಾಂಬಿಯಾ ಸರ್ಕಾರಕ್ಕೆ ಕೆಲವು ಸಲಹೆ ಮಾಡಿದ್ದೀರೆಂದು ಕೇಳಿದೆ ವಿವರಿಸಿ.

ಶರ್ಮ: ಶಿಕ್ಷಣ ಎಂದರೆ ಬರೀ ಪುಸ್ತಕದ ಬವಣೆಯಲ್ಲ. ಇಡೀ ಸಮಾಜವನ್ನೇ ಬದಲಾಯಿಸುವಂಥ ಶಿಕ್ಷಣ ಇರಬೇಕು. ಕೈ ಕೆಲಸಕ್ಕೂ ಮರ್ಯಾದೆ ಸಿಗಬೇಕು. ವಿದ್ಯಾರ್ಥಿ ಅರ್ಧಕಾಲ ತರಗತಿ ಕೋಣೆಯಲ್ಲಿ ಕಳೆದರೆ ಉಳಿದರ್ಧ ಕಾಲ ಹೊಲದಲ್ಲಿ ದುಡಿಯಬೇಕು. ಅವನು ಓದುವಾಗಲೇ ದೇಶದ ಸಂಪತ್ತಿಗೆ ಕಾಣಿಕೆ ಸಲ್ಲಿಸುವಂಥ ಶಿಕ್ಷಣ ಬೇಕು.

ಮಕ್ಕಳ ವಿದ್ಯಾಭ್ಯಾಸಕ್ಕೆ ಇರುವ ಪ್ರಾಮುಖ್ಯತೆಯೇ ವಯಸ್ಕರ ಶಿಕ್ಷಣಕ್ಕೂ ಇರಬೇಕು. ನಮ್ಮ ದೇಶದ ಸಂದರ್ಭದಲ್ಲಿ ಹೇಳುವುದಾದರೆ ಮೊದಲು ಖಾಸಗೀ ಶಿಕ್ಷಣ ಸಂಸ್ಥೆಗಳನ್ನು ರದ್ದುಪಡಿಸಬೇಕು. ಖಾಸಗೀ ಶಿಕ್ಷಣ ಸಂಸ್ಥೆಗಳಿಂದ ಹಣ ಇರುವವರಿಗೇ ವಿದ್ಯೆ. ಹಣವಂತರ ಮಕ್ಕಳೇ ವೈದ್ಯರಾಗಬೇಕು, ಲಾಯರಾಗಬೇಕು, ದಲಿತನೊಬ್ಬ ವೈದ್ಯನಾಗುವುದು ಬೇಡವೇ? ಲಾಯರಾಗುವುದು ಬೇಡವೇ? ಖಾಸಗೀ ಶಿಕ್ಷಣ ಸಂಸ್ಥೆಗಳನ್ನು ಪ್ರೋತ್ಸಾಹಿಸಿ ಸಮಾಜವನ್ನು ಒಡೆಯುತ್ತಿದ್ದೀರಿ. ಇದು ತಪ್ಪಬೇಕು. ಈ ವಿಚಾರದಲ್ಲಿ ನಾನು ಇನ್ನೂ ಕಮ್ಯೂನಿಸ್ಟನೇ. ✡



# ಭೂಲೋಕ ಹೇಗೆ ನಾಶವಾಗುವುದು?

ಪ್ರತಿಯೊಂದು ದೇಶದ, ಧರ್ಮದ ಪುರಾಣದಲ್ಲಿ ಪ್ರಳಯದ ಸುದ್ದಿ ಬಂದೇ ಬರುತ್ತದೆ. ನಾವು ವಾಸಿಸುವ ಈ ಭೂಮಿ ಭವಿಷ್ಯತ್ತಿನಲ್ಲೊಂದು ದಿನ ಹೇಳ ಹೆಸರಿಲ್ಲದಂತೆ ನಾಶವಾಗಿ ಹೋಗುವುದು. ಅದರೊಡನೆ ಸರ್ವ ಜೀವರಾಶಿಗಳೂ ನಷ್ಟವಾಗಿಹೋಗುವುವು. ಸಮುದ್ರ ಉಕ್ಕೇರಿ ಭೂಮಿಯನ್ನು ಕಬಳಿಸಲಿದೆ-ಎಂದು ಪುರಾಣಗಳು ಹೇಳುತ್ತವೆ.

ಪುರಾಣಗಳ ಹೇಳಿಕೆಗಳನ್ನು ವಿಜ್ಞಾನಿಗಳು ಒಪ್ಪುವುದು ವಿರಳ. ಪ್ರಳಯದ ಸಂಗತಿಯಲ್ಲಿ ಮಾತ್ರ ವಿಜ್ಞಾನಿಗಳೂ ಪುರಾಣಿಕರೂ ಒಮ್ಮತದವರಾಗಿದ್ದಾರೆ. ಭೂಮಿಯ ಅವಸಾನ ಒಂದಲ್ಲ ಹಲವು ವಿಧಾನಗಳಿಂದ ಆಗಬಹುದು ಎಂದು ಪುರಾಣಿಕರಿಗಿಂತಲೂ ಬಹಳ ಚಿತ್ರವತ್ತಾಗಿ, ಭಯಂಕರವಾಗಿ ವಿಜ್ಞಾನಿಗಳು ಹೇಳುತ್ತಾರೆ.

ಭೂಮಿಯ ಹೆಸರುಗಳಲ್ಲಿ "ಸ್ಥಿರಾ" ಎಂಬುದೊಂದು. ಆದರೆ ನಾವು ನಡೆಯುವ ಭೂಮಿ ನಿಜವಾಗಿ ಅಷ್ಟು ಸ್ಥಿರವಾಗಿಲ್ಲ. ಭೂಮಿಯ ಹೊರಮೈ ಕಾವಾರಿ ಹೆಪ್ಪುಗಟ್ಟಿದೆ. ಒಳಮೈಯಲ್ಲಿ ಭೀಕರ ಉಷ್ಣತೆಯು ಕುದಿಯುತಿದೆ. ಇದರಿಂದ ಅದು ಆಗಾಗ್ಗೆ ಪ್ರಚಂಡ ಜ್ವಾಲಾಮುಖಿಗಳ ತಾಂಡವ ನೃತ್ಯದ ರಂಗವಾಗುತ್ತದೆ. ನಾಲ್ಕು ಕೋಟಿ ವರ್ಷಗಳ ಹಿಂದೆ ಇಂಥ ಜ್ವಾಲಾಮುಖಿಯೊಂದು ಉಕ್ಕಳಿಸಿದಾಗ ಜಗತ್ತಿನ ಅತಿ ದೊಡ್ಡ ಪರ್ವತ ಶ್ರೇಣಿಯಾದ ಹಿಮಾಲಯ, ಅಮೇರಿಕದ ರಾಕಿ ಮತ್ತು ಆ್ಯಂಡೀಸ್ ಪರ್ವತಗಳ ಸಾಲುಗಳೇ ಮೇಲೆದ್ದು ಬಂದವು; ಎರಡು ಕೋಟಿ ವರ್ಷಗಳ ಹಿಂದೆ ಇಂಥ ಉತ್ಪಾತದಿಂದ ಆಲ್ಪ್ಸ್ ಮತ್ತು ಕಾಸ್ಕೇಡ್ ಪರ್ವತಶ್ರೇಣಿಗಳು ಎದ್ದವು.

ಇನ್ನೊಮ್ಮೆ ಇಂಥ ಅನಾಹುತ ಯಾವಾಗ ಉಂಟಾಗುತ್ತದೆಂದು ವಿಜ್ಞಾನಿಗಳಿಗೆ ಗೊತ್ತಿಲ್ಲ. ಆದರೆ ಅದು ಉಂಟಾದಾಗ ತತ್ತರಗೊಳಿಸುವ ಭೂಕಂಪಗಳು ಪ್ರಳಯಂಕರವಾದ ಜ್ವಾಲಾಮುಖಿ ಸ್ಫೋಟಗಳು ಅದರೊಡನೆ ಬರಲಿರುವುದು ಖಂಡಿತ. ಭೂಮಿಯ ಮೇಲ್ ಚಿಪ್ಪು ಒಡೆದು ಸಾವಿರಾರು ಮೈಲುದ್ದ ಬಿರುಕುಗಳಾಗಿ ಅದರಿಂದ ಕುದಿಯುತ್ತಿರುವ ಲಾವಾರಸ ಹೊರಹೊಮ್ಮಿ ಲಕ್ಷಾಂತರ ಚದರ ಮೈಲು ಭೂಮಿಯ ಮೇಲೆ

( ವಿವಿಧ ಮೂಲಗಳಿಂದ )



ನಾವು ನಾಶಿಸುವ ಭೂಮಿಗೆ ಕೊನೆಗೆ ಬರಲಿರುವ ವಿಧಿಯ ದೃಶ್ಯವಿದು

ಪಸರಿಸಿ ದಾರಿಯಲ್ಲಿ ಸಿಕ್ಕಿದ್ದನ್ನೆಲ್ಲ ನಾಶಪಡಿಸಲಿದೆ. ಆ ಪ್ರದೇಶದ ನೆಲವೆಲ್ಲ ಹುಚ್ಚುಹುಚ್ಚಾಗಿ ನಡುಗಲಿದೆ.

ಇದು ಒದಗಿದಾಗ ನಮ್ಮ ಭೂಲೋಕ ಮಾನವನ ಬಾಳಿಕೆಗೆ ಅತ್ಯಂತ ಅಪಾಯಕರವಾಗುವುದು. ಜ್ವಾಲಾಸ್ಫೋಟವಾಗಿ ಹೊಸ ಪರ್ವತಗಳು ತಲೆಯೆತ್ತುವ ಪ್ರದೇಶದಿಂದ ಸಾವಿರಾರು ಮೈಲು ದೂರವಿರುವ ಸ್ಥಳಗಳಲ್ಲಿ ಕೂಡ ಭೀಕರ ಭೂಕಂಪನಗಳು ಸಾರ್ವತ್ರಿಕನಾಶವನ್ನುಂಟುಮಾಡಲಿವೆ. ಸಾಲದ್ದಕ್ಕೆ ಉತ್ಪಾತದ ಫಲವಾಗಿ ಸಮುದ್ರಗಳಿಂದ ಉದ್ಭವವಾದ ತರಂಗಗಳೆದ್ದು ಸಾವಿರಾರು ಚದರ ಮೈಲು ಭೂಮಿಯ ಮೇಲೆ ಹರಿದು ಮಾನವ ವಸತಿಗಳನ್ನು ಕೊಚ್ಚಿಕೊಂಡು ಹೋಗಲಿದೆ.

ಇದನ್ನು ತಡೆಯಲು ಮಾನವನು ಏನೂ ಮಾಡಲಾರ. ಈ ವಿಪತ್ತು ನಮ್ಮ ಜೀವಮಾನದಲ್ಲಿ ಒದಗುವ ಸಂಭವ ಕಡಿಮೆಯೆಂಬುದೊಂದೇ ಸಮಾಧಾನದ ಸಂಗತಿ. ಆದರೆ ವಿಜ್ಞಾನಿಗಳು ನಿಮಗೆ ಈ ವಿಷಯ ಖಂಡಿತವಾದ ಭರವಸೆ ಕೊಡಲಾರರು.

ಬರಲಿರುವ ಬಿಸಿ ವಿಧಿಯನ್ನು ಚಿಂತಿಸಿದ ನಂತರ ಹಿಮವಿಧಿಯನ್ನು ವಿಚಾರಿಸೋಣ. ಭೂಮಿಯು ಕಳೆದ ೨,೫೦,೦೦೦ ವರ್ಷಗಳಲ್ಲಿ ಐದು ಸಲ ಚಳಿಯಿಂದ ಬಿಸಿಗೆ ಬಿಸಿಯಿಂದ ಚಳಿಗೆ ಬದಲಾಗುತ್ತ ಬಂದಿದೆ. ಈಗ ನಾವು ಬಿಸಿ ಯುಗದಲ್ಲಿದ್ದೇವೆ. ಈ ಬಿಸಿ ಯುಗ ಹೀಗೆ ಮುಂದುವರಿದು ಕ್ರಿ. ಶ. ೨೦,೦೦೦ ವರೆಗೂ ಸಾಗುವುದು. ನಮ್ಮ ಉತ್ತರಾರ್ಧಗೋಳವು ಇನ್ನೂ ಬೆಚ್ಚಗಾಗುತ್ತ ಹೋಗಲಿದೆ. ಉಷ್ಣವಲಯವು ಉತ್ತರಕ್ಕೆ ಸರಿಯುತ್ತ ಈಗ ಹಿಮದಿಂದಾವೃತವಾದ ಪ್ರದೇಶಗಳು ಕ್ರಿ. ಶ ೨೦,೦೦೦ದಷ್ಟು ಹೊತ್ತಿಗೆ ಬೆಚ್ಚಗಿನವಾಗಲಿವೆ.

ಅನಂತರ ಚಳಿಯುಗ ಪ್ರಾರಂಭವಾಗಿ ಹಿಮವು ದಕ್ಷಿಣಾಭಿಮುಖವಾಗಿ ಸರಿಯತೊಡಗುವುದು. ಕ್ರಿ. ಶ. ೫೦,೦೦೦ದಷ್ಟು ಹೊತ್ತಿಗೆ ಇಂದಿನ ಕೆನಡಾ ಮತ್ತು ರಶಿಯದ ಬಹು ಭಾಗವೆಲ್ಲ ಹಿಮದ ಮಹಾ ಹಾಳೆಗಳಿಂದ ಆವೃತವಾಗುವುದು. ಲಂಡನ್, ಪ್ಯಾರಿಸ್, ಬರ್ಲಿನ್ ಮೊದಲಾದ ಇಂದಿನ ಪ್ರಮುಖ ನಗರಗಳಲ್ಲಿ ತಾಳಲಾರದ ಚಳಿ ತಲೆದೋ

ರುವುದು. ಭಾರತವು ಆಗ ಇಂದಿಗಿಂತ ಎಷ್ಟೋ ತಂಪಾಗಿ, ಈಗಿನ ಇಂಗ್ಲೆಂದಿನ ಹವೆಯನ್ನು ಅನುಭವಿಸುವುದು. ಈ ಚಳಿ-ಬಿಸಿಗಳ ನಡುವೆ ಇಂದಿನ ಎಷ್ಟೋ ಮಹಾನಗರಗಳು ಹಾಳು ಹಂಪೆಗಳಾಗಿ ಹೋಗುವವು.

ಇದರಿಂದಾಗಿ ಬಹುದೂರ ಕಣ್ಣು ಹಾಯಿಸಿದರೆ ನಾವೇನು ಕಾಣುತ್ತೇವೆ? ಇಂದಿನ ಪರ್ವತಶ್ರೇಣಿಗಳಲ್ಲದೆ ಹೊಸ ಹೊಸ ಜ್ವಾಲಾಸ್ಫೋಟಗಳಿಂದ ಹೊಸ ಪರ್ವತಶ್ರೇಣಿಗಳು ತಲೆಯೆತ್ತಿ ನಿಂತಿರುವವು. ಆದರೆ ಇದು ಕೊನೆಯ ತನಕ ಸಾಗುವ ಕ್ರಮವಲ್ಲ. ಭೂಗರ್ಭದೊಳಗಿನ ಕುದಿ ಕಡಿಮೆಯಾಗುತ್ತ ಭೂಮಿಯ ಹೊರಚಿಪ್ಪು ದಪ್ಪವಾಗುತ್ತ ಹೋಗಿ ಕೆಲ ಕೋಟಿ ವರ್ಷಗಳ ನಂತರ ಕ್ರಾಂತಿಕಾರಕ ಬದಲಾವಣೆಗಳು ಇಲ್ಲದಾಗುತ್ತವೆ.

ಅದರ ನಂತರ ಮಳೆರಾಯನ ಪ್ರತಾಪ ಎದ್ದು ಕಾಣಿಸತೊಡಗುವುದು. ಲಕ್ಷಾಂತರ ವರ್ಷಗಳ ಸಾವಕಾಶವಾದ ಕೆಲಸದಿಂದ ಮಳೆರಾಯ ಪರ್ವತಗಳನ್ನು ತೇಯುತ್ತ ಹೋಗುವನು. ಕಟ್ಟಕಡೆಗೆ ಪರ್ವತಗಳೆಲ್ಲ ಸವೆದುಹೋಗಿ ಭೂಮಿಯ ಖಂಡಗಳು ಏರು ತಗ್ಗು ಇಲ್ಲದ ಚಪ್ಪಟೆ ಪ್ರದೇಶಗಳಾಗುವವು. ಆಗ ಹವೆ ಬಹಳ ಅಂತರವಿಲ್ಲದೆ ಏಕಪ್ರಕಾರವಾಗಿ ಉಳಿಯುವುದು. ಅನೇಕ ಭೂ–ಪ್ರದೇಶಗಳನ್ನು ಸಮುದ್ರರಾಜ ಆಕ್ರಮಿಸಿ ಸಾವಕಾಶವಾದ ಜಲಪ್ರಳಯವನ್ನುಂಟುಮಾಡುವನು.

ಆಗ ಇನ್ನೂ ಭೂಮಿಯ ಮೇಲೆ ಸಸ್ತನಿ ಪ್ರಾಣಿಗಳ ಪ್ರಭುತ್ವವೇ ಸಾಗುತ್ತಿದ್ದರೂ ಅವುಗಳ ಗಾತ್ರ ಈಗಿಗಿಂತ ಹೆಚ್ಚಾಗಿರುವುದು. ಕ್ರಿ. ಶ. ೮,೦೦,೦೦,೦೦೦ ವರ್ಷದಷ್ಟು ಹೊತ್ತಿಗೆ ಆನೆ ಮೊದಲಾದ ಪ್ರಾಣಿಗಳು ನಷ್ಟವಾಗಿ ಈಗಿನ ಚಿಕ್ಕ ಪ್ರಾಣಿಗಳು ಅವುಗಳ ಗಾತ್ರಕ್ಕೇರುವವು. ಅಂದಿನ ಮನುಷ್ಯರು ೧೦-೧೨ ಅಡಿ ಎತ್ತರದ ದೈತ್ಯರಾದಾರು. ಭೂಮಿ ಅಗೆಯುವಾಗ ಅವರಿಗೆ ನಮ್ಮ ಕಾಲದ ಜನರ ಅಸ್ಥಿಪಂಜರಗಳೇನಾದರೂ ಸಿಕ್ಕಿದರೆ ತಮ್ಮ ಪೂರ್ವಜರು ಇಷ್ಟು ಕುಳ್ಳರಾಗಿದ್ದರೇ ಎಂದವರು ಆಶ್ಚರ್ಯಪಡಬಹುದು!

ಅನಂತರ ಮನುಷ್ಯ ಅಳಿಗಾಲ ಕಂಡಾನು. ಭೂಮಿಯಲ್ಲಿ ಲಕ್ಷಾಂತರ ವರ್ಷಗಳ ಹಿಂದೆ ತಾವೇ ತಾವಾಗಿ ಮೆರೆದ ದೈತ್ಯಾಕಾರದ ಸವಂಭೂತಗಳು ತಮ್ಮ ಗಾತ್ರವೇ ಮಿತಿಮೀರಿ ಕ್ಷಯಹೊಂದಿದ ಹಾಗೆ ಮನುಷ್ಯನೂ ತನ್ನ ಮೈಯೆ ತನಗೆ ಭಾರವಾಗಿ ನಷ್ಟವಾಗುವನು. ಅವನ ನಂತರ ಯಾವ ಕ್ಷುದ್ರ ಪ್ರಾಣಿ ಭೂಲೋಕದ ಸ್ವಾಮಿಯಾಗಲಿದೆಯೋ ಬ್ರಹ್ಮನೇ ಬಲ್ಲ. ಇರುವೆ ಅಥವಾ ಜೇನ್ನೊಣ ಭೂಮಿಗೆ ಒಡೆಯನಾದರೂ ಆಗಬಹುದು.

ಆದರೆ ಭೂಲೋಕದಲ್ಲಿ ಜೀವಜಂತುಗಳ ಕೊನೆಯ ವಿನಾಶ ಮತ್ತು ಈ ಭೂಮಿಯದೇ ಕೊನೆಯ ಧ್ವಂಸವಾಗಲಿರುವುದು ಚಂದ್ರ ಮತ್ತು ಸೂರ್ಯರ ದೆಸೆಯಿಂದ.

ನಮ್ಮ ಚಂದ್ರ ಭೂಮಿಯಿಂದ ಎರಡುನೂರು ಕೋಟಿ ವರ್ಷಗಳ ಹಿಂದೆ ಸಿಡಿದುಹೋದ ಒಂದು ತುಣುಕು. ಅಂದು ಸಿಡಿದುಹೋದ ಚಂದ್ರ ನಮ್ಮಿಂದ ಮೆಲ್ಲ ಮೆಲ್ಲನೆ ದೂರ ಸರಿಯುತ್ತ ಇಂದು ೨,೩೮,೦೦೦ ಮೈಲು ದೂರದಲ್ಲಿ ಭೂಮಿಗೆ ಸುತ್ತುಹಾಕುತ್ತಿದ್ದಾನೆ. ಇನ್ನೂ ಅವನು ದೂರ–ವಾಗತಕ್ಕವನೇ. ಕೊನೆಯ ಹಂತದಲ್ಲಿ ಅವನು ೨,೮೭,೦೦೦ ಮೈಲು ದೂರ ಹೋಗುವನು.

ಅದಕ್ಕಿಂತ ಆಚೆಗೆ ಹೋಗಲು ಭೂಮಿಯ ಗುರುತ್ವಾಕರ್ಷಣೆ ಚಂದ್ರನಿಗೆ ಅವಕಾಶ ಕೊಡುವುದಿಲ್ಲ. ಆದ್ದರಿಂದ ಚಂದ್ರ ತಿರುಗಿ ಮೆಲ್ಲನೆ ಭೂಮಿಯತ್ತ ಬರತೊಡಗುವನು. ಕಟ್ಟಕಡೆಗೆ ಅವನು ಭೂಮಿಗೆ ತೀರ ಸಮೀಪ ಬರುವನು. ಆದರೆ ಭೂಮಿಗೆ ಬಂದು ಮುಟ್ಟಲು ಅವನಿಗೆ ಸಂದರ್ಭ

ಸಿಗಲಾರದು. ಸುಮಾರು ೧೦,೦೦೦ ಮೈಲಿನಷ್ಟಕ್ಕೆ ಅವನು ಬರುವಷ್ಟರಲ್ಲಿ ಗುರುತ್ವಾಕರ್ಷಣ ಶಕ್ತಿಯನ್ನು ತಾಳಲಾರದೇ ಅವನು ಒಡೆದು ನುಚ್ಚುನೂರಾಗಿ ಹೋಗುವನು.

ಆ ಕಾಲ, ಭೂಮಿಯ ಪ್ರಾಣಿಗಳಿಗೆ (ಇದ್ದರೆ) ಮಹಾದುರ್ದೈವದ ಕಾಲವಾಗಲಿದೆ. ಚಂದ್ರನು ಭೂಮಿಗೆ ಬಹು ಸಮೀಪ ಬಂದಾಗ ಭೂಮಿಯ ಸಾಗರಗಳು ಉಕ್ಕೇರುವವು ಮತ್ತು ಮೈಲುಗಟ್ಟಳೆ ಆಳವಾದ ನೀರು ಚಂದ್ರನ ಪ್ರತಿಯೊಂದು ಪ್ರದಕ್ಷಿಣೆಯ ಸಂಗಡ ಭೂಮಿಯ ಭೂಖಂಡಗಳ ಮೇಲೆ ಸುತ್ತಲೂ ಹರಿದು ಎಲ್ಲವನ್ನೂ ಕೊಚ್ಚಿಕೊಂಡು ಹೋಗುವುದು. ಈ ಜಲಪ್ರಳಯ ಕಲ್ಪಾಂತ ಪ್ರಳಯವೇ.

ಆದರೆ ಭೂಮಿಯ ರುದ್ರ ನಾಟಕದ ಈ ಅಂಕ ಇಷ್ಟಕ್ಕೇ ಮುಗಿಯುವುದಿಲ್ಲ. ಅಂಕದ ಪರದೆ ಇಳಿಯುವ ಮೊದಲು ಅದು ಮತ್ತೊಂದು ಭೀಕರ ಅನಾಹುತವನ್ನು ಕಾಣಲಿದೆ. ಚಂದ್ರನು ಮೇಲೆ ಹೇಳಿದಂತೆ ಪುಡಿಪುಡಿಯಾದಾಗ ಆ ತುಣುಕುಗಳು ಕೆಂಪಾಗಿ ಕೆಲ ಭಾಗ ಭೂಮಿಯ ಮೇಲೆ ಕೆಂಡದ ಮಳೆಯಂತೆ ವರ್ಷಿಸುವವು. ಉಳಿದ ಭಾಗ ಭೂಮಿಯ ಸುತ್ತ ತಿರುಗತೊಡಗಿ ಶನಿಯನ್ನು ಬಳಸಿದ ವಲಯದಂತೆ ಭೂಮಿಯ ಸುತ್ತ ಒಂದು ಬಳೆಯನ್ನು ತೊಡಗಿಸುವುವು.

ಇದು ಎಂದು ಸಂಭವಿಸುವುದು? ನಮ್ಮ-ನಿಮ್ಮ ಜೀವಮಾನ ಕಾಲದಲ್ಲಲ್ಲೆಂದು ವಿಜ್ಞಾನಿಗಳು ಭರವಸೆ ನೀಡುತ್ತಾರೆ. ಇದು ಜರಗುವ ಮೊದಲು ೧೦,೦೦೦ ಕೋಟಿ ವರ್ಷಗಳು ಕಳೆಯಬೇಕಾದೀತು.

ಭೂಮಿಯ ಹಿರಿ ಮಗನಾದ ಚಂದ್ರನ ಗತಿ ಹೀಗಾಗುವುದೆ? ಎಂದು ಕಣ್ಣೀರು ಸುರಿಸುವ ಪ್ರಮೇಯವಿಲ್ಲ. ಅದಕ್ಕಿಂತ ಎಷ್ಟೋ ಮೊದಲೇ ಮಗಳು ಭೂಮಿಯನ್ನೂ ಮೊಮ್ಮಗ ಚಂದ್ರನನ್ನೂ ಸೇರಿಯೇ ಕೊಳೆ ಮಾಡಿ ನಮ್ಮ ಸೂರ್ಯ ಈ ದುರಂತ ನಾಟಕದ ಭರತವಾಕ್ಯವನ್ನು ಹೇಳಿಬಿಡುವನೆಂದು ವಿಜ್ಞಾನಿಗಳು ಲೆಕ್ಕಹಾಕಿದ್ದಾರೆ.

ಸೂರ್ಯನೆಂಬ ಈ ಮಧ್ಯಮಗಾತ್ರದ ನಕ್ಷತ್ರ ಪ್ರಕಾಶಿಸುತ್ತಿರಲು ಅವರೊಳಗಿನ ಜಲಜನಕ ಅನಿಲವೇ ಕಾರಣ. ಈ ಜಲಜನಕವು ಉರಿಯುವುದರಿಂದಲೇ ಸೂರ್ಯನ ಗರ್ಭದಲ್ಲಿ ಅಪರಿಮಿತ ಉಷ್ಣತೆಯುಂಟಾಗಿ ಅವನು ಕೆಂಪಾಗಿ ಬೆಳಗುತ್ತಾನೆ. ಆದರೆ ಸೂರ್ಯನೊಳಗಿರುವ ಈ ಜಲಜನಕ ಉರುವಲು ಎಷ್ಟು ದಿನಕ್ಕೆ ಸಾಲಬಹುದು? ಅನಂತ ಕಾಲದ ವರೆಗಂತೂ ಅಲ್ಲ. ೧೦೦೦ ಕೋಟಿ ವರ್ಷಗಳಲ್ಲಿ ಅದು ತೀರಿಹೋಗುವುದು.

ಜಲಜನಕ ಕಡಿಮೆಯಾದಂತೆ ಸೂರ್ಯ ನಿಸ್ತೇಜನಾಗುತ್ತ ಹೋಗುವನೆಂದು ನೀವು ಭಾವಿಸಿರಬಹುದು. ಹಾಗಾಗುವದಿಲ್ಲ. ಉರುವಲು ನಶಿಸಿದ ಹಾಗೆ ಸೂರ್ಯನು ಇನ್ನಷ್ಟು ಉಗ್ರವಾಗಿ ಉರಿಯುವನೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ಸೂರ್ಯನು ಶತಮಾನದಿಂದ ಶತಮಾನಕ್ಕೆ ಹೆಚ್ಚು ಹೆಚ್ಚು ಪ್ರಕಾಶಮಾನನಾಗುವನು. ತನ್ನ ಜೀವನದ ಕೊನೆಯ ಘಟ್ಟವನ್ನು ತಲುಪಲಾದಾಗ ಸೂರ್ಯನು ಇಂದಿಗಿಂತ ೧೦೦ ಪಟ್ಟು ಬಿಸಿಯಾಗುವನು.

ಆಗ ಏನಾಗುವದೆಂದು ಸುಲಭವಾಗಿ ಊಹಿಸಿಕೊಳ್ಳಬಹುದು. ಭೂಮಿಯ ನೀರು ಆಗ ಕುದಿಯತೊಡಗುವುದು. ಸಮುದ್ರದ ನೀರೆಲ್ಲ ಆವಿಯಾಗಿ ಹಾರಿಹೋಗುವುದು. ಇಲ್ಲಿನ ವಾತಾವರಣವೂ ಕಾದು ಹಾರಿಹೋಗುವುದು.

ಸಾವಿನೊಡನೆ ಹೋರಾಡುವ ಸೂರ್ಯ ಕೊನೆಯುಸಿರು ಬಿಡುವ ಮೊದಲು ಮತ್ತೊಂದು ಸಲ ತನ್ನ ಪ್ರತಾಪವನ್ನು ತೋರಿಸದೇ ಬಿಡನು. ನಂದುತ್ತಿರುವ ದೀಪದಂತೆ ಅವನು ಕೊನೆಗೊಮ್ಮೆ ಭೀಕರವಾಗಿ ಉರಿದೇಳುವನು.

ಸೂರ್ಯ ತನ್ನ ಕೊನೆಗಾಲದಲ್ಲಿ ನಡೆಸುವ ಈ ಭಯಾನಕ ಉತ್ಪಾತದ ಗತಿ ವರ್ಣನಾತೀತವಾಗಿರುವುದು. ಆ ಬೇಗೆಗೆ ನಮ್ಮ ಭೂಮಿಯಷ್ಟೇ ಅಲ್ಲ ಸೂರ್ಯನ ಸಂಸಾರದ ಇತರ ಎಲ್ಲ ಗ್ರಹಗಳೂ ಕರಗಿ ಹೋಗಬಹುದು.

ಇದು ಸುಮಾರು ಕ್ರಿ.ಶ. ೧೦,೦೦,೦೦,೦೦,೦೦೦ ನೇ ವರ್ಷದ ಮಾತು. ಈ ಅಂತಿಮ ಉದ್ರೇಕದ ಹೊಗೆ ಕೆಲವೇ ವರ್ಷಗಳಲ್ಲಿ ಚದರಿ ಹೋಗುವುದು. ಆಗ ತಣ್ಣಗಾದ, ನಿಷ್ಪ್ರಭನಾದ ಸೂರ್ಯ ತನ್ನ ತಣ್ಣಗಾದ ಗ್ರಹಮಂಡಲದೊಡನೆ ಮೃತಾವಸ್ಥೆಯಲ್ಲಿ ಗಗನದಲ್ಲಿರುವುದನ್ನು ನಾವು ನೋಡಬಹುದು.

ಆದರೆ ಈ ಕೊನೆಯ ಅಂಕವನ್ನು ನೋಡುವ ಭಾಗ್ಯ ಅಥವಾ ದೌರ್ಭಾಗ್ಯ ನಮಗಿರಲಾರದು. ಈ ಭೂಮಿಯ ಮೇಲೆ ಆಗ ಮನುಷ್ಯ ಮಾತ್ರನೇಕೆ ಜೀವಮಾತ್ರವೂ ಉಳಿದಿರಲಾರದು. ಅದಕ್ಕಿಂತ ಎಷ್ಟೋ ಮುಂಚಿತವಾಗಿ ಸೂರ್ಯನ ಉಷ್ಣತೆ ಸಹನಾತೀತವಾದಾಗಲೇ ಇಲ್ಲಿನ ಚರಾಚರ ಪ್ರಾಣಿಗಳು ನಾಶವಾಗಿಬಿಡುವುವು. ಮನುಷ್ಯ ಅದರೊಳಗೇ ಈ ಭೂಮಿಯಿಂದ ಆಕಾಶಬಾಣ ವಿಮಾನಗಳಲ್ಲಿ ಕೂತು ಬೇರೆ ನಕ್ಷತ್ರಗಳಲ್ಲಿರಬಹುದಾದ "ಭೂಮಿ"ಗಳಿಗೆ ಹಾರಿ ಹೋದರೆ ಸರಿ, ಇಲ್ಲದಿದ್ದರೆ ಸಕಲ ವಿಜ್ಞಾನ ಸೃಷ್ಟಿಯೊಡನೆ ಅವನು ನಿರ್ನಾಮವಾಗಿ ಹೋಗುವನು.

ಭೂಮಿಯ ರುದ್ರನಾಟಕದ ಕೊನೆಯ ಅಂಕ ನಿಜವಾಗಿ ಹೃದಯವಿದ್ರಾವಕವಾಗಿದೆ. ಆದರೆ ಅದು ಪ್ರೇಕ್ಷಕರಿಲ್ಲದ ಅಂಕವಾಗಲಿದೆ.



ಮೃತ್ಯು ಜೀವನದ ಕೊನೆಯಾಗಿದೆ. ಅದು ಎರಡನೆಯ ಜೀವನದ ಪ್ರಾರಂಭವಾಗಿದೆ. ಅದನ್ನು ಸಾಧ್ಯವಿರುವ ಮಟ್ಟಿಗೆ ಮುಂದಕ್ಕೆ ಹಾಕುವುದರಲ್ಲಿ ಪುರುಷಾರ್ಥವಿದೆ. ಮೃತ್ಯುವನ್ನು ಯೋಗ್ಯ ಸಮಯದಲ್ಲಿ ಸ್ವೀಕಾರ ಮಾಡುವುದು ಜೀವನದ ಪರಮವಿಕಾಸವಾಗಿದೆ.

* * *

## ಅನುಪಯುಕ್ತ ಮಾಹಿತಿ

ವಿಜ್ಞಾನ ವಿಷಯಗಳನ್ನು ಕನ್ನಡ ಭಾಷೆಯ ಮೂಲಕ ಪ್ರಚಾರ ಮಾಡುವ ಉದ್ದೇಶದಿಂದ ಪ್ರಾರಂಭವಾದ ಮೊದಲ ಸಂಸ್ಥೆ ಕರ್ನಾಟಕ ವಿಜ್ಞಾನ ಪ್ರಚಾರಿಣೀ ಸಮಿತಿ. ೧೯೧೭ರ ಸುಮಾರಿಗೆ ಬೆಂಗಳೂರಲ್ಲಿ ಇದನ್ನು ಸ್ಥಾಪಿಸಿದವರು ಬೆಳ್ಳಾವೆ ವೆಂಕಟನಾರಾಯಣಪ್ಪ ಹಾಗೂ ನಂಗಪುರಂ ವೆಂಕಟೇಶ ಅಯ್ಯಂಗಾರ್ಯರು. ಒಂದು ವರ್ಷ ಕಾಲ ನಡೆದ ಈ ಸಂಸ್ಥೆಯು ವಿಜ್ಞಾನ ಮಾಸಿಕ ಚಂದಾದಾರರ ಅಭಾವದಿಂದ ನಿಂತುಹೋಯಿತು.




ಗುಂಡ ಕೈಲಿದ್ದ ರಟ್ಟಿನ ಪೆಟ್ಟಿಗೆಯನ್ನು ಟೇಬಲ್ ಮೇಲಿಟ್ಟು ಬಿಚ್ಚುತ್ತಾ, "ಬಾರೆ, ಬೇಗ ಬಾ. ನಿನ್ನಾಸೆ ಪೂರೈಸ್ತೀನಿ ಬಾ," ಅಂದ.

"ಏನ್ರಿ ಅದು?"

"ಗ್ಲೋಬು. ಪ್ರಪಂಚಾನೆಲ್ಲಾ ಸುತ್ತಬೇಕು ಅಂತಿದ್ದೆಯಲ್ಲ, ಬಾ, ಪ್ರದಕ್ಷಿಣೆ ಹಾಕೋಣ."

*

ಆತ: ನನಗೆಷ್ಟು ಜಮೀನಿದೆ ಅಂದ್ರೆ ನನ್ನ ಕಾರಿನಲ್ಲಿ ಬೆಳಿಗ್ಗೆ ಒಂದೆಡೆಯಿಂದ ಹೊರಟ್ರೆ ಇನ್ನೊಂದು ತುದಿ ಸೇರಲು ಸಂಜೆಯೇ ಆಗುತ್ತದೆ.

ಈತ: ನನ್ನ ಕಾರಿನ ಹಾಗೇ ತೋಂದ್ರೇದು ಅನ್ನು ನಿನ್ನ ಕಾರೂ!

*

ಪ್ರೊಫೆಸರ್: ಕಾಲೇಜಿಂದ ನನ್ನ ಛತ್ರೀನ ಮರೀದೆ ತಂದೀನಿ ನೋಡಿರಾಯಿಂತಿ.

ಪತ್ನಿ: ನೀವು ಈ ದಿನ ಛತ್ರಿ ಒಯ್ದಿರಲಿಲ್ಲಲ್ಲ!

*

"'ಪ್ರಾಮಾಣಿಕತೆ' ಅಂದ್ರೇನಪ್ಪಾ?"

"…. ಅಂದ್ರೇನು ಹೇಳೋದು ಬಹಳ ಕಷ್ಟ. ನನ್ನ ಮಿತ್ರ ಮಾತ್ರ ನನ್ನನ್ನು ಪ್ರಾಮಾಣಿಕ ಅಂದದ್ದು ನೆನಪಾಗ್ತಿದೆ?"

"ಯಾರಪ್ಪ ಅಂದದ್ದು? ಯಾವಾಗ?"

"ನಾಗಣ್ಣ. ನಾವಿಬ್ರೂ ಬ್ಯಾಂಕಿಗೆ ಹೋದ್ವಿ. ನೂರ್ರೂಪಾಯ್ದು ಚೆಕ್ಕಿತ್ತು. ಕ್ಯಾಶಿಯರ್ ತಪ್ಪಿನಿಂದ ನೂರ್ಹತ್ತು ರೂಪಾಯಿ ಕೊಟ್ಟ. ಹೆಚ್ಚಿನ ಹತ್ರೂಪಾಯಲ್ಲಿ ನಾನು ಐದ್ರೂಪಾಯ್ನ ನಾಗಣ್ಣನಿಗೆ ಕೊಟ್ಟೆ. ಆಗ್ಲೇ ಆತ ಹಾಗಂದದ್ದು."

*

ಪತಿ: (ಬೆಳಿಗ್ಗೆ ಮನೆಗೆ ಬಂದ ಪತ್ನಿಗೆ) ನಿನ್ನೆ ರಾತ್ರಿಯೆಲ್ಲ ಯಾರೊಡನಿದ್ದೆ?

ಪತ್ನಿ: ಸ್ನೇಹಿತೆ ಉಷಾಳೊಡನೆ.

ಪತಿ: ಸುಳ್ಳು ಹೇಳಬೇಡ. ಆಕೆ ನನ್ನೊಡನೆ ಇದ್ದಳು.

*

ಆತ: ತನ್ನ ಕೆಳಗೆ ೨೫ ಜನ ಕೆಲಸ ಮಾಡುತ್ತಾರೆಂದು ನನ್ನ ಮಗ ಹೇಳಿದ ನಿಜವೇ?

ಮಗನ ಮಿತ್ರ: ನಿಜ. ಆತ ಅಟ್ಟದ (ಮಹಡಿ) ಮೇಲಿದ್ದಾನೆ. ನಾವೆಲ್ಲ ಕೆಳಗೆ ಕೆಲಸ ಮಾಡುತ್ತೇವೆ.

*

ಇತಿಹಾಸ ಶಿಕ್ಷಕ: ಕ್ರಿ. ಶ. ೧೬೨೭ರಲ್ಲಿ ಏನಾಯಿತು ಗೊತ್ತೇ?

ವಿದ್ಯಾರ್ಥಿ: ಛತ್ರಪತಿ ಶಿವಾಜಿ ಹುಟ್ಟಿದ, ಸಾರ್.

ಇತಿಹಾಸ ಶಿಕ್ಷಕ: ಸರಿ. ಕ್ರಿ. ಶ. ೧೬೪೮ರಲ್ಲಿ ಏನಾಯಿತು?

ವಿದ್ಯಾರ್ಥಿ: ಶಿವಾಜಿಗೆ ೨೧ ವರ್ಷ ವಯಸ್ಸಾಗಿತ್ತು.

*

ಆಕೆ: ನಿಮ್ಮ ಮಗ ಕಣ್ಣಿನ ಡಾಕ್ಟರ್ ಆಗ್ತೀನೀಂತಾ ಹೇಳ್ತಿದ್ದಾ. ಆದ್ರೆ ಆತ ಹಲ್ಲಿನ ಡಾಕ್ಟರ್ ಏಕಾದ?

ಈಕೆ: ಮನುಷ್ಯನಿಗೆ ಕಣ್ಣಿರುವುದು ಎರಡೇ, ಆದರೆ ಹಲ್ಲುಗಳು ಮಾತ್ರ ಮೂವತ್ತೆರಡು ಎಂಬುದನ್ನು ಆತನಿಗೆ ನೆನಪಿಸಿದ್ದೆ.

*

ಪತ್ನಿ: ಊಟಕ್ಕೆ ಹೊತ್ತಾಗಿ ಬಂದ್ರಲ್ಲ?

ಕ್ಷೌರಿಕ: ಮನೆಯಲ್ಲಿ 'ಶೇವ್' ಮಾಡಿಕೊಳ್ಳಲು ಬಿಡುವಿರಲಿಲ್ಲಾಂತ ಹತ್ತು-ಹನ್ನೆರಡು ಗಿರಾಕಿಗಳು ಬಂದಿದ್ರು. ಅವರಿಗೆಲ್ಲಾ ಶೇವ್ ಮಾಡಿ ಬರೋದ್ರಾಗ ಇಷ್ಟು ಹೊತ್ತಾತು.

*

ಇಬ್ಬರು ಕಳ್ಳರು ಮಾತಾಡಿಕೊಳ್ಳುತ್ತಿದ್ದರು. "ನಿನ್ನೆ ರಾತ್ರಿ ಹೊಕ್ಕ ಮನೇಲೇನು ಸಿಕ್ತು?"



'ದೆವ್ವ, ಭೂತಗಳ ಅಸ್ತಿತ್ವವನ್ನು ಈಗಲಾದರೂ ಒಪ್ಪುತ್ತೀರಾ" ?

---

"ಇಷ್ಟು ತಡವಾಗಿ ಏನ್ರಿ ಮನೇಗೆ ಬರೋದು?" ಅಂತ ಬೈಗಳು, ತಲೇ ಮೇಲೆ ಇದೋ ಈ ಗಂಟು ಬರೋಹಾಗೆ...."

*

"ಡಾಕ್ಟರ್, ಡಾಕ್ಟರ್ .. ನಂಗೆ ತುಂಬಾ ತಲೆಚಿಟ್ಟು ಹಿಡಿದ್ಬಿಟ್ಟದೆ."

"ಯಾಕೆ?"

"ಈ ಕೂದ್ಲು ಉದುರೋದ್ರಿಂದ."

"ಅದಕ್ಯಾಕೆ ಚಿಂತಿಸ್ತೀರಿ. ತಗೊಳ್ಳಿ ಈ ಡಬ್ಬೀನಾ. ಉದುರ್ತಿರೋ ಕೂದ್ಲನ್ನೆಲ್ಲ ಆರ್ಸಿ ಇದರಲ್ಲಿಡಿ."

*

"ನೀನೇನು ಕೆಲಸಾ ಮಾಡ್ತೀಯಾ?" ಸರಕಾರಿ ವಕೀಲರು ಸಾಕ್ಷಿದಾರರನ್ನು ಪ್ರಶ್ನಿಸಿದರು.

"ಏನೂ ಇಲ್ಲ."

"ಓದಿದ್ದೆಷ್ಟು?"

"ಎಸ್ಸೆಸ್ಸೆಲ್ಸಿ ಫೇಲು"

"ನಿಮ್ಮಪ್ಪ ಏನ್ಮಾಡ್ತಾರೆ?"

"ನಿಶ್ಚಿತ ಉದ್ಯೋಗ ಏನಿಲ್ಲ. ಕೆಲ ಸಲ ಅಲ್ಲಿಲ್ಲಿ ಕೆಲಸಾ ಮಾಡ್ತಾರೆ."

"ಅಂದ್ರೆ ಮೈಗಳ್ಳತನ ನಿಮ್ಮ ವಂಶ ಪಾರಂಪರ್ಯದ್ದು ಅಂದ್ಹಾಗಾಯ್ತು."

"ನಂಗೊತ್ತಿಲ್ಲ-ಸ್ವಲ್ಪ ಅವಕಾಶಾ ಕೊಟ್ರೆ ನಮ್ಮಪ್ಪನ್ನ ಕೇಳ್ತೀನಿ. ಅವ್ರಿಲ್ಲೇ ಜ್ಯೂರಿಯಾಗಿದಾರೆ."

*

ಪತ್ನಿ ಪತಿಯ ಜೇಬಿನಲ್ಲಿ ಕೈ ಹಾಕಿದಳು. "ಪರವಾಯಿಲ್ಲ, ನಮ್ಮೆಜಮಾನ್ರು ಚಿಲ್ಲರೆ ಮನುಷ್ಯರಾಗುಳೀದೇ ಗಟ್ಟಿ ಕುಳವಾಗ್ತಿದಾರೆ- ಎಲ್ಲಾ ಆ ಫೈಲುದೇವತೆಯ ದಯೆ" ಎಂದು ಎರಡೂ ಕಂತೆಗಳಿಗೆ ಕಣ್ಣು ಹಚ್ಚಿ ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟಳು.

*

ರಕ್ತ ತಪಾಸಣೆ ಮುಗಿಸಿದ ನಂತ್ರ ಡಾಕ್ಟರು "ನಿಮ್ಮದು 'ಆರೆಚ್' ಗ್ರೂಪ್ಪು" ಅಂದರು.

"ಅಂದ್ರೆ?" ಅಂದ ಗುಂಡ.

"ಅಂದ್ರೆ ಆರೆಚ್ ಅನ್ನೋದು ರ್ಹೀಸಸ್ ಅನ್ನೋ ಮಂಗಗಳಲ್ಲಿ ಕಂಡುಬಂದ ರಕ್ತದ ಗುಂಪು" ವಿವರಿಸಿದರು ಡಾಕ್ಟರರು.

ಗುಂಡನಿಗೀಗ ಮಂಗ ನನಮಗನೇ ಅಂದರೆ ಕೋಪ ಬರುವುದಿಲ್ಲ. "ಖರೆ ಹೇಳ್ದಿ" ಎನ್ನುತ್ತಾನೆ.

*

"ಒಂದ್ಸವಾಲ್.. ಒಂದ್ಸವಾಲ್.. ೧೨೫ ರೂಪಾಯಿ. ಹಾಂ. ಹೇಳಿ. ಈ ಸುಂದರ ಪಾದ ಶಿವಾಜಿಯ ವಿಗ್ರಹಕ್ಕೆ ಬೇರೆ ಯಾರು ಎರಡನೆ ಸವಾಲ್ ಹೇಳ್ತೀರಿ?"

"ರೀ.. ಅದು ಶಿವಾಜಿಯ ವಿಗ್ರಹ ವಲ್ರೀ ಕಾಳಿದಾಸನದು."

"ಹಾಂ, ಹೌದಾ? ಕ್ಷಮಿಸಿ. ನನಗೆ ಮಹಾಭಾರತದ ವ್ಯಕ್ತಿಗಳ ಪರಿಚಯಾನೇ ಇಲ್ಲ."

# ಕೂಡ್ಲಿ ಕೃಷ್ಣ

ಬಯಲು ಸೀಮೆಯ ದಯಾಳು ಪುಂಡ ಸಿಂಧೂರ ಲಕ್ಷ್ಮಣ ಮತ್ತು ಮಲೆನಾಡಿನ ಕನ್ನೇಶ್ವರ ರಾಮನ ಹೆಸರು ಹೇಳುತ್ತಲೇ ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ-ಸಿದ್ದಾಪುರ ತಾಲೂಕಿನ ಹಳ್ಳಿಗಳ ಹಿರಿಯರಿಗೆ ಈ ವ್ಯಕ್ತಿ ನೆನಪಾಗುತ್ತಾನೆ. ನಿರ್ಗತಿಕರ ಮಗಳದ್ದೋ ತಂಗಿಯದ್ದೋ ಮದುವೆಯನ್ನು ತಾನೇ ನಿಂತು ಮಾಡಿ ಮುಗಿಸಿ ಅವರ ಬಾಳಿಗೊಂದು ನೆಲೆ ತೋರಿಸಿದ ಪ್ರಸಂಗಗಳೋ ಅಟ್ಟಹಾಸದಿಂದ ಮೆರೆಯುವ ದುಷ್ಟ ಶ್ರೀಮಂತರ ಮನೆ ಸೂರೆಗೈದು ತಂದ ಸಂಪತ್ತನ್ನೆಲ್ಲ ಬಡವರಿಗೆ ಹಂಚಿದ ಘಟನೆಗಳೋ ಒಟ್ಟು ಆತನ ಮಾನವೀಯತೆಯ ಬಗ್ಗೆ ಆತನನ್ನು ನೋಡಿದ ಈ ಹಿರಿಯರು ಹೃದಯ ತುಂಬಿ ಕೊಂಡಾಡುತ್ತಾರೆ. "ಕೂಡ್ಲಿ ಕಿಷ್ನ ಇದ್ದ ಅಂತ್ಲೇ ನಮ್ಮ ಬಾಳೆ ಬಚಾವಾತು. ಇಲ್ಲದಿದ್ರೆ ಈ ಸ್ಥಿತೀಗೆ ನಾವು ಬರ್ತಿರ್ಲಿಲ್ಲ......" ಎಂದು ಕಣ್ಣೊರೆಸಿ ಕೊಳ್ಳುತ್ತಾರೆ.

ಮೂವತ್ತು ನಲವತ್ತರ ದಶಕಗಳ ಹಿಂದು ಮುಂದಿನ ವರ್ಷಗಳಲ್ಲಿ ಕೃಷ್ಣ ಬಡವರ ಬಂಧುವಾಗಿ ಬಾಳಿದ. ಭಟಕಳ ತಾಲೂಕಿನ ಕೂಡ್ಲಿ ಗ್ರಾಮದ ರೈತ ಕುಟುಂಬದವ ಆತ. ಹನ್ನೆರಡನೆಯ ವಯಸ್ಸಿಗಾಗಲೇ ಶ್ರೀಮಂತರ ವೈಭವದ ಜೀವನ, ಬಡವರ ಗೋಳಿನ ಬಾಳನ್ನು ಕಂಡು ಈ ಅಂತರ ಏಕೆ ಎಂದು ಯೋಚಿಸಲಾರಂಭಿಸಿದ. ಅವರೇಕೆ ಹಾಲಿನಲ್ಲಿ ಕೈ ತೊಳೆಯಬೇಕು, ಇವರಿಗಾದರೆ ಕಣ್ಣೀರೇ ಕೂಳಾಗಬೇಕೇಕೆ ಎಂದುಕೊಂಡ. ಬಡತನವನ್ನು ಸ್ವತಃ ಅನುಭವಿಸಿ ನೊಂದುಕೊಂಡ. ಆರ್ಥಿಕ-ಸಾಮಾಜಿಕ ಅಸಮಾನತೆಯನ್ನು ಕಂಡು ಬಂಡೆದ್ದು ಮುಂದೆನಿಂತ ಕೂಡ್ಲಿ ಕೃಷ್ಣ 'ಕಳ್ಳ'ನಾದ.

ಮನೆಯನ್ನು ತೊರೆದ ಕೃಷ್ಣ ಉತ್ತರ ಕನ್ನಡ ಜಿಲ್ಲೆಯ ರುದ್ರ ರಮಣೀಯ ಕಾಡನ್ನೇ ಮನೆ ಮಾಡಿಕೊಂಡ. ಕಾಡಲ್ಲೇ ಬೆಳೆದ ಕೃಷ್ಣನಿಗೆ ಅದರ ಅಂಗುಲಂಗುಲವೂ ಗೊತ್ತು. ಹಗಲಿಡೀ ಆತ ವಿಶ್ರಾಂತಿ ಪಡೆಯುತ್ತಿದ್ದ. ರಾತ್ರಿ ಹೊರಟು ಶ್ರೀಮಂತರ ಮನೆ ಮುತ್ತುತ್ತಿದ್ದ. ದರೋಡೆ ಮಾಡುತ್ತಿದ್ದ. ಅದಕ್ಕೂ ಮೊದಲು ಯಾರ ಮನೆ ಕೊಳ್ಳೆ ಹೊಡೆಯಬೇಕು, ಹೇಗೆ ಹೊಡೆಯ ಬೇಕು ಎಂಬುದನ್ನು ಯೋಜಿಸುತ್ತಿದ್ದ. ಹಾಗೆಯೇ

**ಶಶಿಧರ ಭಟ್ಟ, ಬಳಗುಳಿ**

ಕಷ್ಟದಲ್ಲಿದ್ದವರು ತಮ್ಮ ತೊಂದರೆ ಹೇಳಿಕೊಂಡರೆ ಸಾಕು, ದರೋಡೆ ಮಾಡಿ ತಂದದ್ದನ್ನೆಲ್ಲ ಅವರಿಗೆ ಕೊಟ್ಟು ಸಾಗಿಬಿಡುತ್ತಿದ್ದ.

ಕೃಷ್ಣನ ಬಗ್ಗೆ ಹೆಚ್ಚು ಮಾಹಿತಿ ಸಂಗ್ರಹಿಸಲು ಯತ್ನಿಸುತ್ತಿದ್ದಾಗ ಸಿದ್ದಾಪುರದಿಂದ ನಾಲ್ಕು ಮೈಲು ದೂರದ ಹೆಗ್ಗೋಡ ಮನೆಯ ವೃದ್ಧನ ಬಗ್ಗೆ ಒಬ್ಬ ಹೇಳಿದ. ಅಲ್ಲಿಗೆ ಹೋದ. ವೃದ್ಧನನ್ನು ಭೇಟಿಯಾದೆ. ನಲವತ್ತು ವರ್ಷಗಳಾಗಿರಬೇಕು, ಆಗೊಮ್ಮೆ ತಾನು ಆತನನ್ನು ಕಂಡುದಾಗಿ ಆ ವೃದ್ಧ ಹೇಳಿದ. ಹೆಗ್ಗೋಡ ಮನೆಯಲ್ಲೇ ಒಂದು ಲೂಟಿ ಪ್ರಸಂಗ ನಡೆಯಿತು. ವೃದ್ಧನ ವಿವರಣೆ ಹೀಗಿತ್ತು.

"ಹೆಗ್ಗೋಡಮನೆ ದೊಡ್ಡ ಗೌಡರು ಸತ್ತರು. ಎಣಾನ ಮೀಯ್ಸಿ ಜಗಲಿಮ್ಯಾಕೆ ತಂದು ಕೂಡ್ಸಿದ್ರು. ಮನಾಗಿರ್ವ ಬಂಗಾರನೆಲ್ಲಾ ಎಣಕ್ಕ ತೊಡ್ಸಿದ್ರು. ನೆಂಟರಿಸ್ಟ್ರು ಬಂದಮ್ಯಾಕೆ ಶಿವಪುರಾಣಾ ಹಚ್ಚ ಬೇಕು ಅಂತ ಮನಿಮಂದಿ ಹಂಬಲು. ಮೂರು ದಿಸಾ ಆಗಬೇಕು ಎಣದ ಮುಂದೆ ಪುರಾಣಾ. ಚೆಂಜೆ ಆರ ಗಂಟೇಕೆ ಪುರಾಣಾ ಸುರುವಾತು. ರಾತ್ರಿ ಹನ್ನೆರಡು ಆಗೊ ಹೊತ್ತಿಗೆ ಮನೆ ಸುತ್ತ

ಎಲ್ಲಾ ಮಲಗಿಬಿಟ್ರು. ಎಣದ ಮುಂದೆ ಪುರಾಣಾ ಓತ್ತಿರೋ ಐನೋರು ಕುಂತಿದ್ರು. ಸುತ್ತಲಿನ ಕಾಡೆಲ್ಲಾ ಜೀ ಅಂತಿತ್ತು. ಐನೋರ್ಗೆ ಎದರ್ಕೆ. ಸಾವು. ಎದರ್ತಾ ಎದರ್ತಾ ಎಣಾನ ಒಮ್ಮೆ, ಪುರಾಣದ ಪುಸ್ತಕಾನೊಮ್ಮೆ ನೋಡ್ತಿದ್ದಂಗೇ ಎಣಾ ಅಲ್ಲಾಡಾಕೆ ಸೂರು ಆತು.

"ಐನೋರು ಚಿಟ್ಟಂತ ಚೀರಿ ಎದ್ದೋಡಿಬಿಟ್ರು. ಬೆಳಿಗ್ಗೆ ಎದ್ದು ನೋಡ್ತಾರೆ ಅಲ್ಲಿ ಎಣಾನೇ ಇರ್ಲಿಲ್ಲ. 'ಗೌಡ್ರು ಈಗ ಅವ ಕೂಡ ಶಿವನ ಪಾದಾ ಸೇರೀದ್ರೂ' ಅಂತ ಎಲ್ಲಾ ತಿಳಕೊಂಡ್ರು. ಆದ್ರೆ ನಾಕ ದಿನದ ಮ್ಯಾಲೆ ಊಳ್ಳಿಗೋಣಬ್ಯಾಗೆ ಎಣಾ ಸಿಕ್ತು. ಪೂರ್ತಾ ಕೊಳತೋಗಿತ್ತು. ಬಂಗಾರಾ ಇರ್ಲಿಲ್ಲ…ಇದು ಕಳ್ಳ ಕಿಷ್ಣಂದೇ ಕೆಲ್ಸಾ ಅಂತ ಜನಾ ಅಂತಿದ್ರು. ಕಿಷ್ಣನ ಬಗ್ಗೆ ನಂಗೆ ಗೊತ್ತಾದ್ದು ಆಗ್ಲೆ," ಎಂದು ಹೇಳಿದ ವೃದ್ಧ ಹಳದೋಟದ ನಾಯ್ಕರ ಮನೆಯಲ್ಲಿ ಹಣದ ಕಳುವಾದ ಸಂದರ್ಭದಲ್ಲಿ ಸಿದ್ದಾಪುರದಲ್ಲಿ ಕೃಷ್ಣ ಬಂಧಿಸಲ್ಪಟ್ಟದ್ದನ್ನೂ ಆಗ ತಾನು ಆತನನ್ನು ಕಣ್ಣಾರೆ ನೋಡಿದ್ದನ್ನೂ ಹೇಳಿದ. "ಸಿಕ್ಕ ಬಿದ್ರೂ ನಗೆಯಾಡ್ತಾನೇ ನಿಂತಿದ್ದ. ಬಯಾ, ಎದರ್ಕೆ ಅನ್ನೋದು ಒಂಚೂರು ಅವನ ಮುಕದ ಮ್ಯಾಕೆ ಕಾಣ್ತಿರ್ಲಿಲ್ಲ," ಅಂದ.

ಭಟಕಳದಲ್ಲೊಮ್ಮೆ ನವಾಯಿತರ ಮದುವೆ ಇತ್ತು. ಶ್ರೀಮಂತರ ಭರ್ಜರಿ ಮದುವೆ ಅದು. ಮದುಮಗನ ಚಿನ್ನದ ಸರವನ್ನು ಕದಿಯುತ್ತೇನೆಂದು ಕೃಷ್ಣ ಮೊದಲೇ ಘೋಷಿಸಿದ್ದ. ಈ ಘಟನೆ ನಡೆಯುವಾಗ ಕೃಷ್ಣನ ಮೇಲೆ ಪೋಲೀಸ್ ವಾರಂಟ್ ಇತ್ತು. ಆತ ಸಿಕ್ಕಿರಲಿಲ್ಲ. ಸಿಕ್ಕರೆ ಈ ಸಮಯದಲ್ಲೇ ಸಿಕ್ಕಾನು ಎಂದು ಮಫ್ತಿ ಪೋಲೀಸರು ಮದುವೆಯ ಮೆರವಣಿಗೆಯೊಂದಿಗೆ ಸಾಗಿದರು. ಮೆರವಣಿಗೆಯೂ ಮುಗಿಯಿತು. ಆದರೂ ಕೃಷ್ಣನ ಸುಳಿವಿರಲಿಲ್ಲ. ಪೋಲೀಸರಿಗೋ ಖುಷಿಯೋ ಖುಷಿ, ತಾವಿದ್ದೆವೆಂದೇ ಆತ ಸುಳಿಯಲಿಲ್ಲ ಎಂದು. ಕಳುವು ಮಾಡುತ್ತೇನೆಂದು ಹೇಳಿ ಮಾಡದೇ ಇದ್ದುದು ಇದೇ ಮೊದಲ ಬಾರಿ ಎಂದು ಜನ ಆಡಿಕೊಳ್ಳಲು ಆರಂಭಿಸಿದರು. ಎಲ್ಲಾ ಹೋಗಿಯಾದ ಮೇಲೆ ಮದುಮಗನ ಕೊರಳಲ್ಲಿಯ ಚಿನ್ನದ ಸರ ಕಾಣೆಯಾಗಿದ್ದು ಗೊತ್ತಾಯಿತು!

ಬಡ ಹುಡುಗಿಯ ಮದುವೆಯ ಖರ್ಚಿಗೆ ಹಣ ಕೊಡುವುದಾಗಿ ಒಮ್ಮೆ ಮಾತು ಕೊಟ್ಟಿದ್ದ ಕೃಷ್ಣ ಹಣ ಕದಿಯುವಾಗಲೇ ಸಿಕ್ಕಿಬಿದ್ದ. ತಾನು ಸಿಕ್ಕಿಬಿದ್ದುದಕ್ಕೆ ಅವನಿಗೆ ಬೇಸರವಿರಲಿಲ್ಲ, ಮದುವೆಗೆ ಹಣ ಕೊಡುವುದಾಗಿ ಹೇಳಿ ಕೊಡದೇ ಹೋದೆನಲ್ಲ ಎಂಬ ಆತಂಕ. ತಪ್ಪಿಸಿಕೊಂಡು ಹೋಗಬೇಕೆಂದರೆ ಭರ್ತಿ ಪೋಲೀಸು ಕಾವಲು. ಪೋಲೀಸರಿಗೋ ಕೃಷ್ಣನನ್ನು ಕಾಯುವುದೆಂದರೆ ಹುಲಿಯೆದುರು ಕುಳಿತ ಹಾಗೆ. ಕೃಷ್ಣ ಹಣದ ಆಸೆ ತೋರಿಸಿದ. ತನ್ನನ್ನು ಬಿಟ್ಟುಬಿಟ್ಟರೆ ಅವರು ಜೀವನವಿಡೀ ಸುಖದಿಂದಿರುವಷ್ಟು ಹಣ ಕೊಡುತ್ತೇನೆಂದ. ಪೋಲೀಸರು ಬಾಯುಗಲಿಸಿದರು. ಬಿಟ್ಟರು. ತಪ್ಪಿಸಿಕೊಂಡು ಹೋದನೆಂದು ಪುಕಾರೆದ್ದಿತು. ಪೋಲೀಸರ ನೌಕರಿ ಹೋಯಿತು. ಆದರೆ ಕೃಷ್ಣ ಕೊಟ್ಟ ಮಾತು ಉಳಿಸಿಕೊಂಡಿದ್ದ. ಪೋಲೀಸರಿಗೂ ಸಾಕಷ್ಟು ಹಣ ನೀಡಿದ್ದ. ಅತ್ತ ಮದುವೆಯನ್ನೂ ಸಾಂಗವಾಗಿಸಿದ್ದ.

ಸಿದ್ದಾಪುರ ತಾಲೂಕ ಕಂಚೀಮನೆ ವೆಂಕಪ್ಪ ಹೆಗಡೆ

"ಇವರು ಈ ದೇಶವನ್ನು ಎಂದೋ ರಾಮರಾಜ್ಯವನ್ನಾಗಿ ಮಾಡಿಬಿಡುತ್ತಿದ್ದರು. ಆದರೆ ತಕ್ಕ ಹನುಮಂತ ಸಿಗದಿದ್ದುದರಿಂದ ……"

ಯವರು ಆಗ ದೊಡ್ಡ ಕುಳ. ಅವರಲ್ಲಿಗೆ ಹೋಗಿ ಬರುವ ಜನ ಹೆಚ್ಚು. ಅವರದು ದೊಡ್ಡ ಮನೆ. ಪಾತ್ರೆಪಗಡೆಗಳನ್ನು ಇಡಲು ಅಗಲವಾದ ಹಳೆಯ ನಾಗಂದಿಗೆಗಳಿದ್ದವು. ಅವರ ಮನೆಯಲ್ಲಿ ಹೇರಳ ಬಂಗಾರವಿದೆ ಎಂದು ಪ್ರತೀತಿಯಿತ್ತು. ಕೃಷ್ಣ ಕುಂಚೀಮನೆಗೆ ಬಂಗಾರ ಕದಿಯಲೆಂದೇ ಬಂದ. ಆದರೆ ಅವನಿಗೆ ಸರಿಯಾದ ಸಂದರ್ಭ ಒದಗಿ ಬರಲೇ ಇಲ್ಲ. ಸಂದರ್ಭಕ್ಕಾಗಿ ಕಾಯುತ್ತ ಮನೆಯ ನಾಗಂದಿಗೆಯ ಮೇಲೇ ಮೂರು ದಿವಸ ಕಳೆದನಂತೆ ಭೂಪ. ಕೊನೆಗೂ ಸಂದರ್ಭ ಒದಗಿಬಂತು. ಆದರೆ ಅವನ ಅದೃಷ್ಟಕ್ಕೆ ಅವನು ಹೊತ್ತುಕೊಂಡು ಹೋದ ಪೆಟ್ಟಿಗೆ ತುಂಬ ಹಳೆಯ ಕಬ್ಬಿಣದ ಸಾಮಾನುಗಳೇ ತುಂಬಿಕೊಂಡಿದ್ದುವಂತೆ! ಪ್ರಾಯಶಃ ಕೃಷ್ಣ ದರೋಡೆ ಪ್ರಕರಣದಲ್ಲಿ ವಿಫಲನಾದದ್ದು ಈ ಹಳ್ಳಿಯಲ್ಲಿ ಮಾತ್ರವೇನೋ.

ಒಮ್ಮೆ ಬ್ರಿಟಿಷ್ ಕಲೆಕ್ಟರ್ ಕಾನಗೋಡಿನಲ್ಲಿ (ಸಿದ್ದಾಪುರ ತಾಲೂಕಿನ ಒಂದು ಹಳ್ಳಿ) ವಾಸ್ತವ್ಯ ಮಾಡಿದ್ದನಂತೆ. ಅವನ ಡೇರೆಯ ಸುತ್ತ ಸೆಂತ್ರಿಯ ಪಹರೆ. ಎರಡು ಅಲ್ಸೇಷಿಯನ್ ನಾಯಿಗಳ ಕಾವಲು ಬೇರೆ. ಕಲೆಕ್ಟರನಿಗೆ ಕೂಡ್ಲಿ ಕೃಷ್ಣನ ಪ್ರತಾಪ ಗೊತ್ತಿತ್ತು. "ಅವನು ನಿಜವಾದ ಪ್ರತಾಪಿಯಾದರೆ ನನ್ನ ಡೇರಿಯಲ್ಲಿ ಕಳ್ಳತನ ಮಾಡಲಿ," ಎಂದು ಆಹ್ವಾನಿಸಿದ್ದನಂತೆ. ಇದನ್ನು ಕೇಳಿದ ಕೃಷ್ಣ ಡೇರೆಯ ಸುತ್ತಮುತ್ತ ಓಡಾಡತೊಡಗಿದನಂತೆ. ನಾಯಿಗಳಿಗೆ ಬಿಸ್ಕೀಟು ರೊಟ್ಟಿಗಳನ್ನು ಕೊಟ್ಟು ವಶೀಕರಿಸಲು ಪ್ರಯತ್ನಿಸಿ ವಿಫಲನಾದನಂತೆ. ನಂತರ ಬೇಯಿಸಿದ ಕೊಬ್ಬರಿಗಳನ್ನು ನಾಯಿಗಳ ಮುಂದೆ ಒಗೆಯತೊಡಗಿದ. ನಂತರ ಒಂದು ರಾತ್ರಿ ಡೇರೆಯನ್ನು ಹೊಕ್ಕು ಕಲೆಕ್ಟರನನ್ನು ಎಬ್ಬಿಸಿ, "ಏನನ್ನು ಕಳುವು ಮಾಡಲಿ?" ಎಂದು ಪ್ರಶ್ನಿಸಿದನಂತೆ!

೧೯೩೧-೩೨ ನೇ ಸಾಲಿನಲ್ಲಿ ಕೃಷ್ಣ ಕಾರವಾರ ಜೈಲಿನಲ್ಲಿದ್ದ. ಅದೇ ವೇಳೆಯಲ್ಲಿ ಸಿದ್ದಾಪುರ ತಾಲೂಕಿನ ಕೆಲವು ಸ್ವಾತಂತ್ರ್ಯಯೋಧರೂ ಅದೇ ಜೈಲಿನಲ್ಲಿದ್ದರು. ಜೈಲಿನಲ್ಲಿನ ಅವನ ಬದುಕನ್ನು ಅವರು ಈ ಕೆಳಗಿನಂತೆ ವಿವರಿಸುತ್ತಾರೆ.

"ಕೃಷ್ಣ ಅಷ್ಟು ಎತ್ತರವೂ ಅಲ್ಲದ ಕುಳ್ಳ ಎನ್ನಲೂ ಬಾರದ. ಹಾಸ್ಯಪ್ರವೃತ್ತಿಯ ಮನುಷ್ಯನಾಗಿದ್ದ. ಜೈಲಿನಲ್ಲಿರುವಾಗಲೇ ಶ್ರೀಮಂತರ ಬಗ್ಗೆ ಅವನಿಗಿರುವ ದ್ವೇಷ ಅವನ ಕಣ್ಣಲ್ಲಿ ಆಗಾಗ ವ್ಯಕ್ತವಾಗುತ್ತಿತ್ತು. ಆದರೆ ಜೈಲಿನಲ್ಲಿ ಅವನೊಬ್ಬ ನಿರುಪದ್ರವಿ ವ್ಯಕ್ತಿ. ಬೆಳಿಗ್ಗೆ ಆರಕ್ಕೆ ಎದ್ದವನೇ ಸ್ನಾನ, ದೇವರ ಪೂಜೆ ಮುಗಿಸಿ. ಬೆತ್ತದಿಂದ ಕುರ್ಚಿಗಳನ್ನು ಹೆಣೆಯುವ ಕೆಲಸದಲ್ಲಿ ನಿರತನಾಗುತ್ತಿದ್ದ."

ಸಿದ್ದಾಪುರ ಬಳಿಯ ಹೊಸೂರಿನ ಟಪಾಲ ಕೆರಿಯಾ ಎಂಬವನ ಮದುವೆಯನ್ನು ಅದ್ದೂರಿಯಾಗಿ ನಡೆಸಿದನಂತೆ. ಆ ಮದುವೆಯನ್ನು ನೋಡಿದ ಮುದುಕರು ಮದುವೆಯ ವೈಭವವನ್ನು ಈಗಲೂ ವರ್ಣಿಸುತ್ತಾರೆ. ಒಂದು ಅಂದಾಜಿನ ಪ್ರಕಾರ ೧೯೪೬-೪೭ ರಲ್ಲಿ ಜೈಲಿನಿಂದ ಕೃಷ್ಣ ತಪ್ಪಿಸಿಕೊಂಡು ಬಂದ. ಆಗಲೇ ತಾನು ಕದ್ದ ದ್ರವ್ಯವನ್ನು ಸಿದ್ದಾಪುರದ ಹತ್ತಿರದ ಹೊಸೂರಿನ ರೈತರಿಗೆ ಹಂಚಿದನಂತೆ! ನಂತರದ ನೆಲವೇ ದಿನಗಳಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸಿದ.

ಕೃಷ್ಣನ ಬಗ್ಗೆ ಏನಾದರೂ ವಿಷಯ ಸಿಗಬಹುದೇನೋ ಎಂದು ಸಿದ್ದಾಪುರದ ಆರಕ್ಷಕ ಠಾಣೆಗೆ ಭೇಟಿ ಕೊಟ್ಟೆ. ಕೃಷ್ಣನ ಬಗ್ಗೆ ಏನಾದರೂ ಮಾಹಿತಿ ಸಿಗಬಹುದೆ ಎಂದು ಕೇಳಿದೆ. "ಆ ಕ್ರಿಮಿನಲ್ ಬಗ್ಗೆ ಮಾಹಿತಿ ತೊಗೊಂಡು ಏನ್ ಮಾಡ್ತೀರಿ? ನಂಬರ್ ಒನ್ ಕಳ್ಳ ಅವ" ಎಂದ. ಠಾಣೆಯಲ್ಲಿ ಕುಳಿತ ಧಫೇದಾರ ಒಬ್ಬ. "ಈಗ ನಮ್ಮಲ್ಲಿ ಹಳೇ ರಿಕಾರ್ಡ್ಸ್ ಎಲ್ಲ ಇರೋದಿಲ್ಲ, ಮೂರು ವರ್ಷದ ಹಿಂದಿನದೆಲ್ಲ ಡಿಸ್ಟ್ರಾಯ್ ಮಾಡಿದೀವಿ," ಎಂದೂ ಹೇಳಿದ!

ಶ್ರೀಮಂತರ ಬಗ್ಗೆ ಎಷ್ಟು ಕಟುವಾಗಿದ್ದನೋ ಬಡವರ ಬಗ್ಗೆ ಅಷ್ಟೇ ದಯಾಪರನಾಗಿದ್ದ ಕೃಷ್ಣ ವೃತ್ತಿಯಲ್ಲಿ ಕಳ್ಳನಾಗಿದ್ದರೂ ಸಮತಾವಾದಿಯಾಗಿದ್ದ.

✡

# ಅತೀತದ ಪರದೆಗಳಾಚೆ

ಮೂಲ: **ಎ. ಎನ್. ಫಿಲಿಪ್ಸ್**

ಅನುವಾದ: **'ಸವ್ಯಸಾಚಿ'**

೨೦ನೇ ಶತಮಾನದ ಇಬ್ಬರು ಮಹಿಳೆಯರು ೧೭೮೯ರ ಫ್ರಾನ್ಸನ್ನು ಕಣ್ಣಾರೆ ಕಂಡಿದ್ದಾರೆಂಬುದನ್ನು ನಂಬಲು ಸಾಧ್ಯವೆ? ಅವರ ಪಾರ್ಥಿವ ದೃಷ್ಟಿ ಗತ ಕಾಲದ ಪರದೆಯನ್ನು ಸೀಳಲು ಸಮರ್ಥವಾಯಿತೆ? ಈ ಇಬ್ಬರು ಆಂಗ್ಲ ಮಹಿಳೆಯರ ಹೇಳಿಕೆಯನ್ನು ನಂಬುತ್ತೇವೆಂದರೆ ಇವರು ೧೮ನೇ ಶತಮಾನದ ಜನರನ್ನು ನೋಡಿ ಅವರೊಡನೆ ಮಾತಾಡಿದರೆಂದೇ ಹೇಳಬೇಕು. ಅವರು ಆ ವಾತಾವರಣದಲ್ಲಿ ಸುತ್ತಾಡಿ ಆ ದೃಶ್ಯಗಳನ್ನು ಕಂಡುಬಂದರೆಂದು ಒಪ್ಪಬೇಕು. ಅಲ್ಲದೆ ಸುಮಾರು ೧೩೦ ವರ್ಷಗಳ ಹಿಂದೆಯೇ ಕಣ್ಮರೆಯಾದ ಸೇತುವೆಯನ್ನೂ ಅವರು ಏರಿದ್ದರೆಂದು ಭಾವಿಸಬೇಕು.

ಮಿಸ್ ಸಿ. ಎ. ಈ. ಮೋಬರ್ಲೆ ೧೮೮೬ರಲ್ಲಿ ಆಕ್ಸ್‌ಫರ್ಡಿನ ಸೆಂಟ್ ಹ್ಯೂಜ್ ಕಾಲೇಜಿನಲ್ಲಿ ಪ್ರಧಾನಾಧ್ಯಾಪಕಿಯಾಗಿದ್ದಳು. ಆಕೆ ೧೯೧೫ರಲ್ಲಿ ರಾಜೀನಾಮೆಯಿತ್ತಳು. ಕೆಲ ವರ್ಷಗಳವರೆಗೆ ಉಪಪ್ರಧಾನಾಧ್ಯಾಪಕಿಯಾಗಿದ್ದ ಮಿಸ್ ಎಲೆನೋರ್ ಎಫ್ ಜೋರ್ಡೆನ್ ಆ ಸ್ಥಾನಕ್ಕೆ ಬಂದಳು. ಆಕೆ ಫ್ರೆಂಚ್ ಭಾಷೆಯನ್ನು ಚೆನ್ನಾಗಿ ಅರಿತಿದ್ದುದರಿಂದ ಯುದ್ಧದ ವೇಳೆ ಆಗಿನ ಸರಕಾರ ಆಕೆಯ ನೆರವು ಪಡೆಯಿತು.

ಈ ಕತೆ ಈ ಇಬ್ಬರು ಮಹಿಳೆಯರಿಗೆ ಸಂಬಂಧಿಸಿದುದು. ತಮ್ಮ ಅತೀತಯಾತ್ರೆಯ ಪ್ರತಿಯೊಂದು ಅಂಶವನ್ನು ಅವರು ತುಂಬ ಸೂಕ್ಷ್ಮವಾಗಿ ಪರಿಶೀಲಿಸಿದರು. ಅದು ಅವರು ಕಂಡಿದ್ದನ್ನು ರುಜುಗೊಳಿಸಲು ಸಾಕಾಗಿದೆ.

೧೯೦೧ರ ಆಗಸ್ಟ್ ೧೦ ರಂದು ಮಿಸ್ ಮೋಬರ್ಲೇ ಹಾಗೂ ಮಿಸ್ ಜೋರ್ಡೆನ್ ವಾರ್ಸಾಯಿಗೆ ಹೊರಟರು. ಅವರಿಬ್ಬರೂ ಆ ವೇಳೆ ಪ್ಯಾರಿಸ್ಸಿನಲ್ಲೇ ಇರುತ್ತಿದ್ದರು. ಮಿಸ್ ಮೋಬರ್ಲೆ ಮಿಸ್ ಜೋರ್ಡೆನಳ ಅತಿಥಿಯಾಗಿದ್ದು ಅಕ್ಕಪಕ್ಕದ ಐತಿಹಾಸಿಕ ಸ್ಥಳಗಳನ್ನು ನೋಡುತ್ತಿದ್ದಳು. ಆದರೆ ಅವರಿಬ್ಬರೂ ಈ ಮೊದಲು ವಾರ್ಸಾಯಿ ಅಥವಾ ತ್ರಿಯೆನನ್ ನೋಡಿರಲಿಲ್ಲ. ಇದು ಅವರ ಮೊದಲ ಪ್ರವಾಸವಾಗಿತ್ತು.

ವಾರ್ಸಾಯಿಗೆ ತಲುಪಿದ ಬಳಿಕ ಒಂದು ಉದ್ಯಾನದಲ್ಲಿರುವ ಅರಮನೆ ಪೇತಿತ್ ತ್ರಿಯೆನನ್‌ನ್ನು ನೋಡಬಯಸಿದರು. ಈ ಅರಮನೆ ಮೇರೀ ಅಂತೋಯಿನೆಯ ಮೆಚ್ಚಿನ ವಿಹಾರ ಸ್ಥಳವಾಗಿತ್ತು.

ಆ ವಾರವಿಡೀ ಸೆಕೆಯೇ ಇದ್ದರೂ ಆಗಸ್ಟ್ ೧೦ ರಂದು ಮಾತ್ರ ವಾತಾವರಣ ತುಂಬ ಮನೋಹರ

ವಾಗಿತ್ತು. ಆಕಾಶದಲ್ಲಿ ಬಿಳಿ ಹಾಗೂ ನೀಲಿ ಮೋಡ ಗಳು ಕವಿದಿದ್ದವು. ಸೂರ್ಯನ [illegible] ಕಿರಣಗಳು [illegible]ವಾಗಿದ್ದವು. ಗಾಳಿಯು ಬೀಸಾಡುವುದರಲ್ಲಿ [illegible] ಸಂಗೀತ ಮಾರ್ದನಿಗೊಡುತ್ತಿತ್ತು. ವಾರ್ಸಾಯಿ ಅರಮನೆಯಿಂದ ಹೊರಟು ಅವರು ತ್ರಿಯೆನನ್‌ದಿಂದ ಮುಂದುವರಿದರು. ಅವರಿಗೆ ಸರಿಯಾಗಿ ಹಾದಿಯ ಪರಿಚಯ ಇರುತ್ತಿದ್ದರೆ ಸುಲಭವಾಗಿ ಪೇತಿತ್ ಪ್ರಿಯೆನನ್‌ಗೆ ತಲುಪುತ್ತಿದ್ದರು. ಆದರೆ ಅವರು ಸರಿ ದಾರಿ ಬಿಟ್ಟು ಒಂದು ಓಣಿಯ ಮೂಲಕ ಸಾಗಿದರು. ಇದು ಅವರನ್ನು ಅರಮನೆಯ ಹಿಂಭಾಗದಲ್ಲಿರುವ ವಿಶಾಲ ಹೂದೋಟಕ್ಕೆ ತಲುಪಿಸಿತು.

ಈ ಓಣಿಯಲ್ಲೇ ಅವರ ಪ್ರವಾಸದ ಅಲೌಕಿಕ ಘಟನೆಗಳು ಘಟಿಸಿದವು. ಇಲ್ಲೇ ಅವರು ಮನೆಯೊಂದರ ಬಳಿ ಬೇಸಾಯದ ಇತರ ಉಪಕರಣಗಳ ಜೊತೆಗೆ ದೊಡ್ಡದೊಂದು ನೇಗಿಲನ್ನು ಕಂಡರು. ಇಲ್ಲೇ ಅವರಿಗೆ ಇಬ್ಬರು ವ್ಯಕ್ತಿಗಳು ಕಾಣಸಿಕ್ಕರು. ಅವರೊಡನೆ ತ್ರಿಯೆನನ್‌ಗೆ ಹೋಗುವ ಹಾದಿ ಕೇಳಿದರು. ಅರಮನೆಯ ಕಾವಲುಗಾರರಂತೆ ಕಾಣುವ ಈ ವ್ಯಕ್ತಿಗಳು ಹಸುರು ಬಣ್ಣದ ಸಮವಸ್ತ್ರ ಹಾಗೂ ತ್ರಿಕೋಣಾಕೃತಿಯ ಹ್ಯಾಟ್ ಧರಿಸಿದ್ದರು. ನೇರವಾಗಿ ಮುಂದುವರಿಯುವಂತೆ ಅವರು ಸೂಚಿಸಿದರು.

ಇಬ್ಬರೂ ಮಹಿಳೆಯರು ಮುಂದುವರಿಯುತ್ತ ಹೋದಂತೆ ತುಂಬ ಚಕಿತರಾದರು. ಸುತ್ತಲೂ ವಿಚಿತ್ರ ಶೂನ್ಯ ಆವರಿಸಿತ್ತು. ಎಲ್ಲವೂ ನೀರಸವಾಗಿತ್ತು. ಕಣ್ಣೆದುರಿನ ಆ ದೃಶ್ಯಗಳೆಲ್ಲ ಅಸ್ವಾಭಾವಿಕವೆಂದು ಅವರಿಗನ್ನಿಸಿತು. ಗಾಳಿಯಿಲ್ಲ... ನೆರಳಿಲ್ಲ... ಜೀವನವಿಲ್ಲ... ಭಯಂಕರ ನೀರವತೆಯೊಂದೇ ತುಂಬಿದೆ... ಭಯಂಕರ ಏಕಾಂತ, ನಿರ್ಜೀವ ಶೂನ್ಯತೆ ಹಾಗೂ ವಿಚಿತ್ರ ಸ್ತಬ್ಧತೆ-ಅವರ ಈ ಪ್ರವಾಸದ ವೈಶಿಷ್ಟ್ಯವಾಗಿತ್ತು. ತಾವು ಯಾವುದೋ ವಿಚಿತ್ರ ಸಂಗ್ರಹಾಲಯದೊಳಗೆ ಸಿಕ್ಕುಬಿದ್ದಿರುವಂತೆ ಅವರಿಗನ್ನಿಸಿತು. ಬಂಧನದ ಈ ಭಾವನೆ ಅವರನ್ನು ಒಂದು ವರ್ತಮಾನದಿಂದ ಹಿಂದಿನ ಕಾಲಕ್ಕೆ ಕರೆದೊಯ್ದಿತು.

ಅವರು ಸಾಗುತ್ತಿದ್ದ ದಾರಿ ಮುಗಿದು, ಅವರೊಂದು ಕಾಲುದಾರಿಗೆ ತಲುಪಿದರು. ಹಾಗೆಯೆ ಮುಂದುವರಿದು ಅವರೊಂದು ದಟ್ಟಡವಿಗೆ ಹೋದರು. ದೊಡ್ಡ ದೊಡ್ಡ ಮರಗಳ ಅವ್ಯವಸ್ಥಿತ ಸಾಲುಗಳ ನಡುವೆ ತಗ್ಗು ಗೋಡೆ, ಉರುಟು ಕಂಭ



ಹಾಗೂ ಸುಂದರ ನೆಲದಿಂದ ಅಲಂಕೃತವಾದೊಂದು ಸಣ್ಣ ದುಂಡನೆಯ ಅರಮನೆ ಕಂಗೊಳಿಸುತ್ತಿತ್ತು. ಮಿಸ್ ಮೋಬರ್ಲೆ ಇದನ್ನು ಪುಟ್ಟ 'ಕುಂಜಭವನ' ಎಂದು ಕರೆದಳು.

ಈ ಕುಂಜಭವನದ ಮೆಟ್ಟಲುಗಳ ಬಳಿಯೇ ಗೂಂಡಾನಂತೆ ಕಾಣಿಸುವ ಮನುಷ್ಯನೊಬ್ಬ ಕುಳಿತಿದ್ದ. ಇನ್ನೊಬ್ಬ ಯುವಕ ಅವನ ಹಿಂದೆ ನಿಂತುದನ್ನು ಅವರು ಕಂಡರು. ಯುವಕ ನಡುಗುತ್ತಿದ್ದ. ತುಂಬ ಭಯಗೊಂಡವನಂತೆ ಕಾಣಿಸುತ್ತಿದ್ದ.

ಆತನ ಕರಿ ಉಡುಪಿನ ಅಂಚು ಗಾಳಿಯಲ್ಲಿ ಹಾರುತ್ತಿತ್ತು. ಆತ ನಡುಗುವ ದನಿಯಿಂದ ಈ ಮಹಿಳೆಯರೊಡನೆ ಮಾತಾಡತೊಡಗಿದ. ಅವರಿಗೆ ಅವನ ಮಾತು ಅರ್ಥವಾಗಲಿಲ್ಲ. ನಡುನಡುವೆ ಒಂದೆರಡು ಶಬ್ದಗಳಷ್ಟೇ ಅರ್ಥವಾದವು. ಇವರಿಗೆ ಬಲಬದಿಯ ಹಾದಿಯಿಂದ ಮುಂದುವರಿಯುವಂತೆ ಸೂಚಿಸಿದ ಆ ಯುವಕ.

ಯುವಕನ ಒತ್ತಾಯ ಹಾಗೂ ಉತ್ತೇಜನಾಪೂರ್ಣ ಸ್ವರವನ್ನು ಕಂಡು ಈ ಮಹಿಳೆಯರು ಚಕಿತರಾದರು. ಆದರೂ ಅವನ ಮಾತಿಗೊಪ್ಪಿ ಬಲ ದಾರಿಯಿಂದ ಸಾಗಿದರು. ಒಂದು ಸಣ್ಣ ಸುಂದರ ಜಲಪಾತದ ಬಳಿ ಅವರು ಒಂದು ಸೇತುವೆಯನ್ನು ದಾಟಿದರು. ಒಂದಿಷ್ಟು ಬಾಗಿದ್ದರೆ ಜಲಪಾತದ ನೀರನ್ನು ಅವರು ಸ್ಪರ್ಶಿಸುತ್ತಿದ್ದರೇನೋ! ಸೇತುವೆಯಾಚೆ ಮರಗಳಿಂದಾವೃತವಾದ ಒಂದು ಮೈದಾನ ಇತ್ತು. ಅದರಾಚೆ ಕುಂಜಭವನದ ಉತ್ತರದಲ್ಲಿ ಒಂದು ಇಂಗ್ಲೀಷ್ ಉದ್ಯಾನವಿತ್ತು. ಇಲ್ಲಿ ಮಿಸ್ ಮೋಬರ್ಲೆ ಮಹಿಳೆಯೊಬ್ಬಳನ್ನು ಕಂಡಳು. ಆದರೆ ಮಿಸ್ ಜೋರ್ಡೇನಳ ದೃಷ್ಟಿ ಅತ್ತ ಹರಿಯಲಿಲ್ಲ. ಮಿಸ್ ಮೋಬರ್ಲೆ ಆ ಮಹಿಳೆಯ ಆಕೃತಿ ಹಾಗೂ ವಸ್ತ್ರಗಳನ್ನು ವಿವರವಾಗಿ ವರ್ಣಿಸಿದ್ದಾಳೆ. ಹಿಂದೆ ಬಾರಿ ಸಿಕ್ಕ ಪುರುಷರಂತೆಯೇ ಈಕೆ ಕೂಡ ಗತಕಾಲಕ್ಕೆ ಸೇರಿದವಳೆಂಬುದು ಈ ವರ್ಣನೆಯಿಂದ ವ್ಯಕ್ತವಾಗುತ್ತದೆ. ಮಹಿಳೆ ಸಣ್ಣ ಸ್ಟೂಲಿನ ಮೇಲೆ ಕುಳಿತಿದ್ದಳು. ಆಕೆಯ ಕೈಯಲ್ಲಿ ಒಂದು ದೊಡ್ಡ ಹಾಳೆಯಿತ್ತು. ಆಕೆ ಎದುರಿನ ಮರಗಳ ಚಿತ್ರ ಬಿಡಿಸುತ್ತಿರುವಂತೆ ತೋರುತ್ತಿತ್ತು.

ಮಿಸ್ ಮೋಬರ್ಲೆ ಹಾಗೂ ಮಿಸ್ ಜೋರ್ಡೇನ್ ಹತ್ತಿರ ಬರುತ್ತಲೇ ಆಕೆ ಕಾಗದ ತಿರುವಿಬಿಟ್ಟಳು. ಹೀಗಾಗಿ ಆ ಚಿತ್ರ ಏನೆಂದು ತಿಳಿಯದಾಯಿತು. ಆ ಬಳಿಕ ಆಕೆ ತನ್ನ ಮೊಗವೆತ್ತಿ ಅವರನ್ನು ನೋಡಿದಳು. ಮಿಸ್ ಮೋಬರ್ಲೆ ಹಿಂದಿರುಗಿ ಆಕೆಯನ್ನು ದಿಟ್ಟಿಸಿ ನೋಡಿ ಅವಳ ಉಡುಗೆಯ ಪೂರ್ತಿ ವಿವರವನ್ನು ನೆನಪಿಟ್ಟುಕೊಂಡಳು.

ಅವರು ಅರಮನೆಯ ಕಿಟಕಿಯ ಸಮೀಪ ಸಾಗಿದಾಗ ಹತ್ತಿರದ ಇಗರ್ಜಿಯಿಂದ ಒಬ್ಬ ಮನುಷ್ಯ ಹೊರಟ. ಅರಮನೆಯೊಳಗೆ ಪ್ರವೇಶಿಸಬೇಕಿದ್ದರೆ ಎದುರಿನ ಬಾಗಿಲಿನಿಂದ ಹೋಗಬೇಕೆಂದು ಆತ ಸೂಚಿಸಿದ. ಅವನು ಅವರಿಗೆ ದಾರಿ ತೋರಿಸುತ್ತ, ಫ್ರೆಂಚ್ ಉದ್ಯಾನದ ನಟ್ಟನಡುವಿನಿಂದ ಅರಮನೆಯ ಪಶ್ಚಿಮ ಭಾಗಕ್ಕೆ ಕರೆದೊಯ್ದ. ಆ ಮನುಷ್ಯ ತಮ್ಮನ್ನು ಕಂಡು ಮನಸ್ಸಿನಲ್ಲೇ ಮುಗುಳ್ನಗುತ್ತಿದ್ದಾನೆಂದು ಅವರಿಗನ್ನಿಸಿತು. ಕಟ್ಟಕಡೆಗೆ ಆತ ಅವರನ್ನು ಒಂದು ದೊಡ್ಡ ಹಾದಿಗೆ ತಂದು ಮುಟ್ಟಿಸಿದ. ಆಗಲೇ ತಾವು ೨೦ನೇ ಶತಮಾನಕ್ಕೆ ಮರಳಿದ್ದೇವೆಂದು ಮಿಸ್ ಮೋಬರ್ಲೆ ಹಾಗೂ ಮಿಸ್ ಜೋರ್ಡೇನಳಿಗನ್ನಿಸಿತು.

ಅರಮನೆಗೆ ಹೋಗುತ್ತಲೇ ಎದುರಿನ ದೊಡ್ಡ ಸಭಾಭವನದಲ್ಲಿ ವಿವಾಹ ಸಮಾರಂಭವೊಂದು ನಡೆಯುತ್ತಿತ್ತು. ಅವರಿಬ್ಬರೂ ಅದರಲ್ಲಿ ಭಾಗವಹಿಸಿದರು ಮತ್ತು ಅವರೊಂದಿಗೇ ಅರಮನೆಯ ಒಳಭಾಗಗಳಿಗೂ ಹೋದರು. ಈಗ ಅಸಹಜತೆ, ಶೂನ್ಯತೆ ಹಾಗೂ ವಿಕೃತತೆ- ಎಲ್ಲವೂ ಮರೆಯಾಗಿದ್ದವು. ಇಬ್ಬರಿಗೂ ಬಿಡುಗಡೆಯ ಅನುಭವವಾಯಿತು. ಪೇತಿತ್ ತ್ರಿಯೆನನ್ ಅರಮನೆಯನ್ನು ಕಂಡು ಅವರು ಒಂದು ಗಾಡಿಯಲ್ಲಿ ಕುಳಿತು ವಾರ್ಸಾಯಿಗೆ ಮರಳಿದರು.

ಮುಂದೆ ಪ್ಯಾರಿಸ್ ತಲುಪಿದ ಬಳಿಕ ಅವರಿಬ್ಬರೂ ತಮ್ಮ ಈ ವಿಚಿತ್ರ ಪ್ರವಾಸದ ಬಗ್ಗೆ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡರು. ತ್ರಿಯೆನನ್ ಉದ್ಯಾನದಲ್ಲಿ ಕುಳಿತ ಆ ಅಪರಿಚಿತ ವ್ಯಕ್ತಿಗಳಾರು? ರಹಸ್ಯಮಯವಾಗಿ ಚಿತ್ರ ಬಿಡಿಸುತ್ತಿದ್ದ ಆ ಸುಂದರಿ ಯಾರು? ಮೃತ್ಯುವಿನ ನೀರವತೆ, ಪ್ರಳಯಾನಂತರದ ಆ ಭಯಂಕರ ಶೂನ್ಯತೆ-ಇವೆಲ್ಲದರ ಅರ್ಥವೇನು? ಎಂದು ಅವರು ವಿಮರ್ಶಿಸತೊಡಗಿದರು. ಇಬ್ಬರೂ ಬೆರಗಾದರು. ಕಳವಳಗೊಂಡರು.

ನಾನು ಮಿಸ್ ಮೋಬರ್ಲೆ ಹಾಗೂ ಮಿಸ್

ಜೋರ್ಡೇನಳ ಯಾತ್ರಾವರ್ಣನೆಯನ್ನು ಅವರ ವರದಿಗಳನ್ನೊಟ್ಟು ಸಾರಾಂಶರೂಪದಲ್ಲಿ ಬರೆದಿದ್ದೇನೆ. ಇಬ್ಬರೂ ಮಹಿಳೆಯರ ಸಹಿಯೊಂದಿಗೆ ಆ ಮೂಲ ವರದಿ ಆಕ್ಸ್‌ಫರ್ಡ್(ಇಂಗ್ಲೆಂಡ್)ನ ಬೋಡಲೀನ್ ಲೈಬ್ರರಿಯಲ್ಲಿ ಸುರಕ್ಷಿತವಾಗಿದೆ. ಈ ವರದಿಗಳೊಂದಿಗೆ ಹಲವಾರು ವ್ಯಕ್ತಿಗಳ ಲಿಖಿತ ಸಾಕ್ಷಿಯೂ ಇದೆ. ಅವರೆಲ್ಲರೂ ಈ ಮಹಿಳೆಯರ ಬಾಯಿಯಿಂದಲೇ ಪೇತಿತ್ ತ್ರಿಯೆನನ್ ಉದ್ಯಾನಗಳ ಪ್ರವಾಸವರ್ಣನೆಯನ್ನು ಕೇಳಿದ್ದರು.

ಮಿಸ್ ಮೋಬರ್ಲೀ ಹಾಗೂ ಮಿಸ್ ಜೋರ್ಡೇನ್ ಉದ್ಯಾನದಲ್ಲಿ ಕುಡ ಪುರುಷರ ಪರಿಚಯಕ್ಕಾಗಿ ಶೋಧ ನಡೆಯಿತು. ಪ್ರವಾಸಾರಂಭದಲ್ಲಿ ಅವರಿಗೆ ಇಬ್ಬರು ಕಾವಲುಗಾರರು ಕಾಣಿಸಿಕ್ಕರು. ಅವರ ಉಡುಪು ಹಾಗೂ ಆಕೃತಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸಲಾಯಿತು. ಅವರು ಧರಿಸಿದ್ದ ಕಾಲುಚೀಲಗಳ ಬಗೆಗೂ ಪರೀಕ್ಷೆ ನಡೆಯಿತು.

ಒಟ್ಟು ಆರು ಮಂದಿಯನ್ನು ಅವರು ತ್ರಿಯೆನನ್‌ನಲ್ಲಿ ಭೇಟಿಯಾಗಿದ್ದರು. ಆದರೆ ಉದ್ಯಾನ ಎರಡಕ್ಕಿಂತ ಹೆಚ್ಚು ಜನರನ್ನು ಅವರು ಕಂಡಿರಲಿಲ್ಲ. ಹಲವು ವರ್ಷಗಳವರೆಗೆ ನಿರಂತರ ಶೋಧ ನಡೆಸಿದ ಬಳಿಕ ಅವರೆಲ್ಲ ೧೮ನೇ ಶತಮಾನದ ಕೊನೆಯ ದಶಕದಲ್ಲಿ ಬಳಕೆಯಲ್ಲಿದ್ದ ಬಗೆಗಿನ ಉಡುಗೆ ಧರಿಸಿದ್ದರೆಂದು ತಿಳಿಯಿತು.

೧೯೦೨ರ ಜನವರಿ ೨ರಂದು ಮಿಸ್ ಜೋರ್ಡೇನ್ ಪುನಃ ವಾರ್ಸಾಯಿಗೆ ಹೋದಳು. ಆಕೆ ನೇರವಾಗಿ 'ಟೆಂಪಲ್ ಡಿ ಲೇ ಅಮೋರ್'ಗೆ ಹೋದಳು. ಆದರೆ ತಾನು ಮೊದಲ ಪ್ರವಾಸದಲ್ಲಿ ಕುಡ ಕುಂಜ ಭವನ ಅದಲ್ಲ ಎಂದು ಆವಳಿಗೆ ಮನವರಿಕೆಯಾಯಿತು. ಅಲ್ಲಿಂದ ಆಕೆ ಸರೋವರದ ತೀರದಲ್ಲಿನ ಸಣ್ಣಸಣ್ಣ ಮನೆಗಳ ಬಳಿ ಹೋದಳು. ಈಗ ಆಕೆಗೆ



“ರಿ, ಬೇಗ ಏಳಿರಿ, ಇಂದು, ನಿಮ್ಮ 'ರಾಶಿಫಲ'ದಲ್ಲಿ ಅಕಸ್ಮಾತ್ ಯೋಗ ಇದೆ. ಕಂಟ್ರೋಲಿನಲ್ಲಿ ಸಕ್ಕರೆ ಸಿಕ್ಕಿದರೂ ಸಿಕ್ಕಬಹುದು. ಪ್ರಯತ್ನಿಸಿರಿ......”

ಮತ್ತೆ ಅದೇ ನಿಶ್ಶಬ್ದತೆಯ ಅನುಭವವಾಯಿತು. ಅದೃಶ್ಯ ಸೀಮೆಯೊಂದನ್ನು ದಾಟಿ ಮಾಯಾ ಲೋಕದ ವಾತಾವರಣಕ್ಕೆ ತಲುಪಿದಂತೆ ತನಗೆ ಭಾಸವಾಯಿತು ಎಂದು ಮಿಸ್ ಜೋರ್ಡೇನ್ ಬರೆದಿದ್ದಾಳೆ. ಈ ಮಾತು ತುಂಬ ಮಹತ್ವಪೂರ್ಣವಾದುದು. ತ್ರಿಯೆನನ್ ಉದ್ಯಾನದಲ್ಲಿ ನಿಜಕ್ಕೂ ಅಜ್ಞಾತ ಶಕ್ತಿ ಹುದುಗಿದೆಯೆ? ಮನುಷ್ಯನನ್ನು ಸಮಯದ ಮೇರೆಯಾಚೆ ಅತೀತದ ಗರ್ಭಕ್ಕೆ ಸೆಳೆದೊಯ್ಯಲು ಅದು ಸಮರ್ಥವಾಗಿದೆಯೆ?

ಮುಂದುವರಿದಂತೆ ಆ ವಾತಾವರಣ ಇನ್ನಷ್ಟು ನಿಚ್ಚಳವಾಯಿತು. ಮಿಸ್ ಜೋರ್ಡೇನ್ ಒಂದು ದಟ್ಟಡವಿಗೆ ತಲುಪಿದ್ದಳು. ಅಲ್ಲಿ ಹಲವಾರು ದಾರಿಗಳಿದ್ದವು. ಆಕೆ ಕೆಲ ಕಾಲ ಅಲ್ಲಿಯೇ ಅಲೆದಾಡುತ್ತಿದ್ದಳು. ಆಗಲೇ ಆ ಅಪರಿಚಿತ ಕಾಡಿನಲ್ಲಿ ಫ್ರೆಂಚ್ ಭಾಷೆ ಮಾತಾಡುತ್ತಿದ್ದ ಕೆಲ ಅದೃಶ್ಯ ವ್ಯಕ್ತಿಗಳ ಸ್ವರ ಕೇಳಿಸಿತು. ವಾದ್ಯಗಳಿಂದ ಮೆಲ್ಲನೆ ಹೊರಹೊರಡುವ ಸಂಗೀತ ಸ್ವರ ಕೇಳಿ ಬಂತು. ಮುಂದೆ ಮಿಸ್ ಜೋರ್ಡೇನ್ ನೆನಪು ಮಾಡಿಕೊಂಡು ಕೆಲ ಶಬ್ದಗಳನ್ನು ಬರೆದುಕೊಂಡಳು. ಅವನ್ನೋದಿ ಈ ಸಂಗೀತ ೧೮ನೇ ಶತಮಾನದ ಕೊನೆ ಹಾಗೂ ೧೯ನೇ ಶತಮಾನದ ಆರಂಭದಲ್ಲಿ ಬಳಕೆಯಲ್ಲಿತ್ತೆಂದು ವಿದ್ವಾಂಸರು ಅಭಿಪ್ರಾಯಪಟ್ಟರು.

ಮುಂದೆ ೨ ವರ್ಷಗಳವರೆಗೆ ಮಿಸ್ ಜೋರ್ಡೇನ್ ಹಲವು ಸಲ ತ್ರಿಯೆನನ್‌ಗೆ ಹೋದರೂ, ಆ ಹಿಂದಿನ ಅನುಭವ ಮಾತ್ರ ಆಗಲಿಲ್ಲ. ಪ್ರಯತ್ನಪಟ್ಟು ಹುಡುಕಿದರೂ ೧೯೦೧ರಲ್ಲಿ ಸಾಗಿದ ಹಾದಿ ಮಾತ್ರ ಕಾಣಸಲಿಲ್ಲ. ತಾನು ಸಂಗೀತ ಕೇಳಿದ ಆ ಕಾಡೂ ಸಿಗಲಿಲ್ಲ. ಮಿಸ್ ಜೋರ್ಡೇನ್ ಈ ಸಂಗತಿಯನ್ನು ಮಿಸ್ ಮೋಬರ್ಲಿಗೆ ತಿಳಿಸಿದಳು. ೧೯೦೪ರ ಜುಲೈ ೪ರಂದು ಅವರಿಬ್ಬರೂ ಮರಳಿ ತ್ರಿಯೆನನ್‌ನ ಉದ್ಯಾನಕ್ಕೆ ಹೋದರು. ಆದರೆ ಅವರಿಗೆ ಈ ಬಾರಿ ಆ ದಾರಿ, ಅರಮನೆ, ಸೇತುವೆ, ಕಾಡು, ಉದ್ಯಾನ– ಯಾವುದೂ ಸಿಗಲಿಲ್ಲ. ಅವುಗಳ ಬದಲು ಹೊಸ ಅರಮನೆ, ದಾರಿ ಹಾಗೂ ಹೂದೋಟ ಕಂಡವು. ಅವರು ಕಂಡಿದ್ದ ದೃಶ್ಯಾವಳಿಗಳು ಮೊದಲು ಇರಲೇ ಇಲ್ಲ. ಇದ್ದಿದ್ದರೂ ಅವನ್ನು ನೆಲ ನುಂಗಿರಬೇಕೆಂದು ತೋರುತ್ತಿತ್ತು. ಈಗ ಅವರು ತುಂಬ ಚಕಿತರಾದರು.

ಸೂಕ್ಷ್ಮವಾಗಿ ಪರಿಶೀಲಿಸಿದಾಗ ೧೯೦೧ರಲ್ಲಿ ಆ ಮಹಿಳೆಯರು ಕಂಡಿದ್ದ ದೃಶ್ಯಗಳೆಲ್ಲವೂ ೧೭೮೯ರಲ್ಲಿ ಆ ರೂಪದಲ್ಲೇ ಇದ್ದವೆಂದು ತಿಳಿದುಬಂತು. ಈ ಪ್ರವಾಸಾನಂತರ ನಡೆಸಿದ ಎಲ್ಲ ಶೋಧವೂ ಬೋದಲೇನ್ ಲೈಬ್ರರಿಯಲ್ಲಿ ಸುರಕ್ಷಿತವಾಗಿದೆ.

೧೯೦೮ರಲ್ಲಿ ಮಿಸ್ ಜೋರ್ಡೇನ್‌ಗೆ ಗತಕಾಲದ ಈ ಅನುಭವ ಮೂರನೇ ಬಾರಿ ದೊರೆಯಿತು. ಮೊದಲ ಪ್ರವಾಸಿಸಿದ ಓಣಿಯಲ್ಲೇ ಅವಳಿಗೆ ಇಂಥ ಅನುಭವ ಉಂಟಾಯಿತು. ಒಳ–ಹೊರ ಪರಿಸ್ಥಿತಿಗಳಲ್ಲಿ ವಿಶೇಷ ಬದಲಾವಣೆ ಆಗಿದೆಯೆಂದು ಆಕೆಗೆ ತೋರಿತು. ತಾನು ಒಮ್ಮೆಲೇ ಯಾವುದೋ ಬೇರೊಂದು ಸ್ಥಾನಕ್ಕೆ ಕಾಲಿಟ್ಟಂತೆ ಅವಳಿಗನ್ನಿಸಿತು.

ಇನ್ನೊಂದು ಅಂಶ ಇಲ್ಲಿ ಉಲ್ಲೇಖನೀಯ. ೧೯೦೪ರಲ್ಲಿ ಈ ಇಬ್ಬರೂ ಮಹಿಳೆಯರು ಫ್ರೆಂಚ್ ಪರಿವಾರವೊಂದನ್ನು ಭೇಟಿಯಾದರು. ಅದು ೧೯೦೭ ಹಾಗೂ ೧೯೦೮ರಲ್ಲಿ ವಾರ್ಸಾಯಿಯಲ್ಲಿತ್ತು. ಈ ಪರಿವಾರದ ಜನರೂ ತ್ರಿಯೆನನ್ ಉದ್ಯಾನದಲ್ಲಿ ವಿಚಿತ್ರ ಘಟನೆಯನ್ನು ಕಂಡಿದ್ದರು. ಆಗಾಗ ಅಲ್ಲಿಯ ದೃಶ್ಯಾವಳಿಗಳು ಬದಲಾಗಿ, ವಿಚಿತ್ರ ಲೋಕದಲ್ಲಿ ತಾವು ತಿರುಗಾಡುವಂತೆ ಅನಿಸುತ್ತಿತ್ತೆಂದು ಅವರೆಂದರು. ಈ ಪರಿವಾರದ ಕೆಲ ಜನರು ವಿಚಿತ್ರ ಧ್ವನಿಗಳನ್ನು, ಸಂಗೀತಲಹರಿಯನ್ನು ಕೇಳಿದ್ದರು. ಆ ಇಡೀ ಪ್ರದೇಶ ವಿದ್ಯುತ್ ತರಂಗಿಂತವಾಗಿದೆಯೆಂದು ಅವರಿಗನ್ನಿಸಿತು. ಈ ಸಂಗತಿ ಓದಿ, 'ಆ್ಯನ್ ಎಡ್ವಂಚರ್'ನ ಲೇಖಕಿಯರು ಕ್ಯಾಲಂಡರ್ ತೆಗೆದು ನೋಡಿದರು. ೧೦–೮–೧೯೦೧ ರಂದು ಇಡೀ ಯುರೋಪಿನಲ್ಲೇ ವಿದ್ಯುತ್ ತೂಫಾನ್ ಬೀಸಿತ್ತೆಂದು ಅವರಿಗೆ ತಿಳಿಯಿತು.

ಏನೇ ಇರಲಿ. ಮಿಸ್ ಮೋಬರ್ಲೀ ಹಾಗೂ ಮಿಸ್ ಜೋರ್ಡೇನ್ ಸುಳ್ಳುಗಾತಿಯರಲ್ಲ. ಅವರಿಗುಂಟಾದ ವಿಚಿತ್ರ ಅನುಭವಕ್ಕೆ ಕಾರಣ ತಿಳಿಯುವುದು ಸುಲಭವೇನೂ ಅಲ್ಲ. ಇದೇ ರೀತಿ ಹಲವರಿಗೆ ಅಂಥ ಅನುಭವ ಬಂದಿರಬಹುದು. ಆದರೆ ಅತೀತದ ಅನುಭವ ಉಂಟುಮಾಡುವ ಇಂಥ ಘಟನೆಗಳಿಗೆ ವಿಜ್ಞಾನ ಅದಾವ ಕಾರಣ ನೀಡಿಸುತ್ತದೆ?

✿

ದೇಶವನ್ನು ಅಲಕ್ಷಿಸಿರುವ
ವಿಜ್ಞಾನದ ಮಹತ್ತರ ವಿಭಾಗ

# ಬಹುಶಕ್ತಿ ವಿಜ್ಞಾನ

**ಡಾ. ವಿ. ಶ್ರೀಧರ್***

ತನ್ನ ರಾಕೆಟ್ಟನ್ನೇ ಉಪಯೋಗಿಸಿ ತನ್ನ ಉಪ-ಗ್ರಹವನ್ನು ಭೂ ಕಕ್ಷೆಯಲ್ಲಿರಿಸುವುದರಲ್ಲಿ ಯಶಸ್ವಿಯಾಗಿದ್ದರ ಮೂಲಕ ಬಾಹ್ಯಾಕಾಶ ವಿಜ್ಞಾನದ ವಿಶಿಷ್ಟ ಕೂಟಕ್ಕೆ ಏಳನೆಯ ರಾಷ್ಟ್ರವಾಗಿ ಭಾರತ ಪ್ರವೇಶಿಸಿದ್ದು ಕಳೆದ ಜುಲೈ ೨೬ರ 'ಸೈನ್ಸ್‌ನ್ಯೂಸ್' ನಲ್ಲಿ ವಿವರವಾಗಿ ವರದಿಯಾಗಿತ್ತು. ಅದೇ ಪುಟದಲ್ಲೇ ಮತ್ತೊಂದು ಯಶಸ್ಸಿನ ವರದಿಯಿತ್ತು. ಆದರೆ ಇದು ಬಾಹ್ಯಾಕಾಶದ ಅಗಾಧತೆಯ ತದ್ವಿರುದ್ಧವಾದ ಸೂಕ್ಷ್ಮಾತಿಸೂಕ್ಷ್ಮವಾದ ಪರಮಾಣು ಪ್ರಪಂಚಕ್ಕೆ ಸಂಬಂಧಿಸಿತ್ತು. ಅತ್ಯಂತ ಮಹತ್ವದ ಪರಮಾಣುಕಣವೊಂದನ್ನು ಕಂಡು ಹಿಡಿಯುವುದರಲ್ಲಿ ಯಶಸ್ವಿಯಾಗಿದ್ದರು ಅಮೇರಿಕದ ವಿಜ್ಞಾನಿಗಳು. ಬಾಹ್ಯಾಕಾಶ ವಿಜ್ಞಾನದಲ್ಲಿ ಭಾರತದ ಯಶಸ್ಸು ಭಾರತೀಯನಾದ ನನಗೆ ಹೆಮ್ಮೆ ತರುತ್ತಿದ್ದಂತೆಯೇ, ನನ್ನ ಸಂಶೋಧನಾ ಕ್ಷೇತ್ರವಾದ ಪರಮಾಣುಕಣ ವಿಜ್ಞಾನದ ಮಹತ್ವದ ಸುದ್ದಿಯಾದ್ದರಿಂದಲೂ ಮತ್ತು ಆ ಅಮೇರಿಕನ್ ವಿಜ್ಞಾನಿಗಳ ತಂಡದಲ್ಲಿ ನನ್ನ ಸ್ನೇಹಿತರಿದ್ದುದರಿಂದಲೂ ನನ್ನ ಹರ್ಷ ಇಮ್ಮಡಿಸಿತು, ಆ ಎರಡನೆಯ ಸುದ್ದಿಯಿಂದಾಗಿ. ಆದರೆ ಅದರೊಂದಿಗೇ ಪರಮಾಣುಕಣ ವಿಜ್ಞಾನದಲ್ಲಿ ಹಿಂದೆ ಬಿದ್ದಿರುವ ಭಾರತದ ಸ್ಥಿತಿಯು ಅರಿವಾಗಿ ಅತೃಪ್ತಿಯೂ ಮೂಡಿತು. ಭೌತವಿಜ್ಞಾನದಲ್ಲಿ ಇಂದು ಪ್ರಮುಖ ಕ್ಷೇತ್ರವಾಗಿದ್ದು, ವಿಶ್ವರಚನೆಯ ಬುಡವನ್ನೇ ಪರೀಕ್ಷಿಸುವುದರ ಮೂಲಕ ಕುತೂಹಲಭರಿತವಾಗಿದ್ದು, ಬಹುಶಕ್ತಿಯ ಸಾಧನ ಸಲಕರಣೆಗಳನ್ನುಪಯೋಗಿಸುವ ಮೂಲಕ ತಾಂತ್ರಿಕ ಜ್ಞಾನದಲ್ಲಿಯೂ ಮಹತ್ವ ತಳೆದಿರುವ ಈ ವಿಜ್ಞಾನದ ಬಗ್ಗೆ ಜನಸಾಮಾನ್ಯರಿಗಷ್ಟೇ ಅಲ್ಲದೆ ಬಹುತೇಕ ವಿದ್ಯಾವಂತರಿಗೂ ಹೆಚ್ಚು ತಿಳಿದಿಲ್ಲ. ಆದ್ದರಿಂದ ಈ ಬಗ್ಗೆ ಕನ್ನಡಿಗರಿಗೆ ಸ್ಥೂಲವಾಗಿ ಪರಿಚಯ ಮಾಡಿಕೊಡಲು ಈ ಲೇಖನ.

ವಿಶ್ವದಲ್ಲಿನ ಕೋಟ್ಯಂತರ ಬಗೆಯ ವಸ್ತು

---

* ಕನ್ನಡಿಗರಾದ ಡಾ. ವಿ. ಶ್ರೀಧರ್ ಅವರು ಅಮೇರಿಕದ ಕ್ಲೀವ್‌ಲ್ಯಾಂಡಿನಲ್ಲಿರುವ ಕೇಸ್ ವೆಸ್ಟರ್ನ್ ರಿಜರ್ವ್ ಯೂನಿವರ್ಸಿಟಿಯ ಭೌತವಿಜ್ಞಾನ ವಿಭಾಗದಲ್ಲಿದ್ದಾರೆ. ಕಳೆದ ೧೩ ವರ್ಷಗಳಿಂದ ಅವರು ಬಹುಶಕ್ತಿ ಭೌತವಿಜ್ಞಾನದಲ್ಲಿ ಸಂಶೋಧನೆಯಲ್ಲಿ ತೊಡಗಿದ್ದಾರೆ.

ಗಳೆಲ್ಲ ಕೇವಲ ಸುಮಾರು ನೂರು ಬಗೆಯ ಪರಮಾಣುಗಳಿಂದ ಮಾತ್ರ ಮಾಡಲ್ಪಟ್ಟಿರುವುದೆಂಬುದೇ ಅನೇಕರಿಗೆ ಆಶ್ಚರ್ಯ ತರಿಸುತ್ತದೆ ಇಂದೂ. ಆದರೆ ಈ ಪರಮಾಣುಗಳೂ ಕೇವಲ ಮೂರು ಬಗೆಯ ಕಣಗಳಿಂದಾಗಿವೆ ಎಂಬುದು ಐವತ್ತು ವರ್ಷಗಳಿಗೂ ಹಿಂದೆಯೇ ವಿಜ್ಞಾನಿಗಳಿಗೆ ತಿಳಿದಿತ್ತು. ಸೌರವ್ಯೂಹದ ಬಹುತೇಕ ವಸ್ತು ಸೂರ್ಯನೊಬ್ಬನಲ್ಲಿ ಕೇಂದ್ರೀಕೃತವಾಗಿದ್ದು ಗ್ರಹಗಳು ಸೊಣಗಳಂತೆ ದೂರ ದೂರದ ಪಥಗಳಲ್ಲಿ ಸುತ್ತುತ್ತಿರುವಂತೆಯೇ ಪರಮಾಣುವಿನ ಬಹುತೇಕ ವಸ್ತು ಅದರ ಕೇಂದ್ರದಲ್ಲಿ (Nucleus) ಅಡಕವಾಗಿದ್ದು, ಅದರ ಸುತ್ತಲೂ ಅದಕ್ಕಿಂತ ಸಾವಿರಾರು ಪಾಲು ಲಘುವಾದ ಎಲೆಕ್ಟ್ರಾನುಗಳು ಸುತ್ತುತ್ತಿವೆಯೆಂಬುದೂ ಬಹು ಹಿಂದೆಯೇ ತಿಳಿದು ಬಂದ ವಿಷಯ. ಪರಮಾಣು ಕೇಂದ್ರ ಪ್ರೋಟಾನ್ ಮತ್ತು ನ್ಯೂಟ್ರಾನ್ ಎಂಬೆರಡು ಕಣಗಳಿಂದಾಗಿದೆಯೆಂದೂ, ಒಂದು ಬಗೆಯ ಪರಮಾಣುವಿಗೂ ಮತ್ತೊಂದು ಬಗೆಯ ಪರಮಾಣುವಿಗೂ ಇರುವ ವ್ಯತ್ಯಾಸ ಕೇವಲ ಪ್ರೋಟಾನ್ ಮತ್ತು ನ್ಯೂಟ್ರಾನ್‌ಗಳ ಸಂಖ್ಯೆಯಲ್ಲಿ ಮಾತ್ರವೇ ಎಂದೂ, ಬಹು ಸಂಖ್ಯೆಯ ಕಣಗಳಿರುವ ಪರಮಾಣುಕೇಂದ್ರವನ್ನು ವಿಭಜಿಸಿದರೆ ಎರಡು, ಮೂರು ಬಗೆಯ ಪರಮಾಣುಗಳಷ್ಟೇ ಅಲ್ಲದೆ ಬಂಧನ ಚೈತನ್ಯವೂ (Binding Energy) ಹೊರಬರುವುದೆಂದೂ ಕಾಲಕ್ರಮೇಣ ತಿಳಿದುಬಂದು ಈಗ ಚಿರಪರಿಚಿತವಾಗಿರುವ ಪರಮಾಣು ಬಾಂಬುಗಳಿಗೂ, ಶಾಂತಿಯುತ ಬಳಕೆಗಳಿಗೂ ನಾಂದಿ ಮಾಡಿಕೊಟ್ಟಿತು. ಸ್ವಾಭಾವಿಕ ವಿದಳನ ಗುಣವನ್ನು (Natural Fission) ಹೊಂದಿರುವ ಯುರೇನಿಯಂನಿಂದ ಪರಮಾಣುಶಕ್ತಿಯನ್ನು ಸಂಗ್ರಹಿಸಿಕೊಳ್ಳುವ ತಾಂತ್ರಿಕ ಜ್ಞಾನವನ್ನೇ ಇನ್ನೂ ಜೀರ್ಣಿಸಿಕೊಳ್ಳಲು ಆಗಿಲ್ಲ ಪ್ರಪಂಚದ ಬಹುತೇಕ ರಾಷ್ಟ್ರಗಳಿಗೆ. ಹೀಗಿರುವಾಗ ಪರಮಾಣು ಕೇಂದ್ರಕ್ಕಿಂತಲೂ ಸಾವಿರಾರು ಪಾಲು ಚಿಕ್ಕದಾದ, ಪರಮಾಣು ಕೇಂದ್ರ ವಿದಳನ ಚೈತನ್ಯಕ್ಕಿಂತಲೂ ಸಾವಿರಾರು ಪಾಲು ಹೆಚ್ಚಿನ ಚೈತನ್ಯ ಪ್ರಯೋಗದಿಂದ ಮಾತ್ರ ತೋರಿಬರಬಲ್ಲ ಪರಮಾಣು ಕಣಗಳ ಬಗ್ಗೆ ಪಾಶ್ಚಾತ್ಯ ದೇಶಗಳಲ್ಲೂ ಜನ ಸಾಮಾನ್ಯರಿಗೆ ಹೆಚ್ಚು ತಿಳಿಯದಿರುವುದು ಆಶ್ಚರ್ಯವೇನಲ್ಲ. ಆದರೂ, ಸಾರ್ವಜನಿಕ ಜ್ಞಾನ ಬಲವಾಗಿಲ್ಲವೆಂಬ ಮಾತ್ರಕ್ಕೇ ಈ ಕ್ಷೇತ್ರದ ಮಹತ್ವವನ್ನು ಕಡೆಗಣಿಸುವಂತಿಲ್ಲ.

ಪರಮಾಣುವಿನಲ್ಲಿ ಮೂರು ಬಗೆಯ ಕಣಗಳಿರುವುದಾದರೂ ಪ್ರಕೃತಿ ತನ್ನ ಬತ್ತಳಿಕೆಯಲ್ಲಿ ಇನ್ನೂ ಅನೇಕ ಬಗೆಯ ಕಣಗಳನ್ನು ಇಟ್ಟುಕೊಂಡಿದೆಯೆಂಬುದು ಕಳೆದ ಮೂವತ್ತು ವರ್ಷಗಳಲ್ಲಿ ಆಗಿರುವ ಸಂಶೋಧನೆಗಳಿಂದ ಗೊತ್ತಾಗಿರುವ ವಿಷಯ. ಆದರೆ ಈ ಕಣಗಳಲ್ಲಿ ಬಹುತೇಕ ಅಲ್ಪಾಯುಷಿಗಳು. ಸೆಕೆಂಡಿನ ಶತಕೋಟಿಯಲ್ಲೊಂದು ಭಾಗದಷ್ಟು ಸಮಯದಲ್ಲೇ ಹುಟ್ಟಿ, ಸಾಯುವಂತಹವು! ಸ್ಥಿರವಾದ ಅಸ್ತಿತ್ವವನ್ನೇ ಹಾಳೊಳ್ಳದಿರುವಂತೆ ತೋರುವ ಈ ಕಣಗಳು ಏಕಾದರೂ ಇವೆಯೋ ಎಂಬುದೇ ದೊಡ್ಡ ಸಮಸ್ಯೆಯಾಗಿತ್ತು ಅನೇಕ ವರ್ಷಗಳ ಕಾಲ. ಆದರೆ ತಾತ್ವಿಕ ಭೌತ ವಿಜ್ಞಾನದಲ್ಲಿ (Theoretical Physics) ಈಚಿನ ವರ್ಷಗಳಲ್ಲಿ ಆಗಿರುವ ಪ್ರಗತಿಯಿಂದ ಇವುಗಳ ಇರುವಿಕೆಯನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿದೆ. ಇದುವರೆಗೆ ನೂರಕ್ಕೂ ಹೆಚ್ಚಿನ ಬಗೆಯ ಕಣಗಳು ಕಂಡುಹಿಡಿಯಲ್ಪಟ್ಟಿವೆ. ಆದರೂ ತಾತ್ವಿಕ ಜ್ಞಾನದಲ್ಲಿ ಎಷ್ಟು ಪ್ರಗತಿಯಾಗಿದೆಯೆಂದರೆ, ಇನ್ನೂ ಕೆಲವು ಕಣಗಳಿರಬೇಕೆಂದು ಪ್ರತಿಪಾದಿಸಲಾಗಿದೆ! ಹೀಗೆ ತಾತ್ವಿಕವಾಗಿ ಇರಲೇಬೇಕೆಂದು ಸೂಚಿತವಾದ ಒಂದು ಕಣವೇ ಈ ಲೇಖನದ ಮೊದಲಲ್ಲಿ ಉಲ್ಲೇಖಿಸಿದ ಅಮೇರಿಕನ್ ತಂಡದವರು ಕಂಡು ಹಿಡಿದಿರುವ ಹೊಸ ಕಣ. ಇದು ತಾತ್ವಿಕ ವಿಜ್ಞಾನದ ಜಯ.

ಪರಮಾಣುವಿನ ಕಣಗಳಿಂದ ಪ್ರಾರಂಭವಾದ್ದರಿಂದ ಈ ಕ್ಷೇತ್ರವನ್ನು ಪರಮಾಣುಕಣ ವಿಜ್ಞಾನವೆಂದು ಕರೆಯುವರಾದರೂ, ಪ್ರಾಥಮಿಕ ಕಣ ವಿಜ್ಞಾನವೆಂದು (Elementary Particle Physics) ಕರೆಯುವುದು ಸೂಕ್ತ. ಆದರೆ ಈ ಕ್ಷೇತ್ರ ಎಷ್ಟು ಬೆಳೆದಿದೆಯೆಂದರೆ, ಪ್ರಾಥಮಿಕ ಕಣ ವಿಜ್ಞಾನವೆನ್ನುವುದು ಈಗ ಸಾಮಾನ್ಯವಾಗಿ ತಾತ್ವಿಕ ವಿಭಾಗವನ್ನು ಮಾತ್ರ ಸೂಚಿಸುತ್ತದೆ. ಈ ಕ್ಷೇತ್ರದ ಪ್ರಾಯೋಗಿಕ ವಿಭಾಗವನ್ನು ಬಹುಶಕ್ತಿ ವಿಜ್ಞಾನವೆಂದು (High Energy Physics) ಕರೆಯುವುದು ರೂಢಿಯಾಗಿದೆ. ಕಾರಣ, ಈ ಸಂಶೋಧನೆಗಳಿಗೆ ಬೇಕಾಗಿರುವ ಬೃಹತ್ ಸಾಧನ ಸಲಕರಣೆ

ಗಳು ಮತ್ತು ಬೇಕಾಗುವ ಅಪಾರ ವಿದ್ಯುಚ್ಛಕ್ತಿ!

ಅಲ್ಪಾಯುಷಿಗಳಾದ ಈ ಪ್ರಾಥಮಿಕ ಕಣಗಳನ್ನು. ಅವುಗಳ ಗುಣಗಳನ್ನು ಅಧ್ಯಯನ ಮಾಡಬೇಕಾದರೆ ಅವುಗಳನ್ನು ಅಪಾರ ಸಂಖ್ಯೆಯಲ್ಲಿ ನಾವೇ ಸೃಜಿಸಿಕೊಳ್ಳಬೇಕು (ವಿಶ್ವಕಿರಣಗಳಲ್ಲಿ ಕೆಲವು ಪ್ರಾಥಮಿಕ ಕಣಗಳು ಕಂಡುಬರುವುದಾದರೂ ಆ ಸಂಶೋಧನೆ ಕಷ್ಟ. ಆದರೂ ವಿಶ್ವಕಿರಣಗಳನ್ನು ಉಪಯೋಗಿಸಿ ಸಂಶೋಧನೆಗಳೂ ನಡೆಯುತ್ತಿವೆ). ಚೈತನ್ಯ ವಸ್ತುವಾಗಿ ಮಾರ್ಪಾಟಾಗುವುದು ಸಾಧ್ಯವೆಂದು ಐನ್‌ಸ್ಟೈನರು ೧೯೦೫ರಲ್ಲೇ ಪ್ರತಿಪಾದಿಸಿದ್ದರು. ಆದರೆ ಈ ಮಾರ್ಪಾಟು ಸುಲಭವಲ್ಲ (ವಸ್ತು ಚೈತನ್ಯವಾಗುವುದು ಸುಲಭ. ಅದ್ದರಿಂದಲೇ ಯುರೇನಿಯಂನಿಂದ ಚೈತನ್ಯವನ್ನು ಸಂಗ್ರಹಿಸುವುದು ಸಾಧ್ಯವಾಗಿದೆ, ಪರಮಾಣು ವಿಜ್ಞಾನ, ತಾಂತ್ರಿಕ ಜ್ಞಾನಗಳಿಂದ). ಹೊಸ ಕಣಗಳು ಸೃಷ್ಟಿಸಲ್ಪಡುವುದು ಪ್ರಾಥಮಿಕ ಕಣಗಳು ಒಂದರೊಡನೊಂದು ಘರ್ಷಿಸಿದಾಗ ಮಾತ್ರ. ಸಾಕಷ್ಟು ಚೈತನ್ಯವಿದ್ದಾಗಲೂ ಈ ರೀತಿಯ ಸೃಷ್ಟಿಗೆ ಅನೇಕ ಘರ್ಷಣೆಗಳಾಗಬೇಕು. ಪರಮಾಣು ಕೇಂದ್ರವೇ ಚಿಕ್ಕದೆಂದರೆ, ಅದಕ್ಕಿಂತಲೂ ಸಾವಿರಾರು ಪಾಲು ಚಿಕ್ಕದಾದ ಪ್ರಾಥಮಿಕ ಕಣಗಳ ಲೋಕದಲ್ಲಿ ಈ ಭೇಟಿಗಳು ನಡೆಯಬೇಕಾದರೆ ಬಹು ಸಂಖ್ಯೆಯಲ್ಲಿ ಕಣಗಳನ್ನು ಬಿಡಬೇಕಲ್ಲದೆ. ಅವಕ್ಕೆ ಅಪಾರ ಶಕ್ತಿಯನ್ನೂ ನೀಡಬೇಕು. ಹೆಚ್ಚಿನ ಚೈತನ್ಯ ಹೊಂದಿರುವ ಕಣಗಳು ಮಾತ್ರವೇ ಪುಟ್ಟ ಪುಟ್ಟ ಒಳ ಲೋಕಗಳಿಗೆ ಪ್ರವೇಶಿಸಬಲ್ಲವು. ಆದ್ದರಿಂದಲೇ ಪ್ರೋಟಾನ್ ಅಥವಾ ಎಲೆಕ್ಟ್ರಾನ್‌ಗಳನ್ನು ವಸ್ತುಗಳೊಡನೆ ಘರ್ಷಿಸಿ ಹೊಸ ಕಣಗಳನ್ನು ಸೃಜಿಸಬೇಕಾದರೆ ಅವಕ್ಕೆ ಮೊದಲು ಅಪಾರ ಶಕ್ತಿ ನೀಡಬೇಕು. ಇದನ್ನು ಸಾಧ್ಯವಾಗಿಸುವ ಸಾಧನವೇ ಪರಮಾಣುಕಣ ವೇಗವರ್ಧಕ

(Particle Accelerator).

ಇತ್ತೀಚಿನ ವರ್ಷಗಳಲ್ಲಿ ನಿರ್ಮಾಣವಾಗುತ್ತಿರುವ ವೇಗವರ್ಧಕಗಳು 'ಸಿಂಕ್ರೊಟ್ರಾನ್' ಎಂಬ ಬಗೆಯವಾದ್ದರಿಂದ ಇದನ್ನಷ್ಟೇ ಗಮನಿಸೋಣ. ಇದರ ತತ್ವವೆಂದರೆ, ಪ್ರೋಟಾನ್‌ಗಳನ್ನು (ಅಥವಾ ಎಲೆಕ್ಟ್ರಾನ್‌ಗಳನ್ನು) ವರ್ತುಲಾಕಾರದಲ್ಲಿ ಸುತ್ತುತ್ತಿರುವಂತೆ ಅನುಗೊಳಿಸಿ, ಪ್ರತಿ ಸುತ್ತುವಿಕೆಯಲ್ಲೊಮ್ಮೆ ಅವಕ್ಕೆ ವಿದ್ಯುತ್ ಚೈತನ್ಯವನ್ನು ಉಣಬಡಿಸುವುದು. ಹೀಗಾಗಿ ಅನೇಕ ಸುತ್ತುಗಳಾದಾಗ ಪ್ರೋಟಾನುಗಳು ಸಾಕಷ್ಟು ಚೈತನ್ಯ ಹೊಂದಿ ಅತೀವ ವೇಗದಲ್ಲಿ ತಿರುಗುತ್ತಿರುತ್ತವೆ. ಆಗ ಇವುಗಳನ್ನು ಹೊರಗೆಳೆದುಕೊಂಡು ಯಾವುದಾದರೂ ವಸ್ತುವಿನ ಮೇಲೆ ಪ್ರಯೋಗಿಸಬಹುದು. ಈ ಸಂಘರ್ಷದಲ್ಲಿ ಹುಟ್ಟುವ ಪ್ರಾಥಮಿಕ ಕಣಗಳೂ ವೇಗವಾಗಿ ಚಲಿಸುತ್ತಿರುತ್ತವೆ. ಇವುಗಳಲ್ಲಿ ನಮಗೆ ಬೇಕಾದ ರೀತಿಯ ಕಣಗಳನ್ನು ಇತರರಿಂದ ಬೇರ್ಪಡಿಸಿ, ಅವನ್ನು ಮತ್ತೊಂದು ವಸ್ತುವಿನ ಮೇಲೆ ಘರ್ಷಿಸುವಂತೆ ಮಾಡಿ ಆಗ ಹೊಸದಾಗಿ ಹುಟ್ಟುವ ಕಣಗಳನ್ನೂ, ಅವುಗಳ ರೀತಿ ನೀತಿಗಳನ್ನೂ ಎಲೆಕ್ಟ್ರಾನಿಕ್ ಉಪಕರಣಗಳು ಮತ್ತು ಕಂಪ್ಯೂಟರ್‌ಗಳ ಸಹಾಯದಿಂದ ದಾಖಲು ಮಾಡಿಕೊಳ್ಳಬಹುದು. ನಂತರ ಇವುಗಳನ್ನು ವಿವರವಾಗಿ ವಿಶ್ಲೇಷಿಸಬಹುದು. ಹೀಗಾಗಿ ಪ್ರಾಥಮಿಕ ಕಣಗಳ ಬಗ್ಗೆ ನಮ್ಮ ಜ್ಞಾನ ಬೆಳೆಯುತ್ತದೆ.

ಒಂದು ನಿರ್ದಿಷ್ಟ ವೇಗದ ಪ್ರೋಟಾನುಗಳನ್ನು ಒಂದು ನಿರ್ದಿಷ್ಟ ಶಕ್ತಿಯ ಆಯಸ್ಕಾಂತ ಕ್ಷೇತ್ರದಲ್ಲೇ ಇರುವಂತೆ ಮಾಡಿದರೆ ಅವುಗಳು ಒಂದೇ ವರ್ತುಲದಲ್ಲಿ ತಿರುಗುತ್ತಿರುತ್ತವೆ. ಆಗ ಪ್ರತಿ ಸುತ್ತುವಿಕೆಯಲ್ಲೂ ಒಂದು ಕಡೆ ಒಂದು ವಿದ್ಯುದಂತರದ (Potential Difference) ಮೂಲಕ ಅವು ಹಾಯುವಂತೆ ಏರ್ಪಡಿಸಿದರೆ ಪ್ರೋಟಾನುಗಳು ವಿದ್ಯುತ್ತಿನಿಂದ ಚೈತನ್ಯವನ್ನು ಹೀರಿಕೊಳ್ಳುತ್ತವೆ. ಈ ರೀತಿಯ ಚೈತನ್ಯವನ್ನು 'ಎಲೆಕ್ಟ್ರಾನ್‌ವೋಲ್ಟ್' ಗಳಲ್ಲಿ ಸೂಚಿಸುತ್ತಾರೆ. ಈಚಿನ ವೇಗವರ್ಧಕಗಳೆಲ್ಲ [illegible] ಶತಕೋಟಿ ಎಲೆಕ್ಟ್ರಾನ್‌ವೋಲ್ಟುಗಳ (GeV. – ಜಿಇವಿ.) ಪ್ರೋಟಾನುಗಳನ್ನು ನೀಡಬಲ್ಲುವು! ಉದಾಹರಣೆಗೆ, ಇಂದು ಅಮೇರಿಕದಲ್ಲಿ [illegible] ಅತ್ಯುತ್ತಮವಾದ ವೇಗವರ್ಧಕ ಶಿಕಾಗೋ ಸಮೀಪದಲ್ಲಿರುವ 'ಫರ್ಮಿಲ್ಯಾಬ್' ನದಾಗಿದೆ. ಇದು ಈಗಾಗಲೇ ೫೦೦ ಜಿಇವಿ ನೀಡುತ್ತಿದ್ದು, ಸದ್ಯದಲ್ಲೇ ತನ್ನ ಶಕ್ತಿಯನ್ನು ದ್ವಿಗುಣಗೊಳಿಸಿಕೊಳ್ಳಲಿದೆ!

ಮೂಲತತ್ವವೇನೋ ಸುಲಭವೆಂಬಂತೆ ಕಂಡರೂ, ವಾಸ್ತವಿಕವಾಗಿ ವೇಗವರ್ಧಕವೆನ್ನುವುದು ಬಹು ಸಂಕೀರ್ಣ ಸಾಧನ. ಪ್ರಾಥಮಿಕ ಕಣಗಳು ಬೆಳಕಿನ ವೇಗದಲ್ಲಿ ಚಲಿಸುವುದು ಸಾಮಾನ್ಯವಾದ್ದರಿಂದಲೂ ಸೆಕೆಂಡಿನ ಶತಕೋಟಿಯಲ್ಲೊಂದು ಭಾಗದಷ್ಟೇ ಆಯುಷ್ಯವುಳ್ಳವುಗಳಾದ್ದರಿಂದಲೂ ಪ್ರಯೋಗಗಳಿಗೆ ಅನೇಕ ಕೋಟಿ ಸಂಖ್ಯೆಯಲ್ಲಿ ಕಣಗಳು ಬೇಕಾದ್ದರಿಂದಲೂ ಈ ವಿಜ್ಞಾನದಲ್ಲಿ ಬಳಸಲ್ಪಡುವ ಉಪಕರಣಗಳು ಅತಿ ಶೀಘ್ರವಾಗಿ ಕೆಲಸ ಮಾಡಬಲ್ಲ ಅತ್ಯಾಧುನಿಕ ಉಪಕರಣಗಳಾಗಿರಬೇಕು. ಕಂಪ್ಯೂಟರುಗಳ ಸಹಾಯವಿಲ್ಲದೇ ನಿರ್ವಹಣೆ ಅಸಾಧ್ಯ. ಅಮೇರಿಕದ ಫರ್ಮಿಲ್ಯಾಬ್‌ನ ವೇಗವರ್ಧಕದ ಭೂಗತ ಸುರಂಗ ಆರೂವರೆ ಕಿಲೋಮೀಟರುಗಳ ಸುತ್ತಳತೆಯದಾಗಿದೆ, ಅಲ್ಲಿ ಸುಮಾರು ಸಾವಿರ ದೊಡ್ಡ ವಿದ್ಯುದಾಯಸ್ಕಾಂತಗಳು ಉಪಯೋಗಿಸಲ್ಪಡುತ್ತಿವೆ. ಇದನ್ನೆಲ್ಲ ನಡೆಸಲು ಮೂರು ಭಾರಿ ಕಂಪ್ಯೂಟರುಗಳೂ ಅನೇಕ ಮಧ್ಯಮ ವರ್ಗದ ಕಂಪ್ಯೂಟರುಗಳೂ ಬೇಕಾಗಿದ್ದು, ಸುಮಾರು ಅರವತ್ತು ಮೆಗಾವಾಟ್‌ಗಳ ವಿದ್ಯುಚ್ಛಕ್ತಿ ಖರ್ಚಾಗುತ್ತಿದೆ. ಇದರ ಮೇಲ್ವಿಚಾರಣೆಗೆ ನೂರಾರು ತಜ್ಞ ವಿಜ್ಞಾನಿಗಳೂ, ಎಂಜಿನಿಯರುಗಳೂ ಇರುವರೆಂಬುದರಿಂದಲೇ ತಿಳಿಯಬಹುದು ಇದರ ಬೃಹತ್ತತೆ! ಈ ವೇಗವರ್ಧಕದಲ್ಲಿ ಪ್ರೋಟಾನ್‌ಗಳು ಕೇವಲ ಮೂರು ಸೆಕೆಂಡುಗಳಲ್ಲೇ ಒಂದೂವರೆ ಲಕ್ಷ ಪ್ರದಕ್ಷಿಣೆಗಳನ್ನು ಮಾಡುವುದರ ಮೂಲಕ ೫೦೦ ಜಿಇವಿ ಚೈತನ್ಯ ಪಡೆದು ಒಂದೆರಡು ಕಿಲೋಮೀಟರುಗಳ ದೂರದಲ್ಲಿರುವ ಪ್ರಯೋಗಶಾಲೆಗಳಿಗೆ ಬೀಸಲ್ಪಡುತ್ತವೆ. ಅಲ್ಲಿ ಒಂದು ಸೆಕೆಂಡಿನಲ್ಲೇ ಎಲೆಕ್ಟ್ರಾನಿಕ್ ಉಪಕರಣಗಳು ಈ ಪ್ರೋಟಾನ್‌ಗಳು ವಸ್ತುಗಳೊಡನೆ ಸಂಘರ್ಷಿಸಿ ಉಂಟುಮಾಡುವ ಸಂಗತಿಗಳ ವಿವರಗಳನ್ನೆಲ್ಲ ದಾಖಲು ಮಾಡಿಕೊಳ್ಳುತ್ತವೆ. ಮತ್ತೆ ಒಂದೆರಡು ಸೆಕೆಂಡುಗಳ ನಂತರ ಇದರ ಪುನರಾವರ್ತನೆ ಹೀಗೆಯೆ.

ಪಶ್ಚಿಮ ಯುರೋಪಿನ ರಾಷ್ಟ್ರಗಳು ಒಗ್ಗಟ್ಟಾಗಿ

ನಿರ್ಮಿಸಿ ನಡೆಸುತ್ತಿರುವ ವೇಗವರ್ಧಕ ಫರ್ಮಿ ಲ್ಯಾಬ್‌ನಷ್ಟೇ ಶಕ್ತಿಯುತವಾದವು. ರಷ್ಯದ ಅತಿ ಶಕ್ತಿಯ ವೇಗವರ್ಧಕ ಕೇವಲ ಎಪ್ಪತ್ತಾರು ಜೀಇವಿಯದು. ಆದರೆ ಈ ಮೂರು ಕಡೆಗಳಲ್ಲೂ ಕಡಿಮೆ ಶಕ್ತಿಯ ಅನೇಕ ವೇಗವರ್ಧಕಗಳೂ ಬಳಸಲ್ಪಡುತ್ತಿವೆ. ಜಪಾನಿನಲ್ಲಿ ಹನ್ನೆರಡು ಜೀಇವಿಯ ವೇಗವರ್ಧಕವಿದೆ. ಶೀಘ್ರದಲ್ಲೇ ಇನ್ನೂ ಬಲಯುತವಾದ ವೇಗವರ್ಧಕಗಳು ನಿರ್ಮಾಣಗೊಳ್ಳಲಿವೆ ಈ ದೇಶಗಳಲ್ಲಿ. ಇವನ್ನು ಬಿಟ್ಟರೆ, ಹೇಳಿಕೊಳ್ಳುವಂತಹ ಶಕ್ತಿಯುತ ವೇಗವರ್ಧಕಗಳು ಬೇರೆಲ್ಲೂ ಇಲ್ಲ. ಆದರೆ ಇನ್ನು ಮೂರು ನಾಲ್ಕು ವರ್ಷಗಳಲ್ಲೇ ಚೀನಾ ಈ ಕೂಟದ ಹೊಸ ಸದಸ್ಯನಾಗಲಿದೆ. ಪೀಕಿಂಗ್ ಬಳಿ ಈಗ ನಿರ್ಮಿಸಲ್ಪಡುತ್ತಿರುವ ವೇಗವರ್ಧಕ ಐವತ್ತು ಜೀಇವಿಯದು. ವೈಜ್ಞಾನಿಕತೆಯಿಂದ ತನ್ನ ಆರ್ಥಿಕ ಸುಧಾರಣೆ ಸಾಧಿಸುವುದಾಗಿ ಘೋಷಿಸಿರುವ ಚೀನಾ ಬಹುಶಕ್ತಿ ವಿಜ್ಞಾನಕ್ಕೆ ಅಗ್ರತೆ ಕೊಟ್ಟಿರುವುದು ಗಮನಾರ್ಹ.

ಪ್ರಾಥಮಿಕ ಕಣ ವಿಜ್ಞಾನದ ತಾತ್ವಿಕ ವಿಭಾಗದಲ್ಲಿ ಭಾರತದಲ್ಲಿ ಮೂರು ನಾಲ್ಕು ಕಡೆ ಉತ್ತಮ ಕಾರ್ಯ ಸಾಗಿದೆ. ಪ್ರಾಯೋಗಿಕ ವಿಭಾಗದಲ್ಲಿ ವಿಶ್ವಕಿರಣಗಳನ್ನು ಉಪಯೋಗಿಸಿಕೊಂಡು ನಡೆಸಿರುವ ಕೆಲವು ಪ್ರಯೋಗಗಳೂ ಅಂತಾರಾಷ್ಟ್ರೀಯ ವಿಜ್ಞಾನಿಗಳ ಗಮನ ಸೆಳೆದಿವೆ. (ಇವು ಕೋಲಾರದ ಚಿನ್ನದ ಗಣಿಯೊಳಗೆ ನಡೆಸಿದ ಪ್ರಯೋಗಗಳೆಂಬುದು ಕನ್ನಡಿಗರಿಗೆ ಹೆಮ್ಮೆ). ಆದರೆ ಬಲಯುತ ವೇಗ ವರ್ಧಕವಾಗಲಿ ಆಧುನಿಕ ಉಪಕರಣಗಳಾಗಲಿ ಇಲ್ಲದಿರುವುದು ಭಾರತ ಪ್ರಾಯೋಗಿಕ ರಂಗದಲ್ಲಿ ಹಿಂದೆಬೀಳಲು ಕಾರಣವಾಗಿದೆ. ವೇಗವರ್ಧಕವೊಂದರ ನಿರ್ಮಾಣದ ಬಗ್ಗೆ ಯೋಜಿಸುತ್ತಿರುವುದಾಗಿ ಕೆಲವು ತಿಂಗಳುಗಳ ಹಿಂದೆ ಭಾರತ ಸರ್ಕಾರ ಹೇಳಿತ್ತಾದರೂ ಅದರ ಗತಿ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಅಲ್ಲದೇ ಈ ರಂಗದಲ್ಲಿ ಕೇವಲ ಕುಂಟು ಹೆಜ್ಜೆಯಿಡದೆ ಮಿಕ್ಕ ರಾಷ್ಟ್ರಗಳ ಮಟ್ಟಕ್ಕೆ ಶೀಘ್ರವಾಗಿ ಜಿಗಿಯುವುದು ಅವಶ್ಯಕ.

ಪ್ರಾಥಮಿಕ ಕಣ ವಿಜ್ಞಾನ ಮೂಲಭೂತ ಸಂಶೋಧನೆಯೆಂದೂ ಆದ್ದರಿಂದ ಆ ಪ್ರಯೋಗಗಳಿಗೆ ಬೇಕಾಗುವ ಉಪಕರಣಗಳಿಗೆ ಹಣ ಸಮಯ ಹಾಕುವುದು ಭಾರತದಂತಹ ಬಡದೇಶಕ್ಕೆ ಸರಿಯಲ್ಲವೆಂದೂ ಕೆಲವರು ವಾದಿಸಬಹುದು. ಅಂಥವರು ಈ ಕೆಳಗಿನ ಅಂಶಗಳನ್ನು ಗಮನಿಸಬೇಕು.

೧) ಇಂದು ತಾಂತ್ರಿಕವಾಗಿ ಉಪಯುಕ್ತವಾಗುತ್ತಿರುವ ಪರಮಾಣು ವಿಜ್ಞಾನ ಇತ್ಯಾದಿಗಳನ್ನೂ ಕೆಲವು ವರ್ಷಗಳ ಹಿಂದೆ ಕೇವಲ ಮೂಲಭೂತ ವಿಜ್ಞಾನಗಳೆಂದು ಮಾತ್ರ ಪರಿಗಣಿಸಿದ್ದರು. ಇಂದು ಮೂಲಭೂತ ಸಂಶೋಧನೆಗಳಿಗೆ ವೆಚ್ಚ ಮಾಡಲು ಹಿಂಜರಿದರೆ ನಾಳೆ ಅವರ ಉಪಯುಕ್ತತೆ ಪಡೆದುಕೊಳ್ಳುವ ಸಾಮರ್ಥ್ಯವೂ ಇಲ್ಲದಾಗುತ್ತದೆ. ಮೂವತ್ತು ವರ್ಷಗಳ ಹಿಂದೆ ಇಂದಿಗಿಂತ ಹೆಚ್ಚು ಬಡತನವಿದ್ದರೂ (ಕೇವಲ ಪ್ರತಿಷ್ಠೆ ಎಂದು ಕೆಲವು ಹೊರದೇಶಗಳವರು ಮೂಗು ಮುರಿದರೂ) ಆಗ ಪರಮಾಣು ಸಂಶೋಧನೆ ಬಾಹ್ಯಾಕಾಶ ಸಂಶೋಧನೆಗಳಿಗೆ ಹಣ ವಿನಿಯೋಗಿಸಿದ್ದರಿಂದಲೇ ಭಾರತ ಇಂದು ಅವುಗಳ ಬಳಕೆಯ ಸಾಮರ್ಥ್ಯ ಪಡೆದಿದೆ.

೨) ಭಾರತದ ಜೀವನ ಮಟ್ಟ, ವಿಜ್ಞಾನಿಗಳ ಶ್ರದ್ಧೆ, ಕಡಿಮೆ ಸಂಬಳ ಇತ್ಯಾದಿಗಳನ್ನೆಲ್ಲ ಗಣನೆಗೆ ತೆಗೆದುಕೊಂಡರೆ ಪಾಶ್ಚಾತ್ಯ ದೇಶಗಳಿಗಿಂತ ಎಷ್ಟೋ ಕಡಿಮೆ ವೆಚ್ಚದಲ್ಲಿ ತೂಗಿಸಬಹುದು. ಈ ವಿಷಯದಲ್ಲಿ ಚೀನದ ದೃಷ್ಟಾಂತ ಉಪಯುಕ್ತ.

೩) ಭಾರತೀಯ ವಿಜ್ಞಾನಿಗಳ ಅನುಭವ, ಸಾಮರ್ಥ್ಯಗಳು ಬೆಳೆಯಲು ಅವಕಾಶ. ಈ ವಿಜ್ಞಾನದಲ್ಲಿ ಹತ್ತಾರು ವಿಜ್ಞಾನಿ, ಎಂಜಿನಿಯರ್, ತಂತ್ರಜ್ಞರ ಸಹಕಾರ ಅವಶ್ಯವಾದ್ದರಿಂದ ಹೊಂದಾಣಿಕೆ ಮನೋಭಾವ ಬೆಳೆಯಲು, ಆ ಹೊಂದಾಣಿಕೆಯನ್ನು ಬೇರೆ ರಂಗಗಳಲ್ಲಿಯೂ ಉಪಯೋಗಿಸಿಕೊಳ್ಳಲು ಇದು ಉತ್ತಮ ತರಬೇತಿಕ್ಷೇತ್ರ.

೪) ವೇಗವರ್ಧಕಗಳ ನಿರ್ಮಾಣ, ನಿರ್ವಹಣೆಗಳಿಗೆ ಬೇಕಾಗುವ ಸಂಕೀರ್ಣ ವ್ಯವಸ್ಥೆಯಲ್ಲಿ ಪಡೆಯುವ ಅನುಭವವನ್ನು ಇತರೆಡೆಗಳಲ್ಲಿ ಬಳಸಿಕೊಳ್ಳಬಹುದು. ಕಂಪ್ಯೂಟರ್ ನಿಯಂತ್ರಕ ವ್ಯವಸ್ಥೆಗಳಿಗೆ ಇದು ನಾಂದಿಯಾಗಬಹುದು.

೫) ಈ ಕ್ಷೇತ್ರದಲ್ಲಿ ಬಳಸಲ್ಪಡುತ್ತಿರುವ ಅತಿ ಎಲೆಕ್ಟ್ರಾನಿಕ್ ಉಪಕರಣಗಳು ಇತ್ತೀಚೆಗೆ ವೈದ್ಯಕೀಯದಲ್ಲೂ ಬಳಸಲಾಗುತ್ತಿರುವುದರಿಂದ ಇಂತಹ ಉಪಕರಣಗಳ ತಯಾರಿಕೆಗೆ ಪ್ರೋತ್ಸಾಹ ನೀಡುವುದು ನಷ್ಟವೇನಲ್ಲ.

೬) ವೇಗವರ್ಧಕಗಳಿಂದ ಹೊರಹೊಮ್ಮುವ 'ಸಿಂಕ್ರೊಟ್ರಾನ್ ರೇಡಿಯೇಷನ್' ಎಂಬ ವಿಶಿಷ್ಟ ಬೆಳಕು ಇತರ ವಿಜ್ಞಾನಗಳಲ್ಲಿಯೂ ಉಪಯೋಗಿಸಲ್ಪಡುತ್ತಿದೆ.

೭) ಕ್ಯಾನ್ಸರ್ ಚಿಕಿತ್ಸೆಯಲ್ಲಿ ಈಗ ಬಳಸಲ್ಪಡುತ್ತಿರುವ ಕ್ಷ-ಕಿರಣಗಳಿಗಿಂತ ಪ್ರಾಥಮಿಕ ಕಣಗಳು ಹೆಚ್ಚು ಉಪಯುಕ್ತವೆಂದು ಕಂಡು ಬಂದಿರುವುದರಿಂದ ವೇಗವರ್ಧಕಗಳ ಹತ್ತಿರದಲ್ಲೇ ಕ್ಯಾನ್ಸರ್ ಚಿಕಿತ್ಸಾಲಯಗಳೂ ಸ್ಥಾಪಿಸಲ್ಪಡುತ್ತಿವೆ.

೮) ಪರಮಾಣು ಕೇಂದ್ರ ಸಂಯೋಜನೆಯಿಂದ (Nuclear Fusion) ವಿದ್ಯುತ್ತನ್ನು ಪಡೆಯುವ ಬಗ್ಗೆ ಅನೇಕ ದೇಶಗಳು ತೀವ್ರ ಸಂಶೋಧನೆಗಳನ್ನು ನಡೆಸುತ್ತಿವೆ. ಇದು ಸಾಧ್ಯವಾದರೆ ಸಮುದ್ರದ ನೀರಿನಿಂದಲೇ ವಿದ್ಯುಚ್ಛಕ್ತಿಯನ್ನು ಯಥೇಚ್ಛವಾಗಿ ತಯಾರಿಸಬಹುದು. ಈ ದಿಸೆಯಲ್ಲಿ ಪ್ರಯೋಗ ಬೆಳೆಯುತ್ತಿರುವ ತಂತ್ರಗಳಲ್ಲಿ ಒಂದು ವೇಗವರ್ಧಕಗಳನ್ನು ಉಪಯೋಗಿಸಿ ಪರಮಾಣು ಸಂಯೋಗ ನಡೆಸಲೆತ್ನಿಸುತ್ತಿರುವುದು.

೯) ವೈದ್ಯಕೀಯ, ವ್ಯಾವಸಾಯಿಕ ಇತ್ಯಾದಿಗಳಲ್ಲಿ ಈಗ ಉಪಯೋಗಿಸಲ್ಪಡುತ್ತಿರುವ ಐಸೊಟೋಪ್‌ಗಳನ್ನು ವೇಗವರ್ಧಕವನ್ನುಪಯೋಗಿಸುವುದರ ಮೂಲಕ ಹೆಚ್ಚು ನಿಖರವಾಗಿ ನಿಯಂತ್ರಿಸಿ ತಯಾರಿಸಬಹುದೆಂದು ಭಾವಿಸಲಾಗಿದೆ.

೧೦) ಪ್ರಾಥಮಿಕ ಕಣಗಳನ್ನು ರಶ್ಮಿಗಳಂತೆ ಉಪಯೋಗಿಸುವುದರ ಮೂಲಕ ಪ್ರಬಲವಾದ ಶಸ್ತ್ರವನ್ನು ತಯಾರಿಸುವ ಬಗ್ಗೆ ಪ್ರಯತ್ನಗಳು ನಡೆಯುತ್ತಿವೆಯೆಂದು ಪಾಶ್ಚಾತ್ಯ ಪತ್ರಿಗಳಲ್ಲಿ ವರದಿಯಾಗಿದೆ. ಈ ಸಾಧ್ಯತೆಯೊಂದೇ ಸಾಕು ತನ್ನ ರಕ್ಷಣೆಯ ಬಗ್ಗೆ ಚಿಂತನೆಯಿರುವ ಯಾವ ದೇಶವೂ ಈ ವಿಜ್ಞಾನವನ್ನು ಕಡೆಗಣಿಸದಿರಲು.

ಇಷ್ಟೆಲ್ಲ ಮಹತ್ವ ಹೊಂದಿರುವ ಇನ್ನೂ ಅನೇಕ ಉಪಯೋಗಗಳ ಸಾಧ್ಯತೆಯಿರುವ ಬಹುಶಕ್ತಿ ವಿಜ್ಞಾನದಲ್ಲಿ ಭಾರತವೂ ಸಾಮರ್ಥ್ಯ ಪಡೆಯುವುದು ಸೂಕ್ತ. ✡



"ನಾಟಕ ಆಡುವವರದ್ದು ಒಂದು ಬಗೆಯ ಎಸ್ಕೇಪಿಸ್ಟ್ ಎನ್ನುವ ತತ್ವ. ಅದೊಂದು ತೆರನ ಜಾರ್ಗಡೆ- ನಾಟಕ ಬರೆಯುವ ವ್ಯಕ್ತಿ, ಅವನು ಶೇಕ್ಸ್‌ಪಿಯರೇ ಇರಲಿ, ಅವನಪ್ಪನೇ ಇರಲಿ ಸಮಾಜದ ಯಾವ ಸಮಸ್ಯೆಯನ್ನೂ ಬಗೆಹರಿಸಲಾರ. ಸಮಸ್ಯೆ ಎಂಬುದು ತನ್ನ ತನ್ನ ದಾರಿಯಲ್ಲೇ ಕೊನೆಗೊಳ್ಳುತ್ತದೆ. ಈತ ಆ ಸಮಸ್ಯೆಗೆ ತನ್ನದೇ ಅರ್ಥಗಳನ್ನು ಕಲ್ಪಿಸಿಕೊಂಡು, ತಾನು ಬ್ರಹ್ಮನಾಗಿದ್ದರೆ ಹಾಗೆ ಹೀಗೆ ಮಾಡುತ್ತಿದ್ದೆ ಎಂದು ಸ್ವಪ್ನ ಕಾಣುತ್ತಾನೆ. ಅದು ಅವನ ಪಾಲಿನ ಎಸ್ಕೇಪಿಸಮ್. ನಾಟಕ ನೋಡುವ ಜನ- ಇದು ನಮ್ಮ ಸಮಸ್ಯೆಯಲ್ಲ; ರಂಗ ಸ್ಥಳದ ಮೇಲೆ ಬರುವ ಹತ್ತು ಮಂದಿ ಮೂರ್ಖರ ಸಮಸ್ಯೆ. ಅವರು ಏನನ್ನು ಮಾಡುತ್ತಾರೋ ಮಾಡಿಕೊಳ್ಳಲಿ; ನೋಡುವ ಎರಡು ಮೂರು ನಾಲ್ಕು ಘಂಟೆಗಳ ಕಾಲ ಕಣ್ಣು ಮಿಟುಕಿಸದೆ ನೋಡುತ್ತಿರುತ್ತಾರೆ. ನಡುವೆ ಬೇಸರವಾದರೆ, ಸ್ಟೇಜಿನ ಮೇಲೆ ಒಬ್ಬ ಚೂರಿ ಹಾಕಿಕೊಳ್ಳುತ್ತಿದ್ದರೆ, ಇವರು ಕುರ್ಚಿಯಲ್ಲಿ ಕುಳಿತು ಬಾಯಿಗೆ ನೆಲಗಡಲೆ ಹಾಕಿಕೊಳ್ಳುತ್ತಾರೆ. ಅವರಿಗೆ ತಮ್ಮ ತಮ್ಮ ಮನೆಗಳ ಸಮಸ್ಯೆಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಮಾತ್ರ ಈ ನಾಟಕ ಸಹಾಯ. ನಿಜವಾದ ಸತ್ಯದಿಂದ ಪಲಾಯನ ಮಾಡುವುದೇ ನಾಟಕದ ಉದ್ದೇಶ. ಜನರು ತಮ್ಮ ಬೇಸರ ಕಳೆಯಲು ನಾಟಕಕ್ಕೆ ಬರುತ್ತಾರೆ; ಅದೂ ಜಾರ್ಗಡೆಯ ಹಿಕ್ಮತ್ತು."

ಸಂಗ್ರಹ – ವೈ.ಎನ್. ಗುಂಡೂರಾವ್

(ಡಾ. ಶಿವರಾಮ ಕಾರಂತರ 'ಇಳೆಯೆಂಬ' ಕಾದಂಬರಿಯಿಂದ)

# ಶಬ್ದಾರ್ಥ ಚಿಂತಾಮಣಿ

-೨೨-

ಅಪ್ಪ ಅಂದರೆ ತಂದೆ, ಅಮ್ಮ ಅಂದರೆ ತಾಯಿ ಎಂಬುದು ನಮ್ಮ ಭಾಷಾ ಪ್ರಜ್ಞೆಯಲ್ಲಿ ಎಷ್ಟು ರೂಢವಾಗಿದೆಯೆಂದರೆ ಅವು ತಿರುಗುಮುರುಗಾಗಿರಬಲ್ಲವೆಂಬುದು ಊಹೆಗೂ ನಿಲುಕದ ಮಾತಾಗಿಬಿಟ್ಟಿದೆ. ಈ ಭಾವನೆ ಸ್ವಾಭಾವಿಕವೆ. ಜಗತ್ತಿನ ಅನೇಕ ಭಾಷೆಗಳಲ್ಲಿ ಅಪ್ಪ, ಅಬ್ಬ, ಪಾ ಎಂಬುವು ತಂದೆಯನ್ನೂ ಅಮ್ಮ, ಮಾ ಇತ್ಯಾದಿಗಳು ತಾಯಿಯನ್ನೂ ಸೂಚಿಸುತ್ತವೆ. ಮಗು ಮಾತು ಕಲಿಯುವ ಮೊದಲೇ ಕೇವಲ ತುಟಿಗಳನ್ನು ಜೋಡಿಸಿ ಬಿಡುವ ಮೂಲಕ ಮೊದಲು ಹೊರಡಿಸುವ ಧ್ವನಿ ಮಕಾರವೇ; ಅದು ಮಗುವಿನ ಅತಿ ಹತ್ತಿರದ ವ್ಯಕ್ತಿಯಾದ ತಾಯಿಗೂ ತುಟಿಗಳನ್ನು ಬಿಡಿಸಿಬಿಡುವುದರಿಂದಲೇ ಉಂಟಾಗುವ ಪಕಾರ ಅಥವಾ ಬಕಾರ ತಂದೆಗೂ ಅನ್ವಯಿಸುವುದು ಸುಸಂಗತವೇ ಸೈ.

ಆದರೆ ಭಾಷೆಗಳ ವಿಷಯದಲ್ಲಿ ಸುಸಂಗತಿ–ಅಸಂಗತಿಗಳು ಯಾವಾಗಲೂ ಅನ್ವಯಿಸುತ್ತವೆಂದು ಹೇಳಲು ಬಾರದು. ಅದ್ದರಿಂದ ಕೆಲವೇ ಶತಮಾನಗಳ ಹಿಂದೆ ನಮ್ಮ ಕನ್ನಡದಲ್ಲಿ ಅಮ್ಮ ಎಂಬುದು ತಂದೆಯನ್ನು ಸೂಚಿಸುತ್ತಿತ್ತೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಅತಿ ಪ್ರಾಚೀನ ಶಾಸನಗಳಿಂದಾರಂಭಿಸಿ ಷಟ್ಪದೀಕಾವ್ಯಗಳ ಕಾಲದ ಆರಂಭದವರೆಗೂ ಅಮ್ಮ ಅಂದರೆ ಅಪ್ಪನೇ ಆಗಿದ್ದು ಕವಿರಾಜಮಾರ್ಗ, ವಡ್ಡಾರಾಧನೆ, ಪಂಪ, ರನ್ನ ಇತ್ಯಾದಿಗಳಲ್ಲೆಲ್ಲ ಕಾಣಿಸುತ್ತದೆ. ಆದರೆ ಕುಮಾರವ್ಯಾಸ ಕಾಲಕ್ಕಾಗಲೇ ಅಮ್ಮ ಎಂಬುದು ತಾಯಿಗೆ ಅನ್ವಯಿಸತೊಡಗಿತ್ತು. ತುಳು ಹೊರತು ನೆರೆ ದ್ರಾವಿಡ ಭಾಷೆಗಳಲ್ಲಿ ಅಮ್ಮ ಎಂಬುದು ತಾಯಿಯನ್ನು ಸೂಚಿಸುತ್ತದೆ. ತುಳುವಿನಲ್ಲಿ ಮಾತ್ರ ಇಂದಿಗೂ ಅಮ್ಮೆ ಅಂದರೆ ತಂದೆ, ಅಪ್ಪೆ ಅಂದರೆ ತಾಯಿ. ಕನ್ನಡದಲ್ಲಿ ಕೂಡ ಹಳೇ ಮೈಸೂರು ಪ್ರದೇಶದಲ್ಲಿ ಆಡುನುಡಿಯಲ್ಲಿ ಗಂಡಸರನ್ನೂ ಏನಮ್ಮಾ ಎಂದು ಗೆಳೆತನ ಅಥವಾ ನಸು ವಿನೋದದಲ್ಲಿ ಸಂಬೋಧಿಸುವುದು ಇಂದಿಗೂ ಇದೆ. ಮೊದಲ ನೋಟಕ್ಕೆ ಇದು ಗಂಡನ್ನು ಹೆಣ್ಣಿನಂತೆ ಸಂಬೋಧಿಸುವ ಲೇವಡಿ ಮಾತೆಂಬ ಭ್ರಮೆ ತಂದರೂ ನಿಜಕ್ಕೂ ಹಳೆಗನ್ನಡದ ಅವಶೇಷವಾಗಿರಬೇಕು. ಹಳೆಗನ್ನಡದಲ್ಲಿ ಅಮ್ಮನೇ ಅಪ್ಪನಾಗಿದ್ದರೆ ತಾಯಿಯನ್ನು ಹೇಗೆ ಸಂಬೋಧಿಸುತ್ತಿದ್ದರು? ಉತ್ತರ ಕರ್ನಾಟಕದಲ್ಲೆಲ್ಲ ಇಂದಿಗೂ ಪ್ರಚಲಿತವಾಗಿರುವಂತೆ ಆಗ ತಾಯಿ ಅವ್ವೆಯಾಗಿದ್ದಳು (ಇಂದು ಅದು ಅವ್ವ ಎಂದಾಗಿದೆ ಅಷ್ಟೇ). ಇದರದೇ ಒಂದು ರೂಪಾಂತರವಾದ ಅಬ್ಬೆ ಹವ್ಯಕ, ಕೋಟ ಮೊದಲಾದ ಕನ್ನಡ ಉಪಭಾಷೆಗಳಲ್ಲಿ ಇಂದಿಗೂ ಉಳಿದಿದೆ. ಈ ರೂಪವು ಬಹಳ ಪ್ರಾಚೀನವಾದದ್ದು. ಇತರ ದ್ರಾವಿಡ ಭಾಷೆಗಳಲ್ಲಿ ಕೂಡ ಅವ್ವೆ ತಾಯಿಯಾಗಿದ್ದಾಳೆ. ತುಳುವಿನ ಅಪ್ಪೆ ಮೂಲತಃ ಕನ್ನಡದ ಈಗಿನ ಅಪ್ಪ ಆಗಿರದೆ ಅಬ್ಬೆಯದೇ ಉಚ್ಚಾರ ಭೇದವಾಗಿರಬಹುದು.

ಉತ್ತರ ಕರ್ನಾಟಕದಲ್ಲಿ ಇನ್ನೊಂದು ವೈಚಿತ್ರ್ಯವನ್ನು ಕಾಣುತ್ತೇವೆ. ಅಲ್ಲಿ ಅಮ್ಮ ಎಂಬುದು ತಂದೆಯೆಂಬರ್ಥ ಕಳೆದುಕೊಂಡಿದ್ದರೂ ತಾಯಿ ಎಂಬ ಅರ್ಥ ಸಂಪಾದಿಸಿಲ್ಲ; ಬದಲಿಗೆ ಅದು ಅಜ್ಜಿಯನ್ನು ಸೂಚಿಸುತ್ತದೆ. ಯಾವ ತರ್ಕದಿಂದ ಅದು ಹೀಗೆ ಅರ್ಥಾಂತರ ಹೊಂದಿತೋ ಹೇಳುವುದು ಕಷ್ಟ. ಆದರೆ ಅಲ್ಲಿ ಅದು ಬ್ರಾಹ್ಮಣರಲ್ಲಿ ವಿಧವೆ ಎಂಬರ್ಥವನ್ನೂ ಸೂಚಿಸುತ್ತದೆಂಬುದಕ್ಕೆ ತನ್ನದೇ ತರ್ಕ ಸಾಂಗತ್ಯ ಇರಬಹುದು. ಅಮ್ಮ ಅಂದರೆ ಅಜ್ಜಿ, ಅಜ್ಜಿ ಅಂದರೆ ವಯಸ್ಸಾದವಳು, ವಯಸ್ಸಾದ ಹೆಂಗಸರು ವಿಧವೆಯರಾಗಿರುವ ಸಂಭವ ಬಹಳ; ಆದ್ದರಿಂದ ಅಮ್ಮ ಅಂದರೆ ವಿಧವೆ. ಬ್ರಾಹ್ಮಣರಲ್ಲಿ ವಿಶೇಷವಾಗಿ ತಲೆ ಬೋಳಿಸಿದ ಹಳೆಗಾಲದ ವಿಧವೆ ಅಮ್ಮ. ಇದೂ ಅಂಥ ಅಪರೂಪ ತರ್ಕವಲ್ಲ. ದಕ್ಷಿಣ ಕನ್ನಡದಲ್ಲಿ ಅಜ್ಜ ಹೆಂಗಸು ಅಂದರೆ (ತರುಣೀ ಇರಬಹುದಾದರೂ) ತಲೆ ಬೋಳಿಸಿದ ವಿಧವೆ.

—ಪಾವೆಂ.

# ಕಲಾವಿದರು ಕಂಡ ಬಹುರೂಪಿ ಸೂರ್ಯ

ಮಾನವ ಕಣ್ಣು ಬಿಟ್ಟಂದಿನಿಂದಲೇ ಸೂರ್ಯನೊಂದಿಗೆ ಭಯ–ಭಕ್ತಿಯ ಸಂಬಂಧವೇರ್ಪಡಿಸಿಕೊಂಡ. ಆತನನ್ನು ಪಂಚಮಹಾಭೂತಗಳಲ್ಲಿ ಒಂದೆಂದು ಪರಿಗಣಿಸಿದ; 'ದೇವ'ರೆಂದು ಪೂಜಿಸಿದ, ಶಕ್ತಿಯ ಮೂಲವೆಂದು ನಂಬಿದ. ಸೂರ್ಯನ ಬಗ್ಗೆ ಆತನ ಶ್ರದ್ಧೆ ಅದೆಷ್ಟು ಅನನ್ಯವೆನಿಸಿತೆಂದರೆ ಸೂರ್ಯ ಚಂದ್ರರಿಬ್ಬರ ಸಾಕ್ಷಿ ಕೊಡುವುದನ್ನೂ ಆತ ರೂಢಿಸಿಕೊಂಡ.

ಸೂರ್ಯನನ್ನು ಮೊದಲ ಬಾರಿಗೆ ಕಂಡಂದಿನಿಂದ ಮಾನವ ಲಕ್ಷಾಂತರ ವರ್ಷಗಳ ಅವನೊಂದಿಗಿನ ಒಡನಾಟದಿಂದ ಸೂರ್ಯನ ಬಗ್ಗೆ ಅನೇಕ ಕಲ್ಪನೆಗಳನ್ನುಂಟು ಮಾಡಿಕೊಂಡ. ಧರ್ಮ–ಕಲೆ–ಸಾಹಿತ್ಯಗಳಲ್ಲಿ ಸೂರ್ಯನನ್ನು ನಾನಾ ರೀತಿಯಲ್ಲಿ ವರ್ಣಿಸಿದ. ಸೂರ್ಯಾರಾಧನೆ ಕೆಲ ಜನಾಂಗಗಳಲ್ಲಿ ಪ್ರಚಲಿತವಾಯಿತು. ಕೆಲ ವಂಶಜರು ತಮ್ಮನ್ನು ಸೂರ್ಯವಂಶೀಯರೆಂದು ಕರೆದುಕೊಂಡರು. ಜಪಾನಿನ ರಾಜವಂಶವೂ ಇದಕ್ಕೆ ಹೊರತಾಗಿಲ್ಲ, ಇಂದಿಗೂ ಜಪಾನಿನ ರಾಜವಂಶೀಯರು ತಮ್ಮನ್ನು ಅಮಾತಿರಾಸು(ಸೂರ್ಯರಾಣಿ)ವಿನ ವಂಶಜರೆಂದೇ ಹೇಳಿಕೊಳ್ಳುತ್ತಾರೆ. ಜಪಾನಿನ ರಾಷ್ಟ್ರೀಯ ಧರ್ಮವಾದ ಶಿಂಟೋ ಧರ್ಮದಲ್ಲಿ ವೀರಪೂಜೆಗೂ ಸೂರ್ಯೋಪಾಸನೆಗೂ ಸಾಕಷ್ಟು ಪ್ರಾಶಸ್ತ್ಯವಿದೆ. ಸೂರ್ಯ

ಸ್ಪಾನಿಶ್ ನಗರ ಬರ್ಗೋಸಿನಲ್ಲಿರುವ ಸಾಂಟಾ ಮಾರಿಯಾ ಇಗರ್ಜಿಗಾಗಿ ೭ನೆಯ ಶತಮಾನದಲ್ಲಿ ತಯಾರಾದ ಪಡಿಯಚ್ಚು. ಸೂರ್ಯ ಇಲ್ಲಿ ಕ್ರಿಸ್ತರೂಪಿ.



ಭೂಮಿಯನ್ನು ಸುತ್ತುವುದಿಲ್ಲ, ಭೂಮಿಯೇ ಸೂರ್ಯನನ್ನು ಪರಿಭ್ರಮಿಸುತ್ತದೆ ಎಂದು ಹೇಳಿದವರನ್ನು ಕಷ್ಟಕ್ಕೀಡು ಮಾಡುವವರೆಗೂ ಸೂರ್ಯಾರಾಧನೆ ಅತಿರೇಕಕ್ಕೇರಿತು. ಸುಮೇರಿಯನ್ನರೂ ದಕ್ಷಿಣ ಅಮೇರಿಕದಲ್ಲಿ ಒಂದೊಮ್ಮೆ ನೆಲೆಸಿದ್ದ ಮಯಾ ಜನಾಂಗದವರೂ ಮೊಟ್ಟ ಮೊದಲ ಸೂರ್ಯಾರಾಧಕರೆಂದು ಇತಿಹಾಸ ಹೇಳುತ್ತದೆ.

ಎಲ್ಲ ಧರ್ಮಗಳಲ್ಲೂ ಸೂರ್ಯನಿಗೆ ಅಗ್ರಸ್ಥಾನ ದೊರೆತಿದೆ ಎನ್ನಬಹುದು. ಧಾರ್ಮಿಕ ಕಲ್ಪನೆಗೆ ಅನುಸಾರವಾಗಿ ಸೂರ್ಯನನ್ನು ಕಲಾವಿದ ಕಾಲಕಾಲಕ್ಕೆ ಬಗೆಬಗೆಯಾಗಿ ಚಿತ್ರಿಸಿದ; ಕೆಲವೆಡೆ ಕಲ್ಲಿನಲ್ಲಿ ಕೆತ್ತಿದರೆ ಇನ್ನು ಕೆಲವೆಡೆ ಲೋಹದಲ್ಲಿ ಮೂಡಿಸಿದ. ಬಂಡೆಗಲ್ಲು, ಕಾಗದ, ತಾಳೆಗರಿ, ಕ್ಯಾನವಾಸುಗಳ ಮೇಲೆ ಎಂದೋ ಚಿತ್ರಿಸಲ್ಪಟ್ಟ ಸೂರ್ಯ ನಮಗಿಂದು ಅಚ್ಚರಿಪಡಿಸುತ್ತಾನೆ. ಎಂಥೆಂಥ ಕಲ್ಪನೆಗಳು! ಅದೆಷ್ಟು ಸಂಕೇತಗಳು!

ಸ್ವಿಜರ್‌ಲೆಂಡಿನ ಝೂರಿಚ್ ನಿವಾಸಿ ವಾಲ್ಟರ್ ಹೆರ್ಡೆಜ್ ತನ್ನ ಗ್ರಾಫಿಸ್ ಪ್ರೆಸ್‌ನಲ್ಲಿ ಮುದ್ರಿಸಿ ಪ್ರಕಟಿಸಿದ 'The Sun in Art' ಎಂಬ ಸಚಿತ್ರ ಪುಸ್ತಕದಲ್ಲಿ ನಮಗೆ ನೂರಕ್ಕೂ ಹೆಚ್ಚು ಸೂರ್ಯನ ಚಿತ್ರಗಳು ಸಿಕ್ಕುತ್ತವೆ. ಸೂರ್ಯ ಇಲ್ಲಿ ನಮಗೆ ಬಹುರೂಪಿಯಾಗಿ ತೋರುತ್ತಾನೆ. ಕಲಾವಿದ ಧಾರ್ಮಿಕ ನಂಬುಗೆಗಳಿಗನುಸಾರವಾಗಿ ಮಾಡಿಕೊಂಡ ಕಲ್ಪನೆಗಳನ್ನೇ ಲೋಹ, ಕಲ್ಲುಗಳಲ್ಲಿ ಮೂಡಿಸಿದ್ದಾನೆ. ಒಂದೆಡೆ ವೃತ್ತಾಕಾರ, ಚಕ್ರಾಕಾರವಾಗಿ ನಾನಾ ಚಿತ್ತಾರಗಳ ಸಹಿತ ಕಂಡರೆ, ಇನ್ನುಳಿದೆಡೆ ವಸ್ತುಗಳು, ಪಶುಗಳು, ಪಕ್ಷಿಗಳ ರೂಪದಲ್ಲಿ ಕಾಣುತ್ತಾನೆ ಸೂರ್ಯ. ಮನುಷ್ಯನಿಗೆ ಸೂರ್ಯ

ಈಜಿಪ್ತದ ಸೂರ್ಯದೇವ 'ರಾ' ಸೌರನೌಕೆಯಲ್ಲಿ ಕುಳಿತಿರುವ ಅಪರೂಪದ ಈ ಚಿತ್ರ ಪ್ರಾಚೀನ ಈಜಿಪ್ತದ ತಾಳೆಗರಿಗಳಲ್ಲಿ ಚಿತ್ರಿಸಿದ್ದು.





ಅಮೃತಸರದ ಸ್ವರ್ಣಮಂದಿರದಲ್ಲಿ ಚಿನ್ನದ ತಗಡಿನಲ್ಲಿ ಮೂಡಿಸಿದ ಸೂರ್ಯ ಬೌದ್ಧ ಶಿಲ್ಪದ ಒಂದು ಮಾದರಿ

ಪರವಾಗಿ ಪರಿಣಮಿಸಿರುವಂತೆ ಶಾಪವಾಗಿಯೂ ತೋರಿದ್ದಾನೆ ಕೆಲವೆಡೆ. ಸಮೃದ್ಧಿಯ ಸುಕಾಲಕ್ಕೂ ಬಾಯ್ಬಿಡುವ ಬರಗಾಲಕ್ಕೂ ಆತನೇ ಕಾರಣ.

ಕ್ರಿಶ್ಚಿಯನ್ ಧರ್ಮವಾಗಲಿ ಯುರೋಪಿಯನ್ ರಹಸ್ಯವಾದವಾಗಲಿ ಇನ್ನಿತರ ಸಂಸ್ಕೃತಿಗಳ ಕೆಲವು ಅಂಶಗಳನ್ನು ಅರಗಿಸಿಕೊಳ್ಳುವಾಗ ಆ ಸಂಸ್ಕೃತಿಗಳಲ್ಲಿ ನಿಹಿತವಾದ ಸೂರ್ಯೋಪಾಸನೆಯನ್ನೂ ಪ್ರಕಾಶತತ್ವದ ಆಚರಣೆಯನ್ನೂ ಬಳಕೆಗೆ ತರದಿರಲಿಲ್ಲ. ಹೀಗಾಗಿ ಕಾಲಾಂತರದಲ್ಲಿ ಇವು ಬಾಹ್ಯ ಶಕ್ತಿಗಳ ಪ್ರತೀಕವಾಗಿದೆ ಆಂತರಿಕವಾದ ಆತ್ಮ ಶಕ್ತಿಯ ಪ್ರತೀಕವಾಗಿ ಪರಿಗ್ರಹಿಸಲ್ಪಟ್ಟವು.

ಸೂರ್ಯೋಪಾಸನೆಗೂ ಫಲವತ್ತತೆಗೂ ಇರುವ ಸಂಬಂಧ ಬಹು ಪುರಾತನ. ಮನುಷ್ಯನಲ್ಲಿನ ಫಲವತ್ತತೆಯೂ ಇದರಲ್ಲಿ ಅಡಕ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಮಹಾಭಾರತದ ಕರ್ಣ ಸೂರ್ಯನಿಂದಲೇ ಕುಂತಿಯಲ್ಲಿ ಜನಿಸಿದನೆಂಬ ಮಾತು

ಎಲ್ಲರಿಗೂ ಗೊತ್ತು. ಈಜಿಪ್ತಿನಲ್ಲಿ ಕ್ರಿಸ್ತಪೂರ್ವ ೨೫೮೦ರಲ್ಲಿ ಆಳುತ್ತಿದ್ದ ಹೋರಸ್ ದೊರೆ (ಫಾರೋ) ತಾನು ಸೂರ್ಯನಿಂದ ಹುಟ್ಟಿದವನೆಂದು ಹೇಳಿಕೊಂಡ.

ಪಿರಮಿಡ್ಡುಗಳು ಫಾರೋ ದೊರೆಗಳ ಸಮಾಧಿ ಮಾತ್ರವಾಗಿದೆ ಅವರ ಆತ್ಮದ ವಾಸಸ್ಥಳಗಳೂ ಆಗಿದ್ದವು. ಅಷ್ಟೇ ಅಲ್ಲ ಸೂರ್ಯಾರಾಧಕರಾದ ಈಜಿಪ್ಶಿಯನ್ನರು ಇವುಗಳನ್ನು ಸೂರ್ಯದೇವನ ತೃಪ್ತಿಗಾಗಿಯೂ ನಿರ್ಮಿಸುತ್ತಿದ್ದರು. ಹೀಗಾಗಿ ಇವು ಕೆಲವು ವಿದ್ವಾಂಸರಿಂದ ಸೌರಸ್ತೂಪ (Solar monuments) ಗಳಾಗಿಯೂ ಪರಿಗಣಿಸಲ್ಪಟ್ಟಿವೆ. ಸೂರ್ಯನನ್ನು ಉಪಾಸಿಸುವ ಎಷ್ಟೋ ಸಂಸ್ಕೃತಿಗಳು ಉಚ್ಛ್ರಾಯಕ್ಕೆ ಬರುವ ಮೊದಲು ಪ್ರಾಗೈತಿಹಾಸಿಕ ಕಾಲದಲ್ಲಿ ಮಾನವ ಸೌರ ಚಿಹ್ನವನ್ನು ಕೆತ್ತಿದ್ದು ಸ್ಪೇನ್ ಹಾಗೂ ಫ್ರಾನ್ಸ್ ದೇಶಗಳ ಗುಹೆಗಳಲ್ಲಿ ಕಂಡುಬಂದಿದ್ದು ಆದಿಮ ಮಾನವನೂ ಸೂರ್ಯೋಪಾಸಕನಾಗಿದ್ದನೆಂಬ ವಾದಕ್ಕೆ ಪುಷ್ಟಿಯನ್ನೊದಗಿಸುತ್ತದೆ.

ಸೂರ್ಯ ಎಂದರೆ ಪ್ರಕಾಶ; ಕತ್ತಲಿನ ವೈರಿ. ಕತ್ತಲೆಲ್ಲೆಲ್ಲಿದೆಯೋ ಅಲ್ಲೆಲ್ಲ ಸೂರ್ಯನನ್ನು ಚಿತ್ರಿಸಿದ ಉದಾಹರಣೆಗಳು ನಮಗೆ ಸಿಕ್ಕುತ್ತವೆ-ಗುಹೆಗಳಲ್ಲಿ, ಹೆಬ್ಬಂಡೆಗಳ ಕೆಳಗಿನ ಸುರಂಗಗಳಲ್ಲಿ. ಇಲ್ಲಿ (ಚಿತ್ರ ೨) ಸೂರ್ಯನನ್ನು ಬಂಧಿಸಿ ತಮ್ಮದಾಗಿಸಿಕೊಳ್ಳಲು ಹೊರಟ ದುಷ್ಟ ಶಕ್ತಿಗಳ ಚಕ್ರ-ವ್ಯೂಹವನ್ನು ಕಾಣಬಹುದು. ಇದು ಜಲರಾಶಿಯೆಂದೂ ಸೂರ್ಯನ ಸುಡುಶಕ್ತಿಯನ್ನು ಇಲ್ಲವಾಗಿಸಿಬಿಡಲು ಆತನನ್ನು ಸುತ್ತುವರಿದಿದೆಯೆಂದೂ ಕೆಲವರ ವ್ಯಾಖ್ಯೆ. ಮರದ ಕೆತ್ತನೆಯಾದ ಇದು ಕ್ರಿಸ್ತಪೂರ್ವ ೨೫೦೦ ರಿಂದ ಕ್ರಿಸ್ತಪೂರ್ವ ೧೧೦೦ ರ ಅವಧಿಯದು.

ಉರಿಯುವ ಸೂರ್ಯನ ಸುತ್ತ ಹಲವಾರು ವಿಚಿತ್ರ ವಸ್ತುಗಳು ಹಾರಾಡುವುದನ್ನು ೧೬ನೇ ಶತಮಾನದ ಒಂದು ವರ್ಣಚಿತ್ರ ಬಿಂಬಿಸಿದರೆ ಅದೇ ಶತಮಾನದ ಅರೆಬಿಕ್ ಗ್ರಂಥದ ಹಸ್ತಪ್ರತಿ



ಗ್ವಾಟೆಮಾಲಾ(ದಕ್ಷಿಣ ಅಮೇರಿಕ)ದ ಈ ಶಿಲ್ಪದಲ್ಲಿ ಸೂರ್ಯನನ್ನು ಆಹ್ವಾನಿಸುತ್ತಿರುವ ಮಾಯಾ ಜನಾಂ



'ತಮ'ವನ್ನು ತನ್ನ ನಾಲಿಗೆಯಿಂದ ನೆಕ್ಕಿ ನುಂಗಿಬಿಡಲು ಹವಣಿಸುತ್ತಿರುವ ಸೂರ್ಯ ಮತ್ತು ಕೆಲ ಪೌರಾಣಿಕ ಗೊಂಬೆಗಳ ಈ ಶಿಲ್ಪ ಕ್ರಿಸ್ತಪೂರ್ವ ೭ನೇ ಶತಮಾನದ್ದು.

ಯೊಂದರ ಮುಖಪುಟದಲ್ಲಿ ಸೂರ್ಯ ಸಿಂಹರೂಪಿಯಾಗಿದ್ದಾನೆ. ಯುರೋಪಿನ ಕೆಲವೆಡೆ ಕಾಣಸಿಕ್ಕುವ ಕ್ರಿ.ಶ. ೧೮ ನೆಯ ಶತಮಾನದ ವರ್ಣಚಿತ್ರದಲ್ಲಿ ಸೂರ್ಯನನ್ನು ಕೊಂಬುಗಳುಳ್ಳ ವೃತ್ತವನ್ನಾಗಿ ರೂಪಿಸಲಾಗಿದೆ. ಅರೇಬಿಯಾದ ಇನ್ನೆರಡು ಚಿತ್ರಗಳಲ್ಲಿ ವೃಶ್ಚಿಕ ಮತ್ತು ಕನ್ಯಾ ರಾಶಿಗಳ ಸಂಕೇತಗಳಲ್ಲಿ ಸೂರ್ಯ ಚಿತ್ರಿಸಲ್ಪಟ್ಟಿದ್ದಾನೆ.

ಶಿಲ್ಪದಲ್ಲಿ ಸೂರ್ಯನನ್ನು ಕಾಣಬೇಕಾದರೆ ನಾವು ಭಾರತದ ಕೋಣಾರ್ಕದ ಸೂರ್ಯ ದೇವಾಲಯವನ್ನು ನೋಡಬೇಕು. ✡

# ಇದುವೇ ಜೀವ ಇದು ಜೀವನ

ಅಂದು ಪಕ್ಕದ ಊರಿನಲ್ಲಿ ನಮ್ಮ ಸಂಬಂಧಿಕರೊಬ್ಬರ ಮನೆಯಲ್ಲಿ ಚಿಕ್ಕದೊಂದು ಔತಣ ಕೂಟ. ನಮ್ಮ ತಾಯಿ ಬೆಳಿಗ್ಗೆ ೧೧ ಗಂಟೆಗೆ ಅದಕ್ಕಾಗಿ ಹೊರಟಿದ್ದರು. ತಂದೆ ಅಂಗಡಿಗೆಂದು ಹೊರಟವರು ಸುಮಾರು ಒಂದೆರಡು ಮಾರುಗಳ ಹಿಂದಿನಿಂದ ಬರುತ್ತಿದ್ದರು. ನಮ್ಮ ಮನೆಯ ಓಣಿಯ ತುದಿಯಲ್ಲೇ ರಾಷ್ಟ್ರೀಯ ಹೆದ್ದಾರಿ. ತಾಯಿಯವರು ಅಲ್ಲಿಗೆ ತಲಪುವುದಕ್ಕೂ, ಒಂದು ಬಾಡಿಗೆ ಟ್ಯಾಕ್ಸಿ ಬರುವುದಕ್ಕೂ ಸರಿ ಹೋಯಿತು. ನಮ್ಮ ತಾಯಿ ಕೈ ಅಡ್ಡ ಹಿಡಿದ ಕೂಡಲೇ ಟ್ಯಾಕ್ಸಿ ನಿಂತಿತು. ಅದರಲ್ಲಿ ಡ್ರೈವರ್, ಮತ್ತೊಬ್ಬ ಸಭ್ಯನಂತೆ ತೋರುವ ಅಪರಿಚಿತ, ಇಬ್ಬರೇ ಇದ್ದರು. ತಾಯಿ ಟ್ಯಾಕ್ಸಿ ಹತ್ತಿ ಇಂತಹ ಊರಿಗೆ ಹೋಗಬೇಕೆಂದು ಹೇಳಿದರು. ಆದರೆ, ಆಗ ಡ್ರೈವರ್ ಮತ್ತು ಅಪರಿಚಿತ ವ್ಯಕ್ತಿ ಪರಸ್ಪರರ ಮುಖ ನೋಡಿ ಅರ್ಥಪೂರ್ಣವಾಗಿ ಮುಗುಳ್ನಕ್ಕದ್ದನ್ನು ಹಿಂದಿನಿಂದ ಬರುತ್ತಿದ್ದ ನಮ್ಮ ತಂದೆ ಗಮನಿಸಿ ಟ್ಯಾಕ್ಸಿಯನ್ನು ನಿಲ್ಲಿಸಲು ಪ್ರಯತ್ನಿಸಿದರು. ಆದರೆ ಅದು ನಿಲ್ಲದೆ ವೇಗವಾಗಿ ಮುಂದೋಡಿತು. ನಮ್ಮ ತಂದೆಯವರು ಚಿಂತಾಕ್ರಾಂತರಾದರು. ಮಧ್ಯ ವಯಸ್ಸನ್ನು ದಾಟಿದ ತಾಯಿಯವರ ಮೈ ಮೇಲೆ ವಜ್ರದೋಲೆ, ಚಿನ್ನಾಭರಣಗಳಿದ್ದವು. ಹಗಲು ದರೋಡೆಯ ಪ್ರಕರಣ ದಿನನಿತ್ಯವೆಂಬಂತೆ ನಡೆಯುವ ಕಾಲವಿದು. ಅವರು ೧೫ ನಿಮಿಷದಲ್ಲಿಯೇ ಬಸ್ಸೊಂದನ್ನು ಹಿಡಿದು ಔತಣ ನಡೆಯುವ ಮನೆಗೆ ಬಂದರು. ಅಲ್ಲಿ ನಮ್ಮ ತಾಯಿಯ ಸುಳಿವೇ ಇಲ್ಲ. ಗಾಬರಿಯಾಗಿ ಆ ಊರಿನ ಅಂಗಡಿ, ಹೋಟೆಲು, ಕಾರು, ರಿಕ್ಷಾದವರಲ್ಲಿ ವಿಚಾರಿಸಲಾಗಿ ಅಂಥವರು ಯಾರೂ ಅಲ್ಲಿಗೆ ಬಂದಿಲ್ಲವೆಂದರು. ಉಪಾಯಗಾಣದೆ ತಂದೆಯವರು ಪೋಲೀಸ್ ಠಾಣೆಯಲ್ಲಿ ದೂರು ಕೊಟ್ಟರು. ಹಾಗೆಯೆ ಅಲ್ಲಿಂದ, ಬಳಸುದಾರಿಯೊಂದರ ಮೂಲಕ ಠಂಗಾಲಾಗಿ ಬರುತ್ತಿರುವಾಗ ಇದಿರಿನಿಂದ ನಮ್ಮ ತಾಯಿಯ ಸವಾರಿ ಗಡಿಬಿಡಿ ಇಲ್ಲದೆ ಬರುತ್ತಿತ್ತು!

ನಮ್ಮ ತಾಯಿ ಟ್ಯಾಕ್ಸಿ ಹತ್ತಿದ ಐದು ನಿಮಿಷದಲ್ಲೇ, ಸುಮಾರು ಒಂದು ಕಿಲೊಮೀಟರಿನಲ್ಲಿ ಅದೇ ಊರಿನ ಇನ್ನೊಬ್ಬ ಪರಿಚಯಸ್ಥರು ಹತ್ತಿದರಂತೆ. ಅವರು ಒತ್ತಾಯ ಮಾಡಿ ನಮ್ಮ ತಾಯಿಯನ್ನು ಊರ ಹೊರವಲಯದಲ್ಲಿರುವ ತಮ್ಮ ಮನೆಗೆ ಕರೆದೊಯ್ದರಂತೆ. ಆದರಾತಿಥ್ಯ ಮುಗಿದು ಹೊರಡುವಾಗ ಇಷ್ಟು ಹೊತ್ತಾಗಿತ್ತು. ನಮ್ಮ ತಂದೆ ಆನಂದೋದ್ವೇಗವನ್ನು ತಡೆಯಲಾರದೆ ಅಲ್ಲಿಯೇ ಅತ್ತುಬಿಟ್ಟರು. ಔತಣದ ಮನೆಗೆ ಹೋದಾಗ, ಅಲ್ಲಿಯ ಮುದುಕಿ ಅನೇಕ ದೇವರಿಗೆ ಹರಕೆ ಹೇಳಿಕೊಂಡು ಆಗಿತ್ತಂತೆ.

—'ವನವಾಸಿ'

ನಾನೊಮ್ಮೆ ಮಂಡ್ಯದಿಂದ ಬೆಂಗಳೂರಿಗೆ ಬಸ್ಸಿನಲ್ಲಿ ಬರುತ್ತಿದ್ದೆ. ಬಸ್ಸಿನಲ್ಲಿ ಜನವೋ ಜನ. ನುಗ್ಗಿಕೊಂಡು ಹೋಗಿ ಒಂದು ಸೀಟಿನಲ್ಲಿ ಕುಳಿತೆ. ನನ್ನ ಪಕ್ಕದ ಸೀಟಿನಲ್ಲಿ ಯಾರಾದರೂ 'ಜಂಟಲ್‌ಮನ್' ಬಂದು ಕುಳಿತುಕೊಳ್ಳಬೇಕೆಂದು ನನ್ನ ಆಸೆಯಾಗಿತ್ತು. ಆದರೆ ನನ್ನ ಪಕ್ಕದಲ್ಲಿ ಒಬ್ಬ ಮುದುಕ – ಅದೂ ಗಲೀಜು ಬಟ್ಟೆ ಹಾಕಿಕೊಂಡವನು – ಬಂದು ಕುಳಿತ. ನನಗೋ ಮನಸ್ಸಿಗೆ ಒಂದು ತರಹ ಕಿರಿಕಿರಿ. ಪಕ್ಕಕ್ಕೆ ತಿರುಗಿಕೊಂಡು ನಶ್ಯ ಹಾಕಿಕೊಂಡು, ಎಲೆ ಅಡಿಕೆ ಜಗಿಯಲು ಪ್ರಾರಂಭಿಸಿದ. ನಾನು

ಮುಖವನ್ನು ಕಿವಿಚಿಕೊಂಡು ಸ್ವಲ್ಪ ಮುದುಕನಿಗೆ ದೂರವಾಗಿ ಕುಳಿತೆ. ಆ ಮುದುಕನಿಗೆ ಏನ್ನನಿಸಿತೋ, "ಯಾಕೆ ಸ್ವಾಮಿಯವರಿಗೆ ಬೇಜಾರಾಯಿತಾ, ನಾನು ಎಲೆ ಅಡಿಕೆ ನಶ್ಯ ಹಾಕಿದ್ದಕ್ಕೆ? ಪಕ್ಕಕ್ಕೆ ತಿರುಗಿ ಕುಳಿತಿರಲ್ಲಾ?" ಎಂದ. ನಾನು ಏನೂ ಮಾತಾಡಲಿಲ್ಲ. ಮದ್ದೂರಿನಲ್ಲಿ ಬಸ್ಸು ನಿಂತಾಗ ಕೆಲವರು ಇಳಿದು ಜಾಗ ಖಾಲಿಯಾಯಿತು. ಮುದುಕ ನನ್ನ ಕಡೆ ತಿರುಗಿ, "ನಿಮಗೆ ಬೇಜಾರಾಗದಿರಲೆಂದು ಬೇರೆ ಸೀಟಗೆ ಹೋಗಿ ಕುಳಿತುಕೊಳ್ಳುತ್ತೇನೆ ಸ್ವಾಮಿ," ಎಂದವನೇ ಎದ್ದು ಬೇರೆ ಸೀಟನಲ್ಲಿ ಕುಳಿತ. ನನಗೆ ಹಾಯೆನಿಸಿತು. ನನ್ನ ಪಕ್ಕದ ಸೀಟಗೆ ಒಬ್ಬ ಸೂಟ್‌ವಾಲಾ ಬಂದು ಕುಳಿತ. ಸದ್ಯ ನನ್ನಿಷ್ಟದ ಹಾಗೆ 'ಜಂಟಲ್ ಮನ್' ಬಂದು ಕುಳಿತನೆಂದು ಆನಂದವಾಯಿತು. ಬಸ್ಸು ಹೊರಟ ತಕ್ಷಣ ಆ 'ಜಂಟಲ್‌ಮನ್' ಒಂದರ ಮೇಲೆ ಒಂದರಂತೆ ಸಿಗರೇಟ್ ಕುಡಿಯಲಾರಂಭಿಸಿದ. ಹೊಗೆಯೆಲ್ಲ ನನ್ನ ಮುಖದ ಮೇಲೆ ಬರಲಾರಂಭಿಸಿತು. "ರೀ ಮಿಸ್ಟರ್, ನೀವು ಕುಡಿದ ಸಿಗರೇಟ್ ಹೊಗೆಯಲ್ಲಾ ನನ್ನ ಮುಖದ ಮೇಲೆ ಬರುತ್ತಿದೆ. ಅದೂ ಬಸ್ಸಿನಲ್ಲಿ 'No Smoking' ಬೋರ್ಡಿದೆ ನೋಡಿ," ಎಂದೆ.

"ನಿಮಗೆ ಬೇಕಾದರೆ ಬೇರೆ ಸೀಟನಲ್ಲಿ ಹೋಗಿ ಕುಳಿತುಕೊಳ್ಳಿ. ನಾನು ನನ್ನ ಜಾಗದಲ್ಲಿ ಕುಳಿತು ಸಿಗರೇಟ್ ಸೇದುತ್ತಿದ್ದೇನೆ. ಹೊಗೆ ನಿಮ್ಮ ಮುಖದ ಮೇಲೆ ಬಂದರೆ ನಾವು ಹೊಣೆಯಲ್ಲ. ಬಸ್ಸಿನಲ್ಲಿ ನೋಡಿ, ಬೇಕಾದಷ್ಟು ಜನ ಬೀಡಿ, ಸಿಗರೇಟು ಸೇದುತ್ತಿದ್ದಾರೆ," ಅಂದ ಆ 'ಜಂಟಲ್‌ಮನ್'.

—ಬಿ. ಡಿ. ದಿನೇಶ

ಶರಾವತಿಯಲ್ಲಿ ಪ್ರವಾಹ ಉಕ್ಕೇರಿದ ಕೆಲವು ದಿನಗಳ ನಂತರದ ಮಾತು. ನಾನು ಒಂದು ಕಾರ್ಯದ ನಿಮಿತ್ತ ಹೊನ್ನಾವರ ತಾಲೂಕಿನ ಕೆಕ್ಕಾರಿಗೆ ಹೋಗಿದ್ದೆ. ಮರಳಿ ಬರುವಾಗ ಚಂದಾವರದ ಹೊಳೆಯನ್ನು ದಾಟುವ ಸಂದರ್ಭ ಬಂತು. ಅರ್ಧ ಫರ್ಲಾಂಗಿನಷ್ಟು ಅಗಲದ ಹೊಳೆಯ ರಭಸ ಅಷ್ಟಿಲ್ಲದಿದ್ದರೂ ಸೆಳೆತ ತೀವ್ರವಾಗಿತ್ತು. ನದಿಯನ್ನು ದಾಟಲು ಪಾತಿ ದೋಣಿ (ಚಿಕ್ಕ ದೋಣಿ) ಒಂದಿತ್ತು. ೧೪-೧೫ ವರ್ಷದ ಹುಡುಗನೊಬ್ಬ ನಾನು ನೋಡುವಂತೆಯೇ ಸುತ್ತ ಮುತ್ತಲಿನ ನಾಲ್ಕಾರು ಜನರನ್ನು ಆ ಚಿಕ್ಕ ದೋಣಿಯಲ್ಲಿಯೆ ಆಚೆ ದಾಟಿಸಿದ. ಆದರೆ ನನಗೆ ಮಾತ್ರ ಸಾಧ್ಯವಾಗಲಿಲ್ಲ. ಕಾರಣ, ನನಗೆ ಈಜಲು ಬರದೇ ಇದ್ದ ಭಯ ಒಂದು ಕಡೆ, ಅಲ್ಲದೇ ಆ ಪಾತಿ ದೋಣಿಯಲ್ಲಿ ಕಾಲಿಟ್ಟ ಕೂಡಲೇ ಸಮತೋಲ ತಪ್ಪಿ ಹೋಗುತ್ತಿದ್ದುದರಿಂದ ನನ್ನಂತೆಯೇ ಆ ದೋಣಿ ಹುಡುಗನೂ ಹೆದರಿದ. ಅರ್ಧ ಗಂಟೆ ಕಳೆದರೂ ನನ್ನನ್ನು ದಾಟಿಸುವ ಪರಿ ಅವನಿಗೆ ಕಾಣಲಿಲ್ಲ. ಅಷ್ಟರಲ್ಲಿ ಅದೇ ಊರಿನ ಮಧ್ಯವಯಸ್ಕನೊಬ್ಬ ಬಂದ. ಪರಿಸ್ಥಿತಿಯನ್ನು ಅರ್ಥಮಾಡಿಕೊಂಡವನೇ ತನ್ನ ಒಳಗಚ್ಚೆಯೊಂದನ್ನು ಬಿಟ್ಟು ಉಳಿದ ಬಟ್ಟೆಯನ್ನೆಲ್ಲಾ ಕಳಚಿ ದಡದ ಮೇಲಿಟ್ಟ. ಹತ್ತಿರದ ಮನೆಯಿಂದ ಒಂದು ಮಣೆಯನ್ನು ತರಿಸಿ ಆ ದೋಣಿಯಲ್ಲಿ ಇಟ್ಟು ನನ್ನನ್ನು ಸರಿಯಾಗಿ ಕುಳ್ಳಿರಿಸಿದ. ನೀವು ಏನೂ ಹೆದರಬೇಡಿರೆಂದು ಪದೇ ಪದೇ ನನಗೆ ಧೈರ್ಯ ತುಂಬಿದ. ತಾನು ನೀರು ಕಡಿಮೆ ಇರುವ ತಾಣವನ್ನರಸುತ್ತ ಕುತ್ತಿಗೆ ಮಟ್ಟ ನೀರಿನಲ್ಲಿ ಹೊಳೆಯಲ್ಲಿ ನಡೆಯುತ್ತಲೇ, ದೋಣಿಯ ಒಂದು ತುದಿಯನ್ನು ಹಿಡಿದುಕೊಂಡು ಆಚೆ ದಡದ ಕಡೆ ಎಳೆಯುತ್ತ ಸಾಗಿದ. ನೀರಿನ ಸೆಳೆತ ತೀವ್ರವಾಗಿದ್ದರೂ ದೋಣಿಯನ್ನು ಹೊಯ್ದಾಡಲು ಬಿಡದೆ ನನ್ನನ್ನು ಸುರಕ್ಷಿತವಾಗಿ ಆಚೆಗೆ ದಾಟಿಸಿದ. ನನಗೆ ಹೃದಯ ತುಂಬಿ ಬಂದು ಅವನಿಗೆ ಕೃತಜ್ಞತೆಯನ್ನರ್ಪಿಸಿ, ಹಣ ನೀಡಲು ಮುಂದಾದಾಗ ಆತ, "ಇದಕ್ಕೆಲ್ಲಾ ದುಡ್ಡು ತಗಂಡೆ ಭಗವಂತ ಮೆಚ್ಚತಾನಾ ಒಡೆಯಾ?" ಎಂದುಬಿಟ್ಟ. ನನಗೆ ಆ ಕ್ಷಣಕ್ಕೆ ಪಟ್ಟಣದಲ್ಲಿಯ ರಿಕ್ಷಾವಾಲಾರ ನೆನಪು ಬಾರದಿರಲಿಲ್ಲ.

—ಎಸ್. ಪಿ. ಶ್ಯಾನಭಾಗ

# ಉತ್ತರ ಪ್ರದೇಶ ಯಾತ್ರೆ

**ಎನ್. ಜಾನಕಿ ಆಚಾರ್ಯ**

ಉತ್ತರ ಪ್ರದೇಶವು ಸಂಖ್ಯೆಯ ದೃಷ್ಟಿಯಿಂದ ಭಾರತದ ಅತಿ ದೊಡ್ಡ ರಾಜ್ಯವಾಗಿದೆ. ಇದರ ವಿಸ್ತೀರ್ಣ ಸುಮಾರು ೨,೯೪,೪೧೧ ಚದುರ ಕಿಲೋಮೀಟರುಗಳು. ಉತ್ತರ ಪ್ರದೇಶದ ಉತ್ತರಕ್ಕೆ ಟಿಬೆಟ್ ಮತ್ತು ನೇಪಾಳ, ಉತ್ತರ–ಪಶ್ಚಿಮವಾಗಿ ಹಿಮಾಚಲ ಪ್ರದೇಶವೂ ಮತ್ತು ದಕ್ಷಿಣಕ್ಕೆ ಹರಿಯಾನಾ, ದಕ್ಷಿಣ ಪಶ್ಚಿಮಕ್ಕೆ ರಾಜಸ್ಥಾನವೂ, ದಕ್ಷಿಣ–ಪೂರ್ವ ಮತ್ತು ದಕ್ಷಿಣಕ್ಕೆ ಮಧ್ಯಪ್ರದೇಶವೂ ಮತ್ತು ಪೂರ್ವಕ್ಕೆ ಬಿಹಾರವೂ ರಾಜ್ಯವನ್ನು ಸುತ್ತುವರಿದಿವೆ. ಉತ್ತರ ಪ್ರದೇಶದ ಜನಗಳ ಸಾಮಾನ್ಯ ಆಹಾರ ಬೇಳೆಯ ತೊವ್ವೆ ಮತ್ತು ಗೋಧಿರೊಟ್ಟಿ.

ಭಾರತದ ಏಳು ಪುಣ್ಯ ಕ್ಷೇತ್ರಗಳಲ್ಲಿ ನಾಲ್ಕು–ಹರಿದ್ವಾರ್, ಅಯೋಧ್ಯಾ, ಕಾಶಿ ಮತ್ತು ಮಥುರಾ ಈ ರಾಜ್ಯದಲ್ಲೆ ಇರುವುವು.

ಉತ್ತರ ಪ್ರದೇಶದ ಅಂಚಾದ ಹಿಮಾಲಯ ಪರ್ವತ ಶ್ರೇಣಿಯು ವಿಷಯವನ್ನು ಕುರಿತು ಪುರಾಣದಲ್ಲಿ ಹಲವಾರು ಕಡೆ ಪ್ರಸ್ತಾಪವಿದೆ. ಶಿವನು ಜಟೆಯಲ್ಲಿ ಭಾಗೀರಥಿಯನ್ನು ತಡೆದ ಸ್ಥಳವಾದ 'ಗಂಗೋತ್ರಿ' ಯೂ ಸೂರ್ಯನ ಮಗಳಾದ ಯಮುನಾ ನದಿಯು ಹುಟ್ಟಿದ 'ಯಮು–ನೋತ್ರಿ'ಯೂ ಈ ಪರ್ವತ ಶ್ರೇಣಿಯಲ್ಲಿವೆ.

ನರ-ನಾರಾಯಣರ ವಾಸಸ್ಥಳವಾದ 'ಬದರೀನಾಥ್' ಮತ್ತು ಇನ್ನೊಂದು ಪುಣ್ಯ ಸ್ಥಳವಾದ 'ಕೇದಾರನಾಥ್'ವೂ ಈ ಶ್ರೇಣಿಯಲ್ಲಿ ಇರುವುದಲ್ಲದೆ, ಇಲ್ಲಿಂದ ಗಂಗೆಯು ಉತ್ತರ ಪ್ರದೇಶದ ಉದ್ದಕ್ಕೂ ರಭಸದಿಂದ ಹರಿದುಬರುತ್ತಾಳೆ. ಹೀಗೆ ಹರಿದು ಬರುವಾಗ ಕಾಶಿಯ ತನಕವೂ ಪುಣ್ಯ ಕ್ಷೇತ್ರವನ್ನು ಉಂಟುಮಾಡಿದ್ದಾಳೆ. ನಮ್ಮ ದೇಹಕ್ಕೆ ಧಮನಿಯು ಯಾವ ರೀತಿ ರಕ್ತವನ್ನು ಪೂರೈಸುತ್ತದೋ, ಅದೇ ರೀತಿ ಉತ್ತರ ಪ್ರದೇಶಕ್ಕೆ ನದಿಗಳಲ್ಲೇ ಪವಿತ್ರವೆನಿಸಿದ 'ಗಂಗೆಯು ನೀರನ್ನು ಪೂರೈಸಿದುದಲ್ಲದೆ ನೆಲವನ್ನೂ ಫಲವತ್ತಾಗಿ ಮಾಡಿದ್ದಾಳೆ.

ಹರಿದ್ವಾರವು ದಿಲ್ಲಿಯಿಂದ ರೈಲು ಮಾರ್ಗವಾಗಿ ೨೧೦ ಕಿಲೋಮೀಟರ್ ದೂರದಲ್ಲಿದೆ. ಹಿಂದೆ ಇಲ್ಲಿ ಕಪಿಲ ಮುನಿಯು ತಪಸ್ಸು ಮಾಡಿದ್ದುದರಿಂದ ಇದಕ್ಕೆ 'ಕಪಿಲಾಸ್ಥಾನ್' ಎಂತಲೂ ಹೇಳುತ್ತಾರೆ.



ಹೃಷಿಕೇಶದ ಲಕ್ಷ್ಮಣ ಝೂಲಾ

ಹರಿದ್ವಾರವು ಸಮತಟ್ಟಾದ ಪ್ರದೇಶ. ಇಲ್ಲಿ ಗಂಗೆಯು ಮೇಲಿನಿಂದ ಹರಿದು ಬರುವಾಗ ಮುನಿದಿರುವಳೋ ಎಂಬಂತೆ ರಭಸವಾಗಿ ಹರಿಯು ತ್ತಿದ್ದಾಳೆ. ೧೦೦ ವರ್ಷಗಳ ಹಿಂದೆ ಬ್ರಿಟಿಷರು ಭಾರತದಲ್ಲಿ ಮೊಟ್ಟಮೊದಲು ಆಧುನಿಕ ಕಾಲುವೆ ತೋಡಿದ್ದು ಇಲ್ಲಿಯೇ. ಮುಖ್ಯವಾಗಿ ಹರೀ ಕೀ ಪೈರ್ (ಹರಿಯ ಪಾದದ ಚಿಹ್ನೆ) ನಲ್ಲಿ ರುವ ಗಂಗಾಧರ ಮಂದಿರ ಮತ್ತು ಮಾನಸ ದೇವಿಯ ಮಂದಿರ, ಬ್ರಹ್ಮಕುಂಡ, ಗೌರಿಕುಂಡ ಮತ್ತು ಸಪ್ತ ಸರೋವರ ಮೊದಲಾದವು ನೋಡಬೇಕಾದ ಸ್ಥಳಗಳು. ಈ ಪ್ರದೇಶ ಮುಖ್ಯ ವಾಗಿ ಗಂಗಾಸ್ನಾನಕ್ಕೆ ಪ್ರಸಿದ್ಧಿಯಾಗಿದೆ. ಎಂತ ಸುಡುವ ಬಿಸಿಲಿನಲ್ಲೂ ಗಂಗೆಯು ಮಂಜಿನಂತೆ ತಣ್ಣಗಿರುತ್ತಾಳೆ. ಇಲ್ಲಿ ಸಾಯಂಕಾಲ ಗಂಗೆಯಲ್ಲಿ ಎಲೆಯಲ್ಲಿ ದೀಪ ಮತ್ತು ಹೂವನ್ನು ತೇಲಿ ಬಿಡುವ ದೃಶ್ಯ ನೋಡಲು ತುಂಬ ರಮಣೀಯ. ಈ ರೀತಿ ತೇಲಿಬಿಡುವುದರಿಂದ ಭಕ್ತರ ಮನ ದಾಸೆಯನ್ನು ಗಂಗೆಯು ಪೂರೈಸುತ್ತಾಳೆಂಬ ಭಾವನೆ ಇಲ್ಲಿದೆ. ಹರಿದ್ವಾರಕ್ಕೆ ಇನ್ನೊಂದು ಪುರಾಣಕಥೆ ಏನೆಂದರೆ ಹಿಂದೆ ದಾನವರೂ ದೇವತೆ ಗಳೂ ಕ್ಷೀರಸಾಗರವನ್ನು ಕಡೆದ ನಂತರ ದೊರೆತ ಅಮೃತ ಕಲಶಕ್ಕೋಸ್ಕರ ಯುದ್ಧವಾಗುವಾಗ ಆ ಕಲಶದಿಂದ ತುಳುಕಿದ ಅಮೃತದ ಹನಿಯು ಸ್ಥಳದಲ್ಲಿ ಬಿದ್ದು 'ಹರಿದ್ವಾರ' ಎಂದು ಮುಂದೆ ಪ್ರಸಿದ್ಧವಾಯಿತಂತೆ.

ಹರಿದ್ವಾರದಲ್ಲಿ ತಂಗಲು ಅನೇಕ ಧರ್ಮಶಾಲೆ ಗಳಿವೆ. ಕನ್ನಡದವರ 'ಶಂಕರ ಮಠ' ಮತ್ತು 'ಕರ್ನಾಟಕ ಭವನ'ವೂ ಇಲ್ಲಿವೆ. ಉಳಿದೆಲ್ಲ ಅನು ಕೂಲವಿದ್ದರೂ ದಕ್ಷಿಣ ಭಾರತದ ಊಟಕ್ಕೆ ಮಾತ್ರ ಸ್ವಲ್ಪ ತೊಂದರೆ. ಹರಿದ್ವಾರದಲ್ಲಿ ಸಾಧುಗಳು ಸರಳ ಜೀವನ ನಡೆಸುವುದನ್ನು ನೋಡಬಹುದು. ೧೨ ವರ್ಷಗಳಿಗೊಮ್ಮೆ ಅದ್ದೂರಿಯಿಂದ ನಡೆ ಯುವ 'ಕುಂಭ ಮೇಳ'ಕ್ಕೆ ನಾನಾ ಕಡೆಗಳಿಂದ ಭಕ್ತಾದಿಗಳು ಗಂಗೆಯಲ್ಲಿ ಸ್ನಾನ ಮಾಡಲು ಬರುತ್ತಾರೆ. ೬ ವರ್ಷಕ್ಕೊಮ್ಮೆ 'ಅರ್ಧ ಕುಂಭ ಮೇಳ'ವೂ ನಡೆಯುತ್ತದೆ. ಇದೇ ವರ್ಷ (೧೩ ಏಪ್ರಿಲ್ ೧೯೮೦) ಅರ್ಧ ಕುಂಭ ಮೇಳ ನಡೆ ಯಿತು. ಇಲ್ಲಿ ಬೆತ್ತದ ಸಾಮಾನುಗಳು ಪ್ರಸಿದ್ಧ.

ಹರಿದ್ವಾರದಿಂದ ಹೃಷಿಕೇಶ ೨೪ ಕಿಲೊ ಮೀಟರ್ ದೂರದಲ್ಲಿದೆ. ಉತ್ತರ ಪ್ರದೇಶ ದಲ್ಲಿನ ಪುಣ್ಯ ಕ್ಷೇತ್ರಗಳಲ್ಲಿ ಒಂದಾಗಿರುವ ಈ ಹೃಷಿಕೇಶದಲ್ಲಿ ಹೆಚ್ಚಾಗಿ ಸಾಧು ಸಂತರು ಕಾಣ

ಸಿಗುತ್ತಾರೆ. ಇಲ್ಲಿ ತಿರುಪತಿ ದೇವಸ್ಥಾನದವರು ಕಟ್ಟಿಸಿರುವ 'ಅಂಧ್ರಾ ಭವನ' ತಂಗಲು ಅನುಕೂಲವಾದ ಸ್ಥಳ. ಇಲ್ಲಿ ವಸತಿ ಮತ್ತು ಊಟದ ವ್ಯವಸ್ಥೆ ಉಂಟು, ಹೃಷಿಕೇಶದಲ್ಲಿ ಗಂಗಾ ನದಿಗೆ ಕಟ್ಟಿರುವ ಸೇತುವೆಗೆ ಲಕ್ಷ್ಮಣ ಝೂಲಾ ಎನ್ನುತ್ತಾರೆ. ಇದನ್ನು ದಾಟಿದರೆ ಸ್ವರ್ಗಾಶ್ರಮ ಇದೆ. ಈ ಪ್ರದೇಶವು ಬೆಟ್ಟ ಗುಡ್ಡಗಳಿಂದ ಕೂಡಿ ಹಚ್ಚ ಹಸಿರಾಗಿದೆ. ಪ್ರಶಾಂತಿಯಿಂದ ಕೂಡಿದ ವಾತಾವರಣದಿಂದ ಯಾವುದೋ ಲೋಕದಲ್ಲಿರುವಂತೆ ಭಾಸವಾಗುತ್ತದೆ. ಇಲ್ಲಿಯ ಗಂಗೆಯ ತೀರದಲ್ಲಿ ಸಾಲಾಗಿ 'ಗೀತಾ ಆಶ್ರಮ' 'ಕೈಲಾಸ್ ಆಶ್ರಮ', 'ಪರಮಾತ್ಮ ನಿಕೇತನ', ಮತ್ತು "ಸಪ್ತ ಋಷಿ ಆಶ್ರಮ" ಇನ್ನೂ ಮುಂತಾದವುಗಳಿವೆ. ಇಲ್ಲಿ ಬೆಳಗ್ಗೆ ೫ ಗಂಟೆಯಿಂದ ಭಜನೆ, ಉಪನ್ಯಾಸಗಳು ಪ್ರಾರಭವಾಗುತ್ತವೆ. ಇಲ್ಲಿಂದ ಮುಂದೆ ಬದರೀನಾಥ್, ಕೇದಾರನಾಥ್, ಗಂಗೋತ್ರಿ, ಯಮುನೋತ್ರಿಗೆ ಹೋಗಬಹುದು.

ಗಂಗೋತ್ರಿಯು ಸಮುದ್ರದಿಂದ ೩,೧೪೦ ಮೀಟರ್ ಎತ್ತರದಲ್ಲಿದೆ. ಇಲ್ಲಿ ಭಗೀರಥ ರಾಜನು ತನ್ನ ಪಿತೃಗಳಿಗೋಸ್ಕರ ಗಂಗೆಯನ್ನು ಧರೆಗೆ ತರಲು ಮಹಾದೇವನನ್ನು ಕುರಿತು ತಪಸ್ಸುಮಾಡಿದ ಸ್ಥಳ ಎನ್ನುತ್ತಾರೆ. ಇಲ್ಲಿ ಗಂಗೋತ್ರಿ ಮಂದಿರ (ಭಗೀರಥನು ಕುಳಿತು ತಪಸ್ಸು ಮಾಡಿದ ಶಿಲೆ)ಯೂ ಇಲ್ಲಿ ಪ್ರಸಿದ್ಧವಾಗಿದೆ. ಗಂಗೋತ್ರಿಯಲ್ಲಿ ಪಚ್ಚಾಗಿ ಪಂಡಾಗಳು, ಪೂಜಾರಿಗಳು, ಕೆಲವು ಅಂಗಡಿಗಳು, ಯೋಗಿಗಳು, ಸಂನ್ಯಾಸಿಗಳು ಕಾಣಸಿಗುತ್ತಾರೆ.

ಯಮುನೋತ್ರಿಯು ಸಮುದ್ರಮಟ್ಟಕ್ಕೆ ೪,೪೨೧ ಮೀಟರು ಎತ್ತರದಲ್ಲಿದೆ. ಯಮುನೋ–ತ್ರಿಯು 'ಬದೇರ್ ಪುಂಚ್' ಎನ್ನುವ ಶಿಖರದಲ್ಲಿರುವುದರಿಂದ ಇಲ್ಲಿ ಯಾವಾಗಲೂ ಹಿಮ ಇರುತ್ತದೆ. ಇಲ್ಲಿ ಯಮುನಾಜಿಯ ದೇವಸ್ಥಾನ ಮುಖ್ಯವಾದದು. ಹತ್ತಿರವೇ ಬಿಸಿನೀರಿನ ಕೊಳಗಳಿವೆ ಇವುಗಳಲ್ಲಿ ಸೂರ್ಯಕುಂಡ ಮುಖ್ಯವಾದ ಕೊಳ. ಭಕ್ತಾದಿಗಳು ಅಕ್ಕಿ, ಮತ್ತು ಆಲೂಗಡ್ಡೆಗಳನ್ನು ಬಟ್ಟೆಯಲ್ಲಿ ಕಟ್ಟಿ ಮುಳುಗಿಸಿ ಸ್ವಲ್ಪ ಹೊತ್ತಿನ ನಂತರ ಬೆಂದ ಅಕ್ಕಿ ಮತ್ತು ಆಲೂಗಡ್ಡೆಯನ್ನು ಪ್ರಸಾದವೆಂದು ತೆಗೆದುಕೊಂಡು ಹೋಗುತ್ತಾರೆ ಇಲ್ಲಿನ ವಾತಾವರಣ ಮತ್ತು ದೃಶ್ಯ ರಮಣೀಯ.

ಉತ್ತರ ಪ್ರದೇಶದ ನೋಡಬೇಕಾದ



ಹೃಷಿಕೇಶದ ಗೀತಾಭವನ

ಇನ್ನೊಂದು ಸ್ಥಳ ಡೆಹರಾಡೂನ್. ಹರಿದ್ವಾರ ದಿಂದ ರೈಲುಮಾರ್ಗವಾಗಿ ೫೨ ಕಿಲೊಮೀಟರ್ ದೂರದಲ್ಲಿದೆ ಇಲ್ಲಿ ಇಂಡಿಯಾದಲ್ಲೇ ದೊಡ್ಡ ದೆನಿಸಿದ ಮಿಲಿಟರಿ ಅಕಾಡೆಮಿ ಮತ್ತು ಇಡೀ ವಿಶ್ವದಲ್ಲೇ ಪ್ರಸಿದ್ಧವಾದ ಫಾರೆಸ್ಟ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಇವೆ. ಡೆಹರಾಡೂನಿನಿಂದ ಬಸ್ಸಿನ ಮೂಲಕ ೩೫ ಕಿಲೊಮೀಟರ್ ದೂರದಲ್ಲಿರುವ 'ಮಸೂರಿ' (ಗಿರಿಧಾಮ) ನೋಡಬೇಕಾದ ಸ್ಥಳ. ೮೫೭೮ ಅಡಿ ಎತ್ತರದಲ್ಲಿರುವ 'ಲಾಲ್ ಟಿಬ್ಬ'ದಿಂದ ಕೇದಾರನಾಥ, ಬದರೀನಾಥ ಮತ್ತು ನಂದಾದೇವಿ ಹಿಮಾಲಯದ ಪರ್ವತ ಶಿಖರಗಳನ್ನು ನೋಡ ಬಹುದು. ಮಸ್ಸೂರಿ ಸಮುದ್ರ ಮಟ್ಟಕ್ಕಿಂತ ೬೫೮೦ ಅಡಿ ಎತ್ತರದಲ್ಲಿದೆ. ಇಲ್ಲಿ ಬೇಸಿಗೆಯಲ್ಲೂ ಮಳೆ, ಬಿಸಿಲುಗಳಿರುತ್ತವೆ.

ಉತ್ತರ ಪ್ರದೇಶದ ಮತ್ತೊಂದು ಗಿರಿಧಾಮ ನೈನಿತಾಲ್. ದಿಲ್ಲಿಯಿಂದ ೪೦೦ ಕಿಲೊಮೀಟರ್ ದೂರದಲ್ಲಿದೆ. ಇಲ್ಲಿ ನೈನಿದೇವಿಯ ಮಂದಿರ ವಿರುವುದರಿಂದಲೇ ಈ ಊರಿಗೆ 'ನೈನಿತಾಲ್' (ತಾಲ್ ಎಂದರೆ ಸರೋವರ) ಎಂಬ ಹೆಸರು ಬಂದಿರಬಹುದು. ಈ ಸ್ಥಳದ ವೈಶಿಷ್ಟ್ಯವೇನೆಂದರೆ, ಊರಿನ ಮಧ್ಯಭಾಗದಲ್ಲಿ ಸರೋವರ. ಸುತ್ತಲೂ ಪರ್ವತಗಳು. ಈ ಪರ್ವತದ ಬುಡದಲ್ಲೇ ಊರು ನೆಲೆಸಿದೆ. (ಇದು ಸಮುದ್ರ ಮಟ್ಟಕ್ಕಿಂತ ೬೩೫೦ ಅಡಿ ಎತ್ತರದಲ್ಲಿದೆ) ಇಲ್ಲಿನ ಪರ್ವತದ ಎತ್ತರ ಸುಮಾರು ೭೦೦೦ ಅಡಿಯಿಂದ ೮೫೦೦ ಅಡಿಗಳು. ಈ ಪರ್ವತದಲ್ಲಿ ಅಲ್ಲಲ್ಲಿ ಸರೋವರಗಳನ್ನು ಕಾಣಬಹುದು. ಈ ಪರ್ವತ ಗಳಲ್ಲಿ ಎತ್ತರವಾದ ಪರ್ವತ, 'ಚೈನಾ ಪೀಕ್'. ಇದು ಭೂಮಿಗಿಂತ ೮೫೬೮ ಅಡಿ ಎತ್ತರ ದಲ್ಲಿದೆ. ನೈನಿತಾಲ್‌ದಿಂದ ಈ ಗಿರಿಶಿಖರಕ್ಕೆ ಹೋಗಲು ೫॥ ಕಿಲೊಮೀಟರ್ ದೂರದ ಕಾಲುದಾರಿ ಇದೆ. ಬೇಸಿಗೆಯಲ್ಲಾದರೆ ಪ್ರಯಾ-ಣಕ್ಕೆ ಕುದುರೆಯೂ ಬಾಡಿಗೆಗೆ ದೊರೆಯುತ್ತದೆ. ಈ ಚೈನಾ ಗಿರಿಶಿಖರದ ತುದಿಯಲ್ಲಿ ಒಂದು ಸಣ್ಣ ಮರದ ಮನೆ ಇದೆ. ಅಲ್ಲಿ ನಿಂತು ನೋಡಿದಾಗ, ಹಿಮಾಲಯ ಹತ್ತಿಯ ಪರ್ವತದಂತೆ ಕಾಣುತ್ತದೆ.

ಕೃಷ್ಣನು ಹುಟ್ಟಿ ಕಂಸನನ್ನು ಧ್ವಂಸಮಾಡಿದ ಸ್ಥಳವಾದ ಮಥುರಾ ನಗರವು ದಿಲ್ಲಿಯಿಂದ ೧೪೫ ಕಿಲೊಮೀಟರ್ ದೂರದಲ್ಲಿ ಯಮುನಾ ನದಿಯ ದಡದಲ್ಲಿದೆ. ಕೃಷ್ಣನು ಬಾಲ್ಯವನ್ನು ಕಳೆದ ಬೃಂದಾವನವೂ ಈ ಪಟ್ಟಣದ ಸಮೀಪ ದಲ್ಲಿದೆ. ಮಥುರಾ ಮತ್ತು ಬೃಂದಾವನ ದಲ್ಲಿ ಕೃಷ್ಣನ ಬಾಲಲೀಲೆಯನ್ನು ನೆನಪಿಗೆ ತರುವ ಅನೇಕ ಬೃಹದಾಕಾರದ ಮಂದಿರಗಳನ್ನು ಕಾಣಬಹುದು. ಇವರಲ್ಲಿ ಕೆಲವು ಮಂದಿರಗಳು ಪುರಾಣದಲ್ಲಿ ವರ್ಣಿಸಿರುವ ನಿಜವಾದ ಸ್ಥಳಗಳೇ ಎಂಬ ಸಂಶಯ ಬಂದಲ್ಲಿ ಆಶ್ಚರ್ಯವಿಲ್ಲ! ಇಲ್ಲಿನ ದ್ವಾರಕಾಧೀಶ ಮತ್ತು ದಕ್ಷಿಣ ಭಾರತದ ಮಾದ ರಿಯ 'ರಂಗಾಜಿ' ಮಂದಿರಗಳು ವಿಶಾಲವಾಗಿವೆ. ಇದಲ್ಲದೆ ಈಗ ಹರೆಕೃಷ್ಣ ಮಂದಿರವೂ ತಲೆ ಯೆತ್ತಿದೆ. ಬೃಂದಾವನದಲ್ಲಿ ೬ ವರ್ಷಕ್ಕೊಮ್ಮೆ ಕುಂಭಮೇಳ ನಡೆಯುತ್ತದಲ್ಲದೆ ಕೃಷ್ಣ ಜನ್ಮಾಷ್ಟ-ಮಿಯ ೧೫ ದಿನದ ಮೊದಲು ಇಲ್ಲಿ ಬೆಳ್ಳಿ ಮತ್ತು ಚಿನ್ನದ 'ತೊಟ್ಟಿಲ ಮೇಳ' (ಝೂಲಾ ಮೇಳ) ಅಷ್ಟಮಿಯಂದು ವಿಜೃಂಭಣೆಯಿಂದ ಮುಕ್ತಾಯವಾಗುತ್ತದೆ. ಆ ಸಮಯದಲ್ಲಿ ಇಲ್ಲಿನ ಮುಖ್ಯ ಮಂದಿರದಲ್ಲಿ ಬಾಲಕರು ಕೃಷ್ಣನ ವೇಷ ಧಾರಿಗಳಾಗುತ್ತಾರೆ. ಹಗಲಿರುಳು ಪೂರ್ತಿ ಕೃಷ್ಣಾವತಾರ ನೃತ್ಯ ಜೊತೆಗೆ ಕೃಷ್ಣನ ಬಾಲ ಲೀಲೆಯನ್ನು ಕುರಿತು ಕೀರ್ತನೆಯೂ ನಡೆಯು ತ್ತಿರುತ್ತದೆ. ಉತ್ತರ ಪ್ರದೇಶದ ಇನ್ನೊಂದು ಮುಖ್ಯ ಸ್ಥಳವಾದ 'ಗೋವರ್ಧನ ಬೆಟ್ಟವು' ಮಥುರಾದಿಂದ ೨೨ ಕಿಲೊಮೀಟರ್ ದೂರ ದಲ್ಲಿದೆ. ಇಲ್ಲಿ ಕೃಷ್ಣ, ಇಂದ್ರನು ಉತ್ಪಾದಿಸಿದ ಬಿರುಕಿಯ ಮಳೆಯಿಂದ ಜನರನ್ನು ಕಾಪಾಡಲು ಗಿರಿಧಾರಿಯಾದನಂತೆ.

ಉತ್ತರ ಪ್ರದೇಶವನ್ನು ಹಿಂದೆ ಮುಸಲ್ಮಾನರೂ ಆಳಿದ್ದರಿಂದ ಇಲ್ಲಿ ಹಲವಾರು ಸ್ಥಳಗಳು ಮುಸಲ್ಮಾನರಿಗೂ ಯಾತ್ರಾ ಸ್ಥಳಗಳಾಗಿವೆ. ಶಹಾಜಹಾನನು ತನ್ನ ಅರಸಿ ಮುಮತಾಜಳ ಪ್ರೇಮದ ಕುರುಹಾಗಿ ಕಟ್ಟಿಸಿದ ತಾಜಮಹಲ್ ಇವುಗಳಲ್ಲಿ ಪ್ರಸಿದ್ಧ. ಆಗ್ರಾದಲ್ಲೇ ಅಕಬರನ ಸ್ಥಳವಾದ ಸಿಕಂದರ್ ಮಸೋಲಿಯಂ ಇದೆ.

ಗಂಗಾನದಿ ದಡದಲ್ಲಿರುವ ಮತ್ತೊಂದು ನಗರ ಕಾನ್ಪುರ ದಿಲ್ಲಿಯಿಂದ ೨೬೦ ಕಿಲೊಮೀಟರ್ ದೂರದಲ್ಲಿದೆ. ಈ ನಗರವು ಚರ್ಮದ ಸಾಮಾನಿಗೆ

ತುಂಬಾ ಪ್ರಸಿದ್ಧ. ಬಿಳಿ ಶಿಲೆಯಿಂದ ಕಟ್ಟಿರುವ ರಾಧಾಕೃಷ್ಣನ ಮಂದಿರವಿದೆ.

ಕಾನ್ಪುರದಿಂದ ೨೭ ಕಿಲೊಮೀಟರ್ ದೂರದಲ್ಲಿರುವ ಬಿಠೂರ್ ಗಂಗಾನದಿಯ ತೀರದಲ್ಲಿದೆ. ಇದು ಬ್ರಹ್ಮನು ಪೃಥ್ವಿಯನ್ನು ಸೃಷ್ಟಿಸಿದ ನಂತರ ಯಜ್ಞಮಾಡಿದ ಸ್ಥಳ ಎಂದದು ಪ್ರತೀತಿ ಇದೆ. ಈ ಸ್ಥಳಕ್ಕೆ ಬ್ರಹ್ಮಾವೃತ್ತ ಎಂತಲೂ ಕರೆಯುತ್ತಾರೆ. ರಾಮಾಯಣವನ್ನು ರಚಿಸಿದ ವಾಲ್ಮೀಕಿಯ ವಾಸಸ್ಥಳವೂ ಇದೇ ಎಂದು ಹೇಳುತ್ತಾರೆ. ಇಲ್ಲಿ ವಾಲ್ಮೀಕಿ ಮಂದಿರವಿದೆ. ರಾಮನು ಗರ್ಭವತಿಯಾದ ಸೀತೆಯನ್ನು ಕಾಡಿಗೆ ಅಟ್ಟಿದ ನಂತರ ಸೀತೆಯು ಈ ಬಿಠೂರಲ್ಲೇ ಲವ-ಕುಶರಿಗೆ ಜನ್ಮವನ್ನು ನೀಡಿದ್ದಳೆಂಬುದು ಜನರ ನಂಬಿಕೆ.

ಉತ್ತರ ಪ್ರದೇಶದ ರಾಜಧಾನಿಯಾದ ಲಖನೌ ಗೋಮತಿ ನದಿಯ ದಡದಲ್ಲಿ ಕಾನ್ಪುರದಿಂದ ೭೭ ಕಿಲೊಮೀಟರ್ ದೂರದಲ್ಲಿದೆ. ಮುಸಲ್ಮಾನರ ಈ ಲಕ್ನೋವನ್ನು ಹಿಂದೆ ಆಳಿಕೆಯಲ್ಲಿ ಕಟ್ಟಿದ ಅನೇಕ ಕಟ್ಟಡಗಳನ್ನು ನಾವು ಇಲ್ಲಿ ನೋಡಬಹುದು. ಇದರಲ್ಲಿ "ಬಡಾ ಇಮಾಂಬರಾ" (ಈ ಕಟ್ಟಡ ಉಪ್ಪರಿಗೆಯಲ್ಲಿ ಒಂದಕ್ಕೊಂದು ಸೇರಿಕೊಂಡಿರುವ ಓಣಿಗಳಲ್ಲಿ, ಒಂದು ಸಲ ಒಳ ಹೊಕ್ಕರೆ ಮತ್ತೆ ಹೊರ ಬರಲು ದಾರಿ ಸಿಗದೆ ಅವಸ್ಥೆಪಡಬೇಕಾಗುತ್ತದೆ. ಇದನ್ನು "ಭೂಲ್ ಭುಲಯ್ಯಾ" ಎಂದೂ ಹೇಳುತ್ತಾರೆ.) ಛೋಟಾ ಇಮಾಂಬಾರ, ಹುಸೇನಾಬಾದ ಇಮಾಂಬರ ರೆಸಿಡೆನ್ಸಿ ಮತ್ತು ಕೌನ್ಸಿಲ್ ಹೌಸ್ ಎಲ್ಲಾ ನೋಡಲು ಆಕರ್ಷಣೀಯವಾಗಿವೆ. ಇಲ್ಲಿ ಹಜರತ್‌ಗಂಜ್ ಮತ್ತು ಅಮೀನಾಬಾಗ್ ಮುಖ್ಯ ಬಜಾರಗಳು ಹತ್ತಿರವೇ ಬೊಟಾನಿಕಲ್ ಗಾರ್ಡನ್ ಇದೆ. ಲಖನೌ ಕಸೂತಿ ಕೆಲಸದ ಮುಖ್ಯ ಕೇಂದ್ರ.



ಬಡಾ ಇಮಾಂಬರಾ ಮಸೀದೆ

ಶ್ರೀರಾಮಚಂದ್ರನ "ಅಯೋಧ್ಯೆ"ಯೂ ಲಖನೌದಿಂದ ೧೩೫ ಕಿಲೊಮೀಟರ್‌ದಲ್ಲಿದೆ. ಸಾಮಾನ್ಯ ದಿನಗಳಲ್ಲಿ ಅಯೋಧ್ಯೆಗೆ ಭೆಟ್ಟಿ ಕೊಟ್ಟರೆ, ಎಲ್ಲಿ ನೋಡಿದರೂ ಬೃಹದಾಕಾರದ ಖಾಲಿ ಕಟ್ಟಡಗಳು. ರಾಮನವಮಿ ಮತ್ತಿತರ ವಿಶೇಷ ದಿನಗಳಲ್ಲಿ ಬೇರೆ ಕಡೆಗಳಿಂದ ಬಂದ ಜನರು ಈ ಕಟ್ಟಡಗಳಲ್ಲಿ ತಂಗುತ್ತಾರೆ. ಇಲ್ಲಿ ಸುಮಿತ್ರಾ ಭವನ, ಕೌಸಲ್ಯಾ ಭವನ, ಕೈಕೆಯಿ ಭವನ, ಮಂಥರಾ ಭವನ, ಮತ್ತು ದಶರಥ ಭವನ ಹೀಗೆ ಹಲವಾರು ಫಲಕಗಳನ್ನು ಹೊತ್ತು ನಿಂತಿರುವ ಈ ಬೇರೆ ಬೇರೆ ಕಟ್ಟಡಗಳನ್ನು ನೋಡಲು ಒಳಗೆ ಹೋಗುವಾಗ ಮನಸ್ಸು ಅಳುಕುತ್ತದೆ. ಇದೇ ಏನು ರಾಮಾಯಣದಲ್ಲಿ ಬರುವ ರಾಮರಾಜ್ಯ ಎಂಬ ನಿರಾಶೆಯೂ ಉಂಟಾಗುತ್ತದೆ. ಇಲ್ಲಿ ಹನುಮಾನ್ ಮಂದಿರ, ಕನಕಭವನ, ರಾಮನ ಜನ್ಮಭೂಮಿ ಮತ್ತು ಜೈನ ಮಂದಿರಗಳು ನೋಡುವಂಥವು.

ಕಾನ್ಪುರದಿಂದ ೧೯೨ ಕಿಲೊಮೀಟರ್ ದೂರದಲ್ಲಿರುವ ಅಲಹಾಬಾದ್, ತೀರ್ಥಗಳಲ್ಲೇ ರಾಣಿ ಎನಿಸಿದ ಗಂಗೆ ಮತ್ತು ಯಮುನಾ ನದಿಗಳ ಸಂಗಮಸ್ಥಳ

ದಲ್ಲಿದೆ. ಅಲಹಾಬಾದ ಅಥವಾ ಪ್ರಯಾಗವು ಕೇವಲ ಮೂರು ನದಿಯ ಸಂಗಮದಿಂದಲೇ ಪ್ರಸಿದ್ಧಿಯಾಗಿದೆ. ನೀಲಿ ಬಣ್ಣದ ಗಂಗಾ ಮತ್ತು ಕಣ್ಣಿಗೆ ಕಾಣದ ಸರಸ್ವತಿ ನದಿಗಳ ಮಿಲನವೇ ತ್ರಿವೇಣಿ ಸಂಗಮ. ಈ ತ್ರಿವೇಣಿ ಸಂಗಮದ ದಡದಲ್ಲೇ ಭಾರತದಲ್ಲಿ ಅತಿ ದೊಡ್ಡ "ಕುಂಭಮೇಳವು" ಪ್ರತಿ ೧೨ ವರ್ಷಕ್ಕೊಮ್ಮೆ ಇಲ್ಲಿ ನಡೆಯುವುದು. ಅಲಹಾಬಾದ್ ವಿಶ್ವವಿದ್ಯಾಲಯಕ್ಕೂ ಪ್ರಸಿದ್ಧವಾಗಿದೆ.

"ಕಾಶೀ ಯಾತ್ರೆ ಮಾಡುತ್ತೇನೆ" ಎಂದು ಬರಿ ಬಾಯಿಂದ ಹೇಳಿದರೆ ಸಾಕು, ಕಾಶೀ ಯಾತ್ರೆ ಮಾಡಿದಷ್ಟು ಪುಣ್ಯ ಲಭಿಸುತ್ತದೆ ಎಂದು ಹಿಂದೂ ಧರ್ಮದ ಒಂದು ನಂಬಿಕೆಯಿದೆ. ಇಂತಹ ಪವಿತ್ರವಾದ ಮತ್ತು ಪ್ರಸಿದ್ಧವಾದ ಕಾಶಿ ಪಟ್ಟಣವು ಅಲಹಾಬಾದಿನಿಂದ ೧೨೩ ಕಿಲೊಮೀಟರ್ ದೂರದಲ್ಲಿ ಗಂಗಾನದಿ ದಡದಲ್ಲಿದೆ.

ಹಿಂದಿನ ಕಾಲದಲ್ಲಿ ಕಾಶಿಯಾತ್ರೆ ಬಹು ಕಷ್ಟಕರವಾಗಿತ್ತು. ಈಗ ಹಣವೊಂದಿದ್ದರೆ ಸಾಕು ಕಾಶಿ ಯಾತ್ರೆ ತುಂಬಾ ಸರಳ.

ಕಾಶಿ ಅಥವಾ ಬನಾರಸ್ ಅಥವಾ ವಾರಾಣಸಿ ರೈಲು ನಿಲ್ದಾಣದಲ್ಲಿ ಇಳಿದಾಗ, ಇಲ್ಲಿ ಸಾಮಾನ್ಯವಾಗಿ ಪಂಡಾಗಳು ಬೆಲ್ಲಕ್ಕೆ ಇರುವೆ ಮುತ್ತಿದಂತೆ ನಿಮಗೆ ಮಾರ್ಗದರ್ಶಕರಾಗುತ್ತೇವೆ ಎಂದು ಬರುತ್ತಾರೆ. ಅದಲ್ಲದೆ ರಿಕ್ಷಾವಾಲಾಗಳೂ ಸಹ ಇಂತಿಂತಹ ಧರ್ಮಶಾಲೆ ಒಳ್ಳೆಯದೆಂದು ಹೇಳುತ್ತಾರೆ. ಅವರಿಗೆ ಕಮೀಶನ್ ಸಿಗುವದರಿಂದ, ನಿಮ್ಮನ್ನು ಒಳ್ಳೇ ಧರ್ಮಶಾಲೆಗೆ ಕರೆದುಕೊಂಡು ಹೋಗುತ್ತೇನೆ ಎನ್ನುತ್ತಾರೆ. ನಾವು ಕಾಶಿಯಲ್ಲಿ ಇಂತಹ ಕಡೆ ತಂಗುತ್ತೇವೆಂದು ಹೆಸರು ಹೇಳಿದರೆ ಸಾಕು, "ಉಧರ್‌ಕೋ ಆಪ್‌ಕೋ ಆಜ್ ಜಾಗಾ ನಹೀ ಮಿಲತೀ ಹೈ. ಶಾದಿವಾಲೊಂಸೆ ಸಬ್ ಭರ್ತಿ ಹೋಗಯಾ ಹೈ" ಎಂದು ಸುಳ್ಳು ಸುಳ್ಳೇ ಹೇಳಿ ಒಮ್ಮೊಮ್ಮೆ ತಕರಾರು ಮಾಡುವದೂ ಉಂಟು. ಕಾಶಿಯಾತ್ರೆ ಮಾಡಲು ಬಂದವರು ಇಲ್ಲಿ ಸ್ವಲ್ಪ ಗಡುಸಿನವರಾಗಿದ್ದರೆ ಪರವಾಗಿಲ್ಲ. ಕಾಶಿಯಲ್ಲಿ ಉಳಿದುಕೊಳ್ಳಲು ಒಳ್ಳೆಯ ಹೋಟಲುಗಳು, ದಕ್ಷಿಣಾದಿಗಳ ಮಠ, ಗೆಸ್ಟ್‌ಹೌಸ್, ಧರ್ಮಶಾಲೆ ಎಲ್ಲಾ ಇವೆ.

ಹಿಂದೆ ಶಿವ ಅಥವಾ ವಿಶ್ವನಾಥನು ತನ್ನ ವಿವಾಹದ ನಂತರ ಕೈಲಾಸದಿಂದ ಕಾಶಿಗೆ ಬಂದು ನೆಲೆಸಿದನೆಂದು ಪ್ರತೀತಿ.

ಇಲ್ಲಿನ ಗಂಗಾನದಿಯ ದಡದಲ್ಲಿ ಸ್ನಾನ ಮಾಡಲು ಲೆಕ್ಕವಿಲ್ಲದಷ್ಟು ಘಾಟ್‌ಗಳಿವೆ. ಇವುಗಳಲ್ಲಿ ಮುಖ್ಯವಾಗಿ ಐದು ಘಾಟಗಳು ಪ್ರಸಿದ್ಧ.

ಅಶ್ವಮೇಧ ಘಾಟಿನಲ್ಲಿ ಹಿಂದೆ ಲೋಕಸೃಷ್ಟಿಕರ್ತನಾದ ಬ್ರಹ್ಮನು ಹತ್ತು ಅಶ್ವಮೇಧಯಾಗಗಳನ್ನು ಮಾಡಿದನಂತೆ. ಆದ್ದರಿಂದ ಇದಕ್ಕೆ ಈ ಹೆಸರು ಬಂತು ಎಂದು ಹೇಳುತ್ತಾರೆ. ಮಣಿಕರ್ಣಿಕಾ ಘಾಟಿನಲ್ಲಿ ಒಂದು ಸಣ್ಣ ಬಾವಿ ಇದೆ. ಅದರಲ್ಲಿ ಹಿಂದೆ ಪಾರ್ವತಿಯ ಕಿವಿಯ ಆಭರಣ ಬಿದ್ದು ಹೋಯಿತಂತೆ. ಈ ಘಾಟಿನಲ್ಲಿ ಹೆಚ್ಚಾಗಿ ತಾಳೆ ಗರಿಯ ಕೊಡೆಗಳು ಇರುತ್ತವೆ. ಇನ್ನೊಂದು ಮುಖ್ಯವಾದುದು ಹರಿಶ್ಚಂದ್ರ ಘಾಟ. ಇಲ್ಲಿ ಹಿಂದೆ ಹರಿಶ್ಚಂದ್ರನು ಸತ್ಯಕ್ಕೋಸ್ಕರ ತನ್ನ ಹೆಂಡತಿ ಮಗನನ್ನು ಮಾರಿದುದಲ್ಲದೆ ಸತ್ತ ಮಗನ ಹೆಣ ಸುಡಲು ಅಸಹಾಯಳಾದ ತನ್ನ ಹೆಂಡತಿಯಿಂದಲೇ ಹಣವನ್ನು ವಸೂಲು ಮಾಡಿದ ಎಂದು ಹೇಳುತ್ತಾರೆ. ಇಲ್ಲಿ ಈಗಲೂ ಹೆಣ ಸುಡುವದನ್ನು ಕಾಣಬಹುದು. ಇನ್ನೊಂದು ಮುಖ್ಯ ಘಾಟ್ ಪಂಚಗಂಗಾ. ಇಲ್ಲಿ ಐದು ನದಿಗಳ (ತೀರ್ಥಗಳು) ಮಿಲನವಾಗುತ್ತದೆ ಎನ್ನುತ್ತಾರೆ. ಹನುಮಾನ್ ಮತ್ತು ಮೈಸೂರು ಘಾಟುಗಳು ಇಲ್ಲಿ ಒಂದಕ್ಕೊಂದು ಅಂಟಿಕೊಂಡಂತೆ, ಒಂದರ ಪಕ್ಕದಲ್ಲಿ ಒಂದಿದೆ. ಇಲ್ಲಿ ಹೆಚ್ಚಾಗಿ ಮೈಸೂರಿನವರೇ ಸ್ನಾನ ಮಾಡಲು ಬರುತ್ತಾರೆ. ಇಲ್ಲಿನ ದಡದ ಮೇಲೆ ಮೈಸೂರು ಹೌಸ್ (ಧರ್ಮಶಾಲೆ) ಇದೆ. ಮತ್ತು ಮೈಸೂರಿನವರ ಮಠವೂ ಇದೆ. ಇಲ್ಲಿ ಹೆಚ್ಚಾಗಿ ನೆಲೆಸಿದವರೆಲ್ಲಾ ದಕ್ಷಿಣದವರೇ. ಇಲ್ಲಿನ ಹೋಟೆಲಿನಂತಿರುವ ಮನೆಗಳಲ್ಲಿ ಇಡ್ಲಿ, ಸಾಂಬಾರ್, ದೋಸೆ (ಮತ್ತು ಕಾಫಿ) ಮಾಡುತ್ತಿದ್ದರೆ ನಾವು ದಕ್ಷಿಣದಲ್ಲೇ ಇರುವೆವೇನೋ ಎನ್ನುವ ಭಾವನೆ ಉಂಟಾಗುತ್ತದೆ.

ಕಾಶಿಯು ವಿಶ್ವನಾಥನಿಂದಲೇ ಪ್ರಸಿದ್ಧವಾಗಿದೆ ಎನ್ನಬಹುದು. ಈ ದೇವಾಲಯದ ಸುತ್ತಲೂ ದೇವರ ಸಾಮಾನು, ಹೂ, ಸಿಹಿ ತಿಂಡಿ, ಮಕ್ಕಳ ಆಟದ ಸಾಮಾನು, ಬಟ್ಟೆಗಳು ಹೀಗೆ ಎಲ್ಲ ವಿಧದ ಅಂಗಡಿಗಳಿವೆ. ದೇವಸ್ಥಾನಕ್ಕೆ ಹೋಗಬೇಕಾದರೆ ಈ ಅಂಗಡಿಗಳ ಮುಖಾಂತರವೇ ತುಂಬಾ ಇಕ್ಕಟ್ಟಾದ



ಲಖನೌನ ವಿಧಾನ ಮಂಡಳದ ಕಟ್ಟಡ

ಗಲ್ಲಿಯಲ್ಲಿ ಹೋಗಬೇಕು. ಈ ಗಲ್ಲಿಗೆ ವಿಶ್ವನಾಥ ಗಲ್ಲಿ ಎಂದು ಹೆಸರು. ದೇವಸ್ಥಾನದ ಸುತ್ತಮುತ್ತಲೂ ಕಾಲಿಟ್ಟರೆ ಜಾರುವಂತಿರುತ್ತದೆ. ಅಷ್ಟು ಗಲೀಜು. ಈ ದೇವಾಲಯವನ್ನು ನೋಡಿದ ಮೇಲೆ ಏಕಾದರೂ ನಮ್ಮ ಹಿಂದೂ ಶಾಸ್ತ್ರದಲ್ಲಿ ಈ ಕಾಶಿಯನ್ನು ಪವಿತ್ರ ಎಂದು ಮಾಡಿದರು ಎನ್ನುವ ಭಾವನೆ ಬಾರದೇ ಇರದು. ದೇವಸ್ಥಾನದ ಒಳ ಹೋಗಲು ಒಂದು ಹೆಬ್ಬಾಗಿಲಿದೆ. ಅದನ್ನು ದಾಟಿದರೆ ಅಂಗಳ, ಈ ಅಂಗಳದ ಸುತ್ತಲೂ ಹಲವಾರು ದೇವರು ತುಂಬಿದ ಜಗುಲಿ. ಮಧ್ಯಭಾಗದಲ್ಲಿ ಒಂದು ಕೋಣೆ ಈ ಕೋಣೆಗೆ ನಾಲ್ಕು ದಿಕ್ಕಿನಲ್ಲೂ ನಾಲ್ಕು ಬಾಗಿಲಿವೆ. ಈ ಕೋಣೆಯಲ್ಲಿ ಒಂದು ಕಡೆಯಲ್ಲಿ ಚೌಕಾಕಾರದ ತೊಟ್ಟಿ ಇದೆ. ಇದರಲ್ಲೇ ಶಿವಲಿಂಗ ಇರುವುದು. ಇದೇ ವಿಶ್ವನಾಥ. ವಿಶ್ವೇಶ್ವರ ಎಂದು ನಾನಾ ಹೆಸರಿನಿಂದ ಕರೆಯುದ್ದಾರೆ. ಇಲ್ಲಿ ಬೆಳಗಿನಿಂದ ಮಧ್ಯಾಹ್ನದ ವರೆಗೆ ಜಾತಿಭೇದ, ಮಡಿ ಮೈಲಿಗೆ ಇಲ್ಲದೆ ಸಾವಿರಾರು ಯಾತ್ರಿಕರು, ಭಕ್ತಾದಿಗಳು ಗಂಗೆಯಲ್ಲಿ ಮಿಂದು, ವಿಶ್ವನಾಥನಿಗೆ ಗಂಗಾಜಲದಿಂದ ಅಭಿಷೇಕ ಮಾಡಿ ಹೋಗುತ್ತಾರೆ. ಇಲ್ಲಿ ಸಾಮಾನ್ಯವಾಗಿ ಯಾವಾಗಲೂ ನೂಕುನುಗ್ಗಲು. ಒಂದು ಬಾಗಿಲಿನಿಂದ ಭಕ್ತರು ಬಂದು, ದೇವರಿಗೆ ಅಭಿಷೇಕ ಮಾಡಿ ಇನ್ನೊಂದು ಬಾಗಿಲಿನ ಮುಖಾಂತರ ಹೊರಗೆ ಹೋಗುತ್ತಾರೆ. ಈ ಕೋಣೆಯ ಮೇಲ್ಭಾಗದಲ್ಲಿರುವ ಗೋಪುರವು ಚಿನ್ನದ ಗೋಪುರ ಎಂದು ಪ್ರಸಿದ್ಧಿಯಾಗಿದೆ.

ಇಲ್ಲಿ ದೇವರಿಗೆ ಹೂ ಮತ್ತು ಸಿಹಿ ತಿಂಡಿಗಳನ್ನು ಮಾತ್ರ ಶಿವಲಿಂಗದ ಮೇಲೆ ಇಟ್ಟು ಇದೇ ಪ್ರಸಾದ ಎಂದು ಸ್ವೀಕರಿಸುತ್ತಾರೆ. ಇಲ್ಲಿ ದಕ್ಷಿಣದವರಂತೆ ತೆಂಗಿನಕಾಯಿ ಒಡೆಯುವ ಕ್ರಮವಿಲ್ಲ. ಪಕ್ಕದಲ್ಲೊಂದು ಮುಸಲ್ಮಾನರ ಮಸೀದೆ ಇದೆ. ಈ ಮಸೀದೆ ಇದ್ದ ಸ್ಥಳದಲ್ಲೇ ಹಿಂದೆ ವಿಶ್ವನಾಥ ದೇವಾಲಯವಿತ್ತೆನ್ನುತ್ತಾರೆ. ೧೨ನೇ ಶತಮಾನದಲ್ಲಿ ಮುಸಲ್ಮಾನರ ಆಕ್ರಮಣದಲ್ಲಿ ಅಲ್ಲಿನ ಶಿವಲಿಂಗವನ್ನು ತೆಗೆದು ಅಲ್ಲೇ ಹತ್ತಿರವಿರುವ ಬಾವಿಯಲ್ಲಿ (ಈಗ ಅದನ್ನು ಮುಚ್ಚಿ ಅದರ ಮೇಲೆ ಬಟ್ಟೆ ಕಟ್ಟಿದ್ದಾರೆ. ಅದರ ಮೇಲೆ ಕೆಲವರು

ಮೂಢ ನಂಬಿಕೆಯಿಂದ ಕಾಸು ಎಸೆಯುತ್ತಾರೆ) ಹಾಕಿ, ಮಂದಿರವನ್ನು ಕೆಡವಿ ಮಸೀದೆಯನ್ನು ಕಟ್ಟಿಕೊಂಡರಂತೆ. ೧೮ನೇ ಶತಮಾನದಲ್ಲಿ ಇಂದೂರಿನ ಮಹಾರಾಣಿಯಾದ ಅಹಲ್ಯಾಬಾಯಿಯು ಈಗಿರುವ ದೇವಸ್ಥಾನವನ್ನು ಕಟ್ಟಿಸಿದಳಂತೆ. ಬಾವಿಯಲ್ಲಿನ ಶಿವಲಿಂಗವನ್ನು ಈ ದೇವಾಲಯದಲ್ಲಿ ಪ್ರತಿಷ್ಠಾಪಿಸಿದ್ದಾರೆ. ಇಲ್ಲಿ ಪ್ರತಿ ದಿವಸವೂ ತುಂಬಾ ತಡವಾಗಿ ದೇವರಿಗೆ ಪೂಜೆಯಾಗುತ್ತದೆ. ಆ ಸಮಯದಲ್ಲಿ ಇಲ್ಲಿಯವರು ದೇವರಿಗೆ ಮಾಡುವ ಆರತಿ, ಮಂತ್ರ ನೋಡಿ ಕೇಳಲು ಬೇರೆ ಬೇರೆ ರೀತಿಯೇ ಆಗಿರುತ್ತದೆ. ಇದಲ್ಲದೆ ಶಿವರಾತ್ರಿಯಲ್ಲಿ ಮತ್ತು ವಿಶೇಷ ದಿನಗಳಲ್ಲಿ ದೇವಸ್ಥಾನದಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಈ ಮಂದಿರದ ಹತ್ತಿರವೇ ಅನ್ನಪೂರ್ಣಾ ಮಂದಿರವೂ ಇದೆ. ಇಲ್ಲಿ ಪ್ರತಿ ದೀಪಾವಳಿಯಲ್ಲಿ ಮೂರು ದಿನ ಮಾತ್ರ ಚಿನ್ನದ ಅನ್ನಪೂರ್ಣೆಯ ವಿಗ್ರಹವನ್ನು ನೋಡಲು ಸಾಧ್ಯವಿದೆ.

ಕಾಶಿಯಲ್ಲಿ ಎಲ್ಲಿ ನೋಡಿದರೂ ಮಂದಿರಗಳೇ! ಇದರಲ್ಲಿ ತುಳಸಿ; ಮಾನಸ ಮಂದಿರ, ಬಿರ್ಲಾ ಮಂದಿರ, ದುರ್ಗಾ ಮಂದಿರ, ಭಾರತಮಾತಾ ಮಂದಿರಗಳು ನೋಡಲು ಮುಖ್ಯವಾದುದು.

ಗಂಗಾನದಿಗೆ ಅಭಿಮುಖವಾಗಿರುವ ಬನಾರಸ ಮಹಾರಾಜನ ಅರಮನೆಯೂ ನೋಡುವಂಥದು. ಈ ಸ್ಥಳಕ್ಕೆ "ರಾಮನಗರ" ಎಂದು ಹೇಳುತ್ತಾರೆ. ಇಲ್ಲೊಂದು ದುರ್ಗಾ ಮಂದಿರವೂ ಇದೆ.

ಉತ್ತರ ಭಾಗದ ಕಾಶಿಯಿಂದ ೮ ಕಿಲೋಮೀಟರ್ ದೂರದಲ್ಲಿ ಸಾರ್‌ನಾಥ್ ಇದೆ. ಇಲ್ಲಿರುವ ದೊಡ್ಡ ಮ್ಯೂಸಿಯಮ್ಮಿನಲ್ಲಿ ಅಶೋಕನ ಧರ್ಮಚಕ್ರವನ್ನು ಈಗಲೂ ನೋಡಬಹುದು. ಡೀಯರ್ ಪಾರ್ಕಿನಲ್ಲಿರುವ ಸುಮಾರು ೧೧೦ ಅಡಿ ಎತ್ತರದ "ಧಿಮಾಕ್" ಸ್ತೂಪವನ್ನು ಬೌದ್ಧರು ಕಟ್ಟಿದ್ದಾರೆ. ಇದರ ಹತ್ತಿರದಲ್ಲೇ ಮಹಾಬೋಧಿ ಸೊಸೈಟಿಯವರು ಕಟ್ಟಿರುವ ಮೂಲಗಂಧಿ ಕುಟಿ–ವಿಹಾರ್ ಮತ್ತು ಬೌದ್ಧ ಮಂದಿರ ಇವೆ. ಈ ಮಂದಿರದಲ್ಲಿ ಜಪಾನಿ ಕಲಾಕಾರ ಚಿತ್ರಿಸಿದ ಬುದ್ಧನ ಜೀವನ ಚರಿತ್ರೆ ನೋಡಲು ತುಂಬಾ ಚೆನ್ನಾಗಿದೆ. ಈ ವಿಹಾರದವರು ಪ್ರತಿ ನವಂಬರ್ ತಿಂಗಳಿನ ಹುಣ್ಣಿಮೆಯ ದಿನ ವಿಶೇಷ ಕಾರ್ಯಕ್ರಮ ನಡೆಸುತ್ತಾರೆ. ಇದಕ್ಕೆ ಪ್ರಪಂಚದ ನಾನಾ ಕಡೆಗಳಿಂದ ಬೌದ್ಧರು ಬರುತ್ತಾರೆ. ಒಟ್ಟಿನಲ್ಲಿ ಸಾರನಾಥದಲ್ಲಿ ಕಾಶಿ ಪಟ್ಟಣದ ಗಜಿಬಿಜಿಯಿಂದ ದೂರವಾಗಿ ಪ್ರಶಾಂತ ವಾತಾವರಣವನ್ನು ಅನುಭವಿಸಬಹುದು.

ಬನಾರಸ್ ಹಿಂದೂ ಯೂನಿವರ್ಸಿಟಿ ೧೧೦೦ ಎಕರೆಯಿಂದ ಒಳಗೊಂಡಿದೆ. ಇದು ಭಾರತದಲ್ಲೇ ಪ್ರಸಿದ್ಧವಾದ ವಿಶ್ವವಿದ್ಯಾನಿಲಯ. ಇದನ್ನು ಸ್ಥಾಪಿಸಿದವರು ಪಂಡಿತ ಮದನ ಮೋಹನ ಮಾಲವೀಯರು.

ಕಾಶಿಯಲ್ಲಿ ಬನಾರಸ್ ಸೀರೆ ತುಂಬಾ ಪ್ರಸಿದ್ಧ. ಇದಲ್ಲದೆ ಇಲ್ಲಿ ಕಂಚಿನ ಕೆತ್ತಿನ ಸಾಮಾನು, ಬಣ್ಣಬಣ್ಣದ ಮರದ ಸಾಮಾನು ಮತ್ತು ಚಿತ್ರವಿಚಿತ್ರವಾದ ಮಣಿಹಾರಕ್ಕೂ ಪ್ರಸಿದ್ಧಿ.

ಶ್ರೀರಾಮಚಂದ್ರನು ವನವಾಸ ಮಾಡಿದ "ಚಿತ್ರಕೂಟ"ವೂ ಉತ್ತರ ಪ್ರದೇಶದ ಬಾಂದಾ ಜಿಲ್ಲೆಯಲ್ಲಿದೆ. (ಕಾನಪುರದಿಂದ ಸುಮಾರು ೩೦೦ ಕಿಲೋಮೀಟರ್) ಇಲ್ಲಿ ಗುಡ್ಡವೂ ಅನೇಕ ಮಂದಿರಗಳೂ ಇವೆ.

ಉತ್ತರ ಪ್ರದೇಶದ ಪ್ರತಿ ಮೂಲೆಯಲ್ಲೂ ಮುಖ್ಯವಾದ ಹಬ್ಬಗಳು. ಹೋಳಿ (ಬಣ್ಣ ಎರಚುವುದು) ದಸರಾ ಮತ್ತು ದೀಪಾವಳಿ ಕಥಕ್ ನೃತ್ಯ ಉತ್ತರ ಪ್ರದೇಶದ ಪ್ರಾಚೀನ ಕಲೆ. ಈ ರಾಜ್ಯದ ಹೆಂಗಸರು ಹೂ ಮುಡಿಯುವುದಿಲ್ಲ. ಕಾರಣ ವೇಶ್ಯೆಯರು ಮಾತ್ರ ಹೂ ಮುಡಿಯುತ್ತಾರೆ ಎನ್ನುವ ಅಪನಂಬಿಕೆ ಇವರಲ್ಲಿದೆ. ಹೀಗಾಗಿ ದಕ್ಷಿಣಾದಿ ಹೆಂಗಸರಿಗೆ ಈ ನಿಯಮದಿಂದ ಸ್ವಲ್ಪ ಮುಜುಗರವೆ ! ✡



# ನಿಮ್ಮ ಕಣ್ಣುಗಳು ನಿಮ್ಮ ಮನಸ್ಸಿನ ಕಿಟಕಿಗಳು...

ಚಂಡಮಾರುತದ ಚಿಹ್ನೆಗಳನ್ನು ನೋಡುತ್ತಿದ್ದೀರಾ? ಅಥವಾ ಕ್ಷುಬ್ಧ ವಾತಾವರಣದಲ್ಲಿ
ಪ್ರೇಮ ಪ್ರಕಾಶವನ್ನು, ಇಲ್ಲವೆ ಕಾರ್ಮೋಡಗಳ ಮಳೆಯ ಬಿಂದುಗಳು
ಉಪಾಯಕರವಾಗಿ ಒಂದುಗೂಡುವುದನ್ನು ಕಾಣುತ್ತಿದ್ದೀರಾ?
ಶಿಂಗಾರ್ ಡಿಲಕ್ಸ್. ಕಾಜಲ್ (ಕಾಡಿಗೆ) ಎಂದೆಂದೂ ಸುಂದರವಾಗಿಯೇ ಉಳಿಯುತ್ತವೆ...
ನಿಮ್ಮ ಕಣ್ಣುಗಳು ಯಾವುದೇ ಮನೋಭಾವದ ಸನ್ನೆಯನ್ನು ತೋರಿಸುವುದಾದರೂ ಕೂಡ.
ಅತ್ಯಂತ ಸೌಮ್ಯವಾಗಿದೆ (ಶುದ್ಧ ಸಸ್ಯೋತ್ಪನ್ನ). ಇದನ್ನು ಸುಲಭವಾಗಿ ಹಚ್ಚಬಹುದು,
ಸುಲಭವಾಗಿ ತೊಳೆದು ತೆಗೆಯಬಹುದು. ಅಲ್ಲದೆ ಎಷ್ಟೊಂದು ವಿಶ್ವಸನೀಯ!
ಇದರ ಪ್ಯಾಕ್ ಕೂಡ 'ಸ್ಟೆರಿಲೈಜ್' (ಕ್ರಿಮಿಶುದ್ಧಿ)ಗೊಳಿಸಲ್ಪಡುತ್ತದೆ! ಹರಡಿ ಕಲೆ ಮಾಡದ,
ನಿಮ್ಮ ಹೋಗದ ಶಿಂಗಾರ್ ಡಿಲಕ್ಸ್ ಕಾಜಲ್ ಬಳಸಿರಿ. 'ಅವನಿಗೂ' ಅದು ಪ್ರಿಯವಾಗುವುದು.




ಶಿಂಗಾರ್ ಡಿಲಕ್ಸ್ ಕಾಜಲ್
ಸ್ಟಿಕ್ ಸಹ ಲಭ್ಯ.



**ಶಿಂಗಾರ್** ಡೀಲಕ್ಸ್ ಕಾಡಿಗೆ (ಕಾಜಲ್)

# ಶಾಲಾ ವಯಸ್ಸು

**ಪ್ರಶಾಂತ ಮಾಡ್ತ**

ಮಕ್ಕಳ ವ್ಯಕ್ತಿತ್ವ ಬೆಳವಣಿಗೆಯನ್ನು ಹಾಗೂ ವರ್ತನೆಯನ್ನು ಅವಲೋಕಿಸಿ. ಎರಡು ವರ್ಷದ ತನಕ ಶೈಶವವೆಂದೂ, ೨–೪ ರ ತನಕ ಬಾಲ್ಯವೆಂದೂ, ೫–೭ರ ತನಕ ಆಟದ ವಯಸ್ಸೆಂದೂ, ೬–೧೨ರ ತನಕ ಶಾಲಾವಯಸ್ಸೆಂದೂ ವಿಭಜಿಸಬಹುದು. ಈ ವಿಭಜನೆ ಮಕ್ಕಳ ಮಾನಸಿಕ ಬೆಳವಣಿಗೆಯ ವಿವಿಧ ಅತ್ಯಗತ್ಯ ಹಂತಗಳು. ಈ ಹಂತಗಳಲ್ಲಿ ಮಗು ಅನೇಕ ಪ್ರಭಾವಗಳಿಗೆ ಸಿಲುಕಿ ತನ್ನ ಭಾವೀ ವ್ಯಕ್ತಿತ್ವವನ್ನು ರೂಪಿಸುತ್ತದೆ. ಇತರ ಹಂತಗಳು ಸಾಮಾನ್ಯವಾಗಿ ಎರಡು ವರ್ಷಗಳಷ್ಟಿವೆ. ಶಾಲಾವಯಸ್ಸು ಸಾಧಾರಣವಾಗಿ ಆರು ವರ್ಷಗಳು. ಈ ಹಂತ ಮಗುವಿನ ಬೆಳವಣಿಗೆಯಲ್ಲಿ ಬಹು ಮುಖ್ಯವಾದದ್ದು. ಯಾಕೆಂದರೆ ಇತರ ಹಂತಗಳಲ್ಲಿ ಮಗುವಿನ ದೈಹಿಕ ಆಂತರಿಕ ಬೆಳವಣಿಗೆಗೆ ಪ್ರಾಮುಖ್ಯವಿದ್ದರೆ, ಶಾಲಾ ವಯಸ್ಸಿನಲ್ಲಿ ಮಗು ಸಾಮಾಜಿಕ ವಲಯವನ್ನು ಪ್ರವೇಶಿಸುತ್ತದೆ. ಈ ಸ್ಥಿತಿಯಲ್ಲಿ ಮಗುವಿನ ಮೂಲ ಪ್ರವೃತ್ತಿಗಳೆಲ್ಲಾ ಅವ್ಯಕ್ತವಾಗಿರುತ್ತವೆ. ಈ ವರೆಗೆ ಕುಟುಂಬದ ಕೇಂದ್ರವಾಗಿದ್ದು, ಎಲ್ಲರ ಗಮನವನ್ನೂ ತನ್ನೆಡೆಗೆ ಸೆಳೆಯುತ್ತಿದ್ದ ಮಗು, ಈಗ ತಾನೇ ತನ್ನ ಸುತ್ತುಮುತ್ತಲಿನ ಪರಿಸ್ಥಿತಿಗೆ ಹೊಂದಿಕೊಂಡು ಹೋಗಲು ಪ್ರಯತ್ನಿಸುತ್ತದೆ ಎನ್ನಬಹುದು. ವಯಸ್ಕರ ಜೀವನದ ರೀತಿಯಲ್ಲಿ ಪಾಲುಗೊಳ್ಳಲು ಪ್ರಯತ್ನಿಸುವ ಹಾಗೂ ಅವರ ವರ್ತನೆಯನ್ನು ಅನುಸರಿಸಲು ಹೆಣಗಾಡುವ ಹಂತವಿದು.

ಕೌಟುಂಬಿಕ ವಾತಾವರಣಕ್ಕೆ ಹೊಂದಿಕೊಂಡ ಮಗು, ಶಾಲಾ ವಯಸ್ಸಿನಲ್ಲಿ ಸಾಮಾಜಿಕ ಪರಿಸ್ಥಿತಿಗೆ ಒಗ್ಗಿಸಿಕೊಳ್ಳುವ ಈ ಸ್ಥಿತಿ ಸುಲಭವಲ್ಲ. ಮನೆಯ ವಾತಾವರಣವನ್ನು ತ್ಯಜಿಸಿದ ಮಗುವಿಗೆ ಹಲವು ಸವಲತ್ತುಗಳು ತಪ್ಪಿಹೋಗುತ್ತವೆ. ಅದರ ಸಾಮಾಜಿಕ ವಲಯ ಒಮ್ಮೆಂದೊಮ್ಮೆಲೆ ವಿಸ್ತಾರವಾಗುತ್ತದೆ. ತಾಯಿ ತಂದೆ ಸೋದರ ಸೋದರಿಯರ ಚಿಕ್ಕ ಜಗತ್ತನ್ನು ಬಿಟ್ಟು ಉಪಾಧ್ಯಾಯರೊಡನೆ ಸಹಪಾಠಿಗಳೊಡನೆ ವ್ಯವಹರಿಸುವ ವಿಶೇಷ ಪರಿಸ್ಥಿತಿಯನ್ನು ಮಗು ಎದುರಿಸುತ್ತದೆ. ಇಂತಹ ಶಾಲಾಸ್ಥಿತಿಯನ್ನು ಎದುರಿಸಲು ಮಗು ಸಿದ್ಧವಾಗಿದೆಯೋ ಎಂಬ ವಿಷಯ ಮಗುವಿನ ಕೌಟುಂಬಿಕ ವಾತಾವರಣವನ್ನು ಹೊಂದಿಕೊಂಡಿದೆ. ಮನೆಯಲ್ಲಿ ಕೇಂದ್ರಸ್ಥಾನದಲ್ಲಿದ್ದು, ವಿಶೇಷ ಅತಿಥಿಯಂತೆ ಹಲವು ಸವಲತ್ತುಗಳನ್ನು ಪಡೆದ ಮಗುವಿಗೆ ಶಾಲೆಯಲ್ಲಿ ವಿಶೇಷ ಗಮನ ಸಿಗಲಾರದು. ಮನೆಯಲ್ಲಿ ಸರ್ವಸ್ವತಂತ್ರವಾಗಿದ್ದು, ಬೇಕಾದ್ದನ್ನೆಲ್ಲಾ ಪಡೆದುಕೊಳ್ಳುತ್ತಿದ್ದ ಬಾಲಕ ಈಗ ಶಾಲೆಯಲ್ಲಿ ಕೆಲವು ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಮನೆಯಲ್ಲಿ ಇತರರು ತನ್ನ ನಿರೀಕ್ಷೆಯಂತೆ ನಡೆದುಕೊಳ್ಳುವುದನ್ನು ಕಂಡುಕೊಂಡ ಮಗುವಿಗೆ, ತನ್ನ ಈ ಸರ್ವಾಧಿಕಾರವು ತಪ್ಪಿ ಹೋಗಿ, ತಾನು ಸಾಮಾನ್ಯ ಪ್ರಜೆಯಾಗುತ್ತಿದ್ದೇನೆ ಎಂಬ ಕಹಿ ಸತ್ಯವು ಬಹು ಬೇಗನೆ ಮನವರಿಕೆಯಾಗುತ್ತದೆ. ಶಾಲೆಯಲ್ಲಂತೂ ತಾನು ಮತ್ತೊಬ್ಬರಿಗೆ ಸಮನಾಗಿ, ಇತರರ ಅಪೇಕ್ಷೆಯಂತೆ ವರ್ತಿಸಬೇಕಾಗಿರುವುದು ಬಹು ಕಷ್ಟಕರ. ಶಾಲೆಯಲ್ಲಿ ತನ್ನ ಬೇಕು–ಬೇಡಗಳನ್ನು ಮುಕ್ತವಾಗಿ ಪ್ರಕಟಿಸುವಂತಿಲ್ಲ. ತಾನು ಗೋಳೋ ಎಂದು ಅತ್ತರೆ ಎಲ್ಲವೂ ಸಿಗುತ್ತದೆ ಎಂದು ಮನೆಯ ವಾತಾವರಣದಲ್ಲಿ ಭಾಗವಹಿಸಿದ ಮಗುವಿಗೆ ಈಗ ಸಿಗುವುದು ಮಾಸ್ತರರ ಗದರಿಕೆ, ಸಂಗಡಿಗರ ಪರಿಹಾಸ್ಯ. ತನ್ನ ಬೇಕು– ಬೇಡಗಳನ್ನು ಈಗ ತಾನೇ ನಿರ್ಧರಿಸುವಂತಿಲ್ಲ. ಎಲ್ಲವನ್ನೂ ಉಪಾಧ್ಯಾಯರು ನಿರ್ಧರಿಸುತ್ತಾರೆ." ಅಯ್ಯೋ ಈ ನರಕ ಯಾಕೆ ಬೇಕಾಗಿತ್ತು" ಎಂದು ಮಗುವಿಗೆ ಅನಿಸುವುದು ಸಹಜವೇ.

ಹಿರಿಯರ ಮಾತನ್ನು ಪಾಲಿಸುವ ವಿನೀತ ಭಾವನೆ ಈ ವಯಸ್ಸಿನಿಂದ ಮಗುವಿನಲ್ಲಿ ಕಡಿಮೆಯಾಗತೊಡಗುತ್ತದೆ. ೧೦–೧೧ ವಯಸ್ಸಿನಲ್ಲಿ ಬಾಲಕನಿಗೆ ತನ್ನ ಗುಂಪು ಮುಖ್ಯವಾಗಿ ಇಷ್ಟರ ವರೆಗೆ ಹಿರಿಯರಿಗೆ ವಿನೀತನಾಗಿದ್ದವನು ಈಗ ತನ್ನ ಗುಂಪಿನ ಸಹಪಾಠಿಗಳಿಗೆ ವಿನೀತನಾಗುತ್ತಾನೆ. ದಿನೇ ದಿನೇ ಕುಟುಂಬದಿಂದ ದೂರ ಸರಿದು ಸಾಮಾಜಿಕ ವಲಯವನ್ನು ಪ್ರವೇಶಿಸುವ, ಅಲ್ಲಿ ತನಗೊಂದು ಸ್ಥಾನವನ್ನು ದೊರಕಿಸಿಕೊಳ್ಳುವುದೇ ಅವನಿಗೆ ಮುಖ್ಯವಾಗುತ್ತದೆ ಎನ್ನಬಹುದು. ಆಟದ ಸಮಯದಲ್ಲಿ ಆಟದ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾನೆ. ಈ ನಿಯಮಗಳನ್ನು ಬದಲಿಸಬೇಕಾದರೆ ಗುಂಪಿನ ಎಲ್ಲರೂ ಒಪ್ಪಬೇಕು. ತನ್ನ ಗುಂಪಿನ ಅಪೇಕ್ಷೆಯಂತೆ ವರ್ತಿಸಿ, ಇತರರ ಬಗ್ಗೆ ದೂರು ಕೊಡುವುದನ್ನು ನಿಲ್ಲಿಸುತ್ತಾನೆ. ಕೌಟುಂಬಿಕ ವಾತಾವರಣದಲ್ಲಿ ಪ್ರತಿಯೊಂದಕ್ಕೂ 'ಅಮ್ಮಾ, ಅಮ್ಮಾ' ಎಂದು ತಾಯಿಯ ಸೆರಗಿನ ಆಶ್ರಯ ಪಡೆಯುತ್ತಿದ್ದವನು, ಈಗ ಸುಮ್ಮನಿರುತ್ತಾನೆ. ಇಲ್ಲವೆ ಸಂಗಡಿಗರೊಡನೆ ಜಗಳವಾಡುತ್ತಾನೆ. ಆದರೆ ಈ ವೈರ ತಾತ್ಕಾಲಿಕ. ಹೀಗೆ ಮಗು ವೈಯಕ್ತಿಕ ಮೌಲ್ಯಗಳನ್ನು ಮನೆಯಲ್ಲಿ ಕಲಿತರೆ, ಸಾಮಾಜಿಕ ಮೌಲ್ಯಗಳನ್ನು ಶಾಲಾ ವಾತಾವರಣದಲ್ಲಿ ಕಲಿಯುತ್ತಾನೆ ಎನ್ನಬಹುದು.

ಶಾಲಾ ವಯಸ್ಸಿನಲ್ಲಿ ಮಗು ಒಂದು ರೀತಿಯ 'ಕೌಶಲ'ವನ್ನು ಬೆಳೆಸಿಕೊಳ್ಳುತ್ತದೆ ಎನ್ನಬಹುದು. ಕೌಟುಂಬಿಕ ವಾತಾವರಣದಲ್ಲಿ, ಇತರರು ತನಗೆ ಹೊಂದಿಕೊಂಡು ನಡೆಯುತ್ತಿದ್ದ ಕಾರಣ ಈ ಕೌಶಲದ ಅಗತ್ಯವಿರಲಿಲ್ಲ. ಈಗ ತನ್ನ ಸಂಗಡಿಗರೊಡನೆ ವ್ಯವಹರಿಸಲು, ಹೊಂದಿಕೊಂಡು ಹೋಗಲು ಮಗು ತನ್ನನ್ನೇ ತನ್ನ ಗುಂಪಿಗೆ ಸರಿಹೊಂದಿಸಿಕೊಳ್ಳಬೇಕಾಗುತ್ತದೆ. ಈ ಸಂಧಾನ ಸಾಮಾಜಿಕ ಜೀವನಕ್ಕೆ ಅತ್ಯಗತ್ಯ. ಶಾಲಾ ವಯಸ್ಸನ್ನು "ವಯಸ್ಕನಾದಾಗ ಬಾಳಲು ಹತ್ತು ಹನ್ನೆರಡು ವರ್ಷಗಳ ರಿಹರ್ಸಲ್" ಎನ್ನಬಹುದು. ಈ ವಯಸ್ಸಿನಲ್ಲಿ ತನ್ನ ಸಂಗಡಿಗರೊಡನೆ ಸುಗಮವಾಗಿ ವ್ಯವಹರಿಸಲು ಕಲಿತರೆ, ದೊಡ್ಡವನಾದಾಗ ಆತ ಸಮಾಜದಲ್ಲೂ ಸುಗಮವಾಗಿ ಬಾಳಲು ಸಾಧ್ಯ. ಆದ್ದರಿಂದ ಶಾಲೆಯ ವಾತಾವರಣವು ಶೈಕ್ಷಣಿಕ ತರಬೇತಿ ಮಾತ್ರವಲ್ಲ, ಸಾಮಾಜಿಕ ಜೀವನದ ತರಬೇತಿಯೂ ಹೌದು.

ಈ ಹಂತದಲ್ಲಿ ಮಗುವಿನ ಲಕ್ಷ್ಯ ಮನೆಯಿಂದ ಶಾಲಾವಠಾರಕ್ಕೂ, ತಾಯಿಯಿಂದ ಅಧ್ಯಾಪಕರಿಗೂ ವರ್ಗಾಯಿಸಲ್ಪಡುತ್ತದೆ. ಇಂತಹ ಸ್ಥಿತಿಯಲ್ಲಿ ಹೊಸ ತರದ ಜೀವನ ವೃತ್ತಿಯನ್ನು ಬಾಲಕ ಪಡೆಯುತ್ತಾನೆ. ಈ ವರೆಗೆ ಮನೆಯಲ್ಲಿ ಆತನಿಗೊಂದು ವಿಶಿಷ್ಟ ಸ್ಥಾನವಿತ್ತು. ಈಗ ಈ ವಿಶಿಷ್ಟ ಸ್ಥಾನವನ್ನು ಗಳಿಸಲು ಅವನು ಹೆಣಗಾಡಬೇಕಾಗುತ್ತದೆ. ಶಾಲೆಯ 'ಪರೀಕ್ಷೆ'ಗಳು, ಅವನ ನಡತೆಗಳು ಮಾತ್ರ ಅವನಿಗೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಡಬಲ್ಲವು. ಕ್ಲಾಸಿನಲ್ಲಿ ಅಥವಾ ಆಟದ ಬಯಲಲ್ಲಿ ಅವನು ಗಳಿಸುವ ಸ್ಥಾನಕ್ಕೆ ತಕ್ಕಂತೆ ಅವನ ಗುಣಮಟ್ಟವನ್ನು ನಿರ್ಧರಿಸಲಾಗುವುದು. ಶಾಲೆಯಲ್ಲಿ ಅವನು ಯಾವ ಆಟಗಳನ್ನು ಆಡಬೇಕು, ಹೇಗೆ ಆಡಬೇಕು, ಯಾವ ಮನೋಭಾವದಲ್ಲಿ ಆಡಬೇಕೆಂದು ಅಧ್ಯಾಪಕರೇ ನಿರ್ಧರಿಸುತ್ತಾರೆ. ಶಾಲಾಚಟುವಟಿಕೆಗಳಲ್ಲಿ ಅವನು ಸಫಲನಾದರೆ, ಅವನನ್ನು ಯೋಗ್ಯನೆಂದು ಪರಿಗಣಿಸಿ ಅವನಿಗೆ ವಿಶೇಷ ಸವಲತ್ತುಗಳನ್ನೂ ಜವಾಬ್ದಾರಿಯನ್ನೂ ಇತ್ತು, ಕ್ಲಾಸ್‌ಮುಖಂಡನಾಗಿಯೋ, ಟೀಮ್ ಮುಖಂಡನಾಗಿಯೋ ನೇಮಿಸಲಾಗುವುದು. ಆದುದರಿಂದ ಶಾಲಾ ಜೀವನವೆಲ್ಲಾ ಪರೀಕ್ಷೆ ಹಾಗೂ ಅದರಿಂದ ದೊರೆಯುವ ಸ್ಥಾನಮಾನಗಳಿಗಾಗಿ ಅತಿಯಾದ ಸ್ಪರ್ಧೆಯುಂಟಾಗುವ ಸಂಭವವಿದೆ. ಪರೀಕ್ಷೆಗಳು ಅವನ ಸ್ಥಾನವನ್ನೂ ಸಮಾಜದಲ್ಲಿ ಅವನ 'ಬೆಲೆ'ಯನ್ನೂ ನಿರ್ಧರಿಸುತ್ತವೆಯಲ್ಲದೆ, ಇತರರೊಡನೆ ಅವನನ್ನು ಹೋಲಿಸಿ ಅವನು 'ಉತ್ತಮ'ನೋ 'ಅಯೋಗ್ಯ'ನೋ ಎಂದು ನಿರ್ಧರಿಸುತ್ತವೆ. ಇದರಿಂದಾಗಿ ತನ್ನನ್ನು ಇತರರೊಡನೆ ಹೋಲಿಸಿಯೇ ತನ್ನ ಸ್ಥಾನಮಾನವನ್ನು ಕಂಡುಕೊಳ್ಳಬೇಕಾದ ಪರಿಸ್ಥಿತಿಯೊಂದು ಅವನಿಗೆ ಒದಗಿಬರುತ್ತದೆ. ಕ್ಲಾಸಿನಲ್ಲಿ ಅವನು ಗಳಿಸುವ ಅಂಕಗಳ ಗ್ರೇಡುಗಳೂ ಬಾಲಕನ ವ್ಯಕ್ತಿತ್ವದ ಮೌಲ್ಯ [illegible]ಗಳನ್ನು ನಿರ್ಧರಿಸುತ್ತವೆ. ಆದರೆ ಅಧ್ಯಾಪಕರಿಗೆ ಯೋಗ್ಯನೆಂದು ಕಂಡ ಹುಡುಗ ಸಂಗಡಿಗರ ದೃಷ್ಟಿಯಲ್ಲಿ ಯೋಗ್ಯನಾಗಬೇಕಿಲ್ಲ. ಅಧ್ಯಾಪಕರ ಮೆಚ್ಚಿನ ಹುಡುಗ ಸಹಪಾಠಿಗಳ ಶತ್ರುವಾಗಿರುವ ಸಂಭವವೇ ಹೆಚ್ಚು. ಕ್ಲಾಸಿನಲ್ಲಿ ಅಧ್ಯಾಪಕರ ಕಣ್ಮಣಿ

ಯಾಗಿದ್ದವನನ್ನು ಅವನ ಸಂಗಡಿಗರು ಆಟದ ಬಯಲಲ್ಲಿ ಗೇಲಿಮಾಡಿ ಗೋಳಾಡಿಸುವುದೇ ಹೆಚ್ಚು. ಕ್ಲಾಸಿನಲ್ಲಿ ಅಯೋಗ್ಯನಾದವನು, ಮೂರ್ಖನಾದವನು ಆಟದ ಬಯಲಲ್ಲಿ ಮುಖಂಡನಾಗಬಹುದು. ಹುಡುಗನ ರೂಪ, ಅವನ ಹೆಸರು ವರ್ತನೆಗಳು ಚೋದ್ಯವಾಗಿ ಕಂಡರೆ, ಇತರರು ಈ ಹುಡುಗನನ್ನು ಗೇಲಿಮಾಡಿ, ಹಿಂಸಿಸಿ. ತಮ್ಮ ಗುಂಪಿನಿಂದ ಬಹಿಷ್ಕರಿಸಬಹುದು. ಇಂತಹ ಸ್ಥಿತಿ ಆ ಹುಡುಗನ ಸಾಮಾಜಿಕ ಬೆಳವಣಿಗೆಯನ್ನು ಕುಂಠಿತಗೊಳಿಸಿ. ಅವನು ಸಮಾಜ ದ್ವೇಷಿಯಾಗುವ ಸಾಧ್ಯತೆ ಇದೆ.

"ನಾವೆಲ್ಲರೂ ಸರ್ವಸಮಾನರು" ಎಂದು ಭಾವಿಸಿ ಶಾಲಾಜೀವನವನ್ನು ಪ್ರವೇಶಿಸುವ ಮಗುವಿಗೆ, "ನಾವೆಲ್ಲರೂ ಸಮಾನರಲ್ಲ" ಎಂಬ ವಾಸ್ತವ ಸಂಗತಿ ತಿಳಿಯಲು ಹೆಚ್ಚು ಸಮಯ ಬೇಕಾಗುವುದಿಲ್ಲ. ತಂದೆತಾಯಿಗಳು ಹಾಗೂ ಅಧ್ಯಾಪಕರೇ ಈ ಭಾವನೆಯನ್ನು ಹುಟ್ಟಿಸಲು ಕಾರಣರಾಗುತ್ತಾರೆ. ಮಗುವನ್ನು ಮೂರ್ಖ, ಹೆಡ್ಡನೆಂದು ಅಧ್ಯಾಪಕರು ಬಹಿರಂಗವಾಗಿ ಹೀಯಾಳಿಸಿದರೆ, ತಾನು ಮೂರ್ಖ ಹಾಗೂ ಹೆಡ್ಡನೆಂದು ಮಗು ಭಾವಿಸಬಹುದು. ಬೌದ್ಧಿಕ, ಸಾಮಾಜಿಕ, ವೈಯಕ್ತಿಕ ವರ್ಗೀಕರಣಗಳು ಮಗುವಿಗೆ ಕೃತಕವೆಂದು ಕಂಡುಬಂದರೂ, ಶಾಲಾ ಜೀವನದಲ್ಲಿ ಇಂಥ ಭೇದಭಾವಗಳಿಗೆ ಪ್ರಾಮುಖ್ಯವನ್ನೀಯಲಾಗುತ್ತದೆ. ತಮಗೆ ಇಷ್ಟರಾದವರೊಡನೆ ಬೆರೆಯುವುದು ಮಕ್ಕಳ ಹುಟ್ಟುಗುಣ. ಆದರೆ ತನ್ನ ಮಗು ಯಾರೊಡನೆ ಬೆರೆಯಬೇಕು, ಬೆರೆಯಬಾರದು ಎಂಬುದನ್ನು ತಂದೆತಾಯಿಗಳು ನಿರ್ಧರಿಸಿ, ಮಕ್ಕಳಲ್ಲೂ ತಮ್ಮ ಪೂರ್ವಾಗ್ರಹಪೀಡೆಯನ್ನು ತುರುಕಿಸುತ್ತಾರೆ.

ಮನೆಯಲ್ಲಿ ಶಿಕ್ಷಣ ವಾತಾವರಣವಿದ್ದರೆ, ತಂದೆ ತಾಯಿಗಳು ಶಿಕ್ಷಕರಾಗಿದ್ದು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯವನ್ನಿತ್ತರೆ. ಮಕ್ಕಳೂ ಶಿಕ್ಷಣದಲ್ಲಿ ಮುಂದಿರುವ ಸಂಭವ ಹೆಚ್ಚು. ಅದರಲ್ಲೂ ಸಮಾಜದಲ್ಲಿ ಮಧ್ಯಮ ವರ್ಗದವರು ಸಾಮಾಜಿಕ ಮನ್ನಣೆಗಳನ್ನು, ಐಶ್ವರ್ಯವನ್ನು ಶಿಕ್ಷಣದ ಗುರಿಯನ್ನಾಗಿ ಇರಿಸುವುದರಿಂದಾಗಿ. ಈ ವಾತಾವರಣದಿಂದ ಬಂದ ಮಕ್ಕಳು ಚೆನ್ನಾಗಿ ಕಲಿಯುತ್ತಾರೆ. ತಮ್ಮ ಮಕ್ಕಳು ವಿದ್ಯೆಯಲ್ಲಿ ಹಿಂದುಳಿದರೆ ಈ ವರ್ಗದವರು ಆತಂಕ ಪಡುವುದೂ ಹೆಚ್ಚು. ಆದರೆ ಬಡವರು ಶಿಕ್ಷಣವನ್ನು ಇಂತಹ ದೃಷ್ಟಿಯಿಂದ ನೋಡುವುದಿಲ್ಲವಾದ್ದರಿಂದ. ಬಡ ಕುಟುಂಬದ ಮಕ್ಕಳು ಸಾಮಾನ್ಯವಾಗಿ ಶಿಕ್ಷಣದಲ್ಲಿ ಹಿಂದುಳಿಯುತ್ತಾರೆ.

ಶಾಲಾ ವಾತಾವರಣವನ್ನು ಪ್ರವೇಶಿಸುವ ಮಕ್ಕಳಿಗೆ ಕೆಲವಾದರೂ ಮಾನಸಿಕ ಸಮಸ್ಯೆಗಳು ಇದ್ದೇ ಇರುತ್ತವೆ. ಹೊಸ ವಾತಾವರಣ, ಅಪರಿಚಿತ ಮುಖಗಳು, ಹಲವು ನಿಯಮಗಳು, ಕಡ್ಡಾಯ ಕಾರ್ಯಕ್ರಮಗಳು. ಇವುಗಳಿಗೆ ಹೊಂದಿಕೊಂಡು ಹೋಗುವುದು ಮಗುವಿಗೆ ಸುಲಭವಲ್ಲ. ಮನೆಯ ಸುರಕ್ಷಿತೆ, ಮಮತಾಪೂರ್ಣ ವಾತಾವರಣ, ಮನೆಯಲ್ಲಿ ತನಗಿದ್ದ ಕೇಂದ್ರ ಸ್ಥಾನವನ್ನು ಬಿಟ್ಟುಕೊಡುವುದಂತೂ ಮಗುವಿಗೆ ಹಿಂಸೆಯಾಗುತ್ತದೆ. ಆದುದರಿಂದಲೇ ಮಗು ತನ್ನ ಶೈಶವ ಸ್ಥಿತಿಯ ಸುರಕ್ಷಿತ ವಾತಾವರಣಕ್ಕೆ ಮರಳಲು ಪ್ರಯತ್ನಿಸಬಹುದು. ಶಾಲಾಸ್ಥಿತಿಯ ಆತಂಕವು ಹಲವು ರೀತಿಗಳಲ್ಲಿ ಪ್ರಕಟವಾಗುತ್ತದೆ– ಶಾಲೆಗೆ ಹೋಗದೆ ತಪ್ಪಿಸಿಕೊಳ್ಳುವುದು, ಚಡ್ಡಿಯಲ್ಲೇ ಹೊಲಸುಮಾಡುವುದು ಇತ್ಯಾದಿ. ಈ ಸ್ಥಿತಿಯಲ್ಲಿ ತನ್ನ ಬಗ್ಗೆಯೇ ಕೀಳರಿಮೆ ಉಂಟಾಗಲು ಸಾಧ್ಯ. ಶಾಲೆಯಲ್ಲಿ ಹೆಡ್ಡನಾದರೆ, ಅಪ್ರಯೋಜಕನೆಂದು ಗಣಿಸಲ್ಪಟ್ಟರೆ, ತಾನು ಕೀಳು ಎಂಬ ಭಾವನೆ ಉಂಟಾಗಿ ಮಾನಸಿಕ ಭವಿಷ್ಯ ಹಾಳಾಗುವ ಸಂಭವವಿದೆ. ಕ್ಲಾಸಿನಲ್ಲಿ ಗಮನವನ್ನು ಪಡೆಯದ ಮಕ್ಕಳು, ಗುಂಪಿನಲ್ಲಿ ತಮಗೊಂದು ಸ್ಥಾನವನ್ನು ಗಿಟ್ಟಿಸಲು ಕ್ಲಾಸಿನ ಬಫೂನ್ ಆಗಲು ಸಾಧ್ಯ.

ಅದೆಷ್ಟೋ ಬಾರಿ, ನಾಗರಿಕ ಸಭ್ಯತೆಯ ಕಾರಣವಾಗಿ ತಂದೆತಾಯಿಗಳು ಮಕ್ಕಳ ಆನಂದವನ್ನು ಕೊಲ್ಲುತ್ತಾರೆ. ಮಕ್ಕಳು ಬೆರಳನ್ನು ಚೀಪಿದರೆ, ಹೊಲಸನ್ನು ಮುಟ್ಟಿದರೆ, ಮಣ್ಣಿನಲ್ಲಿ ಆಡಿದರೆ ತಂದೆ ತಾಯಿಗಳಿಗೆ ಆತಂಕ. ಅದ್ದರಿಂದಲೇ ಮಕ್ಕಳಿಗೆ ನಾಗರಿಕತೆ ಬಹು ಕ್ರೂರವಾಗಿ ಕಂಡುಬರುತ್ತದೆ. ಇಂತಹ ಸಾಮಾಜಿಕ ಸಭ್ಯತೆ ಸಾಮಾಜಿಕ ಜೀವನಕ್ಕೆ ಅವಶ್ಯಕವಾದರೂ ಅದನ್ನು ಮಕ್ಕಳಲ್ಲಿ ಬಲವಂತವಾಗಿ ಕಾರ್ಯರೂಪಕ್ಕೆ ತರಬಾರದು. ಮಕ್ಕಳನ್ನು ಮಣ್ಣಿನಲ್ಲಿ ಆಟವಾಡಲು ಬಿಡದಿದ್ದರೆ, ಧರಿಸಿದ ಬಟ್ಟೆ ನಿರ್ಮಲವಾಗಿರಬೇಕೆಂದು ನಿರ್ಬಂಧಿಸಿದರೆ ಮಕ್ಕಳು ಬೆಳೆದಾಗ ಕೊಳೆಬಟ್ಟೆಗಳನ್ನುಧರಿಸುವ ಸಂಭವವಿದೆ.

ಮಕ್ಕಳು ಮುಂಜಾನೆ ಶಾಲೆಗೆ ಹೋಗುವ ಸಮ

ಯಾವಂತೂ, ಮನೆಯಲ್ಲಿ ಎಲ್ಲರಿಗೂ ವಿಷಮ ಕಾಲವಾಗುತ್ತದೆ. ಸಾಮಾನ್ಯವಾಗಿ ಶಾಲೆಗೆ ಹೋಗಲು ಸಿದ್ಧರಾಗಲು ಮಕ್ಕಳು ತುಂಬಾ ಸಮಯವನ್ನು ತೆಗೆದುಕೊಳ್ಳುತ್ತಾರೆ. "ಬೇಗ ಹೊರಡು" ಎಂದು ಗದರಿಸಿದರೆ, ಮಕ್ಕಳು ಇನ್ನೂ ನಿಧಾನ. ತಂದೆ ತಾಯಿಗಳ ಕೆಲಸಗಳು, ಅವರ ತರಾತುರಿ ಮಕ್ಕಳಿಗೆ ಮಗು ಗಮನವೀಯಲಾರದು. ಇಂತಹ ಸನ್ನಿವೇಶಗಳಲ್ಲಿ ಮಗುವಿಗೆ "ಸ್ಕೂಲ್ ಬಸ್ ಬರಲು ಹತ್ತು ನಿಮಿಷ ಮಾತ್ರ ಇದೆ" ಎನ್ನಬೇಕಲ್ಲದೆ, "ಬೇಗ ಹೊರಡು" ಎಂದು ಬಯ್ಯುವುದು ತರವಲ್ಲ. ಶಾಲೆಗೆ ಹೊರಡುವ ಗಡಿಬಿಡಿಯಲ್ಲಿ ಮಕ್ಕಳು ತಮ್ಮ ಪುಸ್ತಕ, ಪೆನ್ನುಗಳನ್ನು ಮರೆಯುವ ಸಾಧ್ಯತೆ ಇದೆ. ಇಂತಹ ಸಂದರ್ಭಗಳಲ್ಲಿ ಅವರಿಗೆ ಆ ವಸ್ತುಗಳನ್ನು ಸುಮ್ಮನೆ ಕೊಡಬೇಕಲ್ಲದೆ, "ಅಯ್ಯೋ, ಈಗಲೇ ನೀನು ಇಷ್ಟು ಮರೆತರೆ, ದೊಡ್ಡವನಾದಾಗ ಏನಾಗುವಿಯೋ, ದೇವರೇ ಬಲ್ಲ?" ಎನ್ನುವುದು ಹಿತಕರವಲ್ಲ. "ಸಂಜೆ ನಾಲ್ಕು ಗಂಟೆಗೆ ಮನೆಗೆ ಬರ್ತಿಯಲ್ಲ?" ಎನ್ನಬೇಕೇ ಹೊರತು, "ಸ್ಕೂಲ್ ಬಿಟ್ಟ ನಂತರ ಪೋಲಿ ಹುಡುಗರೊಡನೆ ತಿರುಗಾಡದೇ ನೇರ ಮನೆಗೆ ಬಾ" ಎಂದರೆ, ನಿಮ್ಮ ಮಗು ಆ ಸಂಜೆ ಪೋಲಿ ಹುಡುಗರೊಡನೆ ಆಡಿ ಆರು ಘಂಟೆಗೇ ಮನೆಗೆ ಹಿಂದಿರುಗುವ ಮತ್ತು, ವಿಳಂಬಕ್ಕೆ ಸುಳ್ಳು ಕಾರಣ ಕೊಡುವ ಸಾಧ್ಯತೆ ಹೆಚ್ಚು.

ಶಾಲಾ ಜೀವನದ ಪ್ರಭಾವ ಒಂದಲ್ಲ ಒಂದು ರೀತಿಯಲ್ಲಿ ನಮ್ಮ ಜೀವನದುದ್ದಕ್ಕೂ ಇರುತ್ತದೆ. ಶಾಲೆಯ ಮೂಲಕ ನಾವು ಸಾಮಾಜಿಕ ಜೀವನವನ್ನು ಪ್ರವೇಶಿಸುವುದರಿಂದಾಗಿ, ಸಮಾಜಕ್ಕೆ ಬಗ್ಗಿ ನಡೆಯುವ ಮನೋಭಾವ ಇಲ್ಲಿ ಪ್ರಾರಂಭವಾಗುತ್ತದೆ. ಕೆಲವೊಮ್ಮೆ ನಮ್ಮ ವಯಸ್ಕ ಜೀವನವೇ ಶಾಲಾಜೀವನದ ರೂಪಾಂತರ ಸ್ಥಿತಿಯಾಗಬಹುದು. ಕೆಲವರಂತೂ ತಮ್ಮ ಜೀವನದುದ್ದಕ್ಕೂ ಪರೀಕ್ಷೆಯಲ್ಲಿ ಸಫಲರಾಗಿಯೋ ಬಹುಮಾನವನ್ನು, ಪದವಿಗಳನ್ನು ಗಿಟ್ಟಿಸಿಯೋ ಕಾಲ ಕಳೆದು, ಏನನ್ನೂ ಸಾಧಿಸಲಾರರು. ಕಲಿತುದನ್ನು ಕಾರ್ಯರೂಪಕ್ಕೆ ತರುವ ಗೋಜಿಗೆ ಅವರು ಹೋಗಲಾರರು. ಪದವಿಗಳನ್ನು ಗಿಟ್ಟಿಸಿಯೇ ತಮ್ಮ ಸ್ಥಾನಮಾನವನ್ನು ಗುರುತಿಸುವ ಈ ಪ್ರವೃತ್ತಿ ಶಾಲಾ ಜೀವನದ ವಾಸನೆ ಅವರಲ್ಲಿ ಇನ್ನೂ ಬಲವಾಗಿದೆ ಎಂದು ತೋರಿಸುತ್ತದೆ. ಗೋರ್ಡನ್ ಲೋವ್ ಎಂಬ ಮನಶಾಸ್ತ್ರಜ್ಞನ ಅಭಿಪ್ರಾಯದಂತೆ, "ಶಾಲಾ ಜೀವನಕ್ಕೆ ಬಲವಾಗಿ ಅಂಟಿಕೊಂಡವರು ಅಧ್ಯಾಪಕ ವೃತ್ತಿಯನ್ನು ಹಿಡಿಯುವ ಸಾಧ್ಯತೆ ಇದೆ. ಕಲಿತುದನ್ನು ಕಾರ್ಯರೂಪಕ್ಕೆ ತರಲಾಗದ ಇವರು, ಇತರರಿಗೆ ಕಲಿಸುವುದರಲ್ಲಿ, ಅಂಕಗಳನ್ನು ಕೊಡುವುದರಲ್ಲಿ ಪದವಿಗಳನ್ನು ಹಂಚುವುದರಲ್ಲಿ ತೃಪ್ತಿಪಡೆಯಬಹುದು. 'ಪ್ರಥಮ ಸ್ಥಾನ,' 'ದ್ವಿತೀಯ ಸ್ಥಾನ' ಎಂಬ ವರ್ಗೀಕರಣವೇ ಇವರ ಜೀವನ ದೃಷ್ಟಿಯಾಗುತ್ತದೆ." ಜಾರ್ಜ್ ಬರ್ನಾರ್ಡ್ ಶಾ ಒಂದು ಕಡೆ "Those who can, do; those who can't, teach; those who can't teach, teach teachers." ಎನ್ನುತ್ತಾನೆ. ಶಾಲೆಯಲ್ಲಿ ಇತರರನ್ನು ಅನುಸರಿಸಲು ಪ್ರಯತ್ನಿಸಿದ, ಎಲ್ಲರ ಒಪ್ಪಿಗೆಗೆ ದಾಸನಾದ ಮಗು, ತನ್ನ ಭಾವಿ ಜೀವನದಲ್ಲಿ, ತನ್ನ ನೆರೆಹೊರೆಯವರ ಅಪೇಕ್ಷೆಯಂತೆ ವರ್ತಿಸಬಹುದು. ಶಾಲೆಯಲ್ಲಿ ಅಧ್ಯಾಪಕರ ನೆಚ್ಚಿನ ವಿದ್ಯಾರ್ಥಿಯಾಗಲು ಪ್ರಯತ್ನಿಸಿದವನು, ಕಚೇರಿಯಲ್ಲಿ, ತನ್ನ ಹಿರಿಯಾಧಿಕಾರಿಯ ಮೆಚ್ಚುಗೆಯನ್ನು ಪಡೆಯಲು ಹೆಣಗಾಡುತ್ತಾನೆ. ಕ್ಲಾಸಿನಲ್ಲಿ ಉದ್ಧಟನಾಗಿದ್ದವನು ಸಮಾಜದಲ್ಲೂ ಉದ್ಧಟತನದಿಂದ ವರ್ತಿಸಬಹುದು. ಕ್ಲಾಸಿನಲ್ಲಿ ಬಫೂನನಾದವನು ಕಚೇರಿಯಲ್ಲೂ ಹಾಸ್ಯಗಾರನಾಗಬಹುದು.

ವಿದ್ಯೆ ಮಗುವನ್ನು ಯೋಗ್ಯವ್ಯಕ್ತಿಯನ್ನಾಗಿ, ನಾಗರಿಕನನ್ನಾಗಿ ಮಾಡಬೇಕಲ್ಲದೆ, ಅವನಿಗೆ ಇನ್ನೂ ಹಲವು ಸಮಸ್ಯೆಗಳನ್ನು ತಂದೊಡ್ಡಬಾರದು. ಮಗುವಿನ ವ್ಯಕ್ತಿತ್ವ ಮುಖ್ಯವೇ ಹೊರತು, ಅಂಕಗಳಲ್ಲ, ಪದವಿಗಳಲ್ಲ. ಆದ್ದರಿಂದ ತಂದೆತಾಯಿಗಳು ತಮ್ಮ ಮಗುವಿನ ವೈಶಿಷ್ಟ್ಯವನ್ನು ಅವನು ಗಳಿಸಿದ ಶ್ರೇಣಿಗಳ ಮೂಲಕ ನಿರ್ಧರಿಸುವುದು ಹಿತಕರವಲ್ಲ. ತಾನು ಚೆನ್ನಾಗಿ ಬಾಳಿ, ತನ್ನಂತೆ ಇತರರಿಗೂ ಚೆನ್ನಾಗಿ ಬಾಳುವಂತೆ ಅವಕಾಶಮಾಡಿಕೊಡುವ ಮನೋಭಾವ ಮುಖ್ಯ. ಇದನ್ನು ಬೆಳೆಸಿಕೊಡುವುದೇ ಯೋಗ್ಯ ಶಿಕ್ಷಣ. ✿



# ಸುಪರ್ ರಿನ್ ಬಿಳುಪು

## ಬೇರೆ ಯಾವುದೇ ಡಿಟರ್ಜಂಟ್ ಬಿಲ್ಲೆ ಅಥವಾ ಬಾರ್‌ಗಿಂತ ಅಧಿಕ ಬಿಳುಪು

ನೋಡಿದೊಡನೆ ತಪ್ಪದೆ ಗುರುತಿಸುವಂಥ ಬಿಳುಪು ನಿಮ್ಮ ಬಟ್ಟೆಗಳಿಗೆ—ನಿಯಮಿತವಾಗಿ ಸುಪರ್ ರಿನ್‌ನಿಂದ ಒಗೆಯುವುದರಿಂದ ಬಟ್ಟೆಗಳಿಗೆ ಬರುವ ಬಿಳುಪೇ ಬೇರೆ. ಬೇರೆ ಯಾವುದೇ ಡಿಟರ್ಜಂಟ್ ಬಿಲ್ಲೆ ಅಥವಾ ಬಾರ್‌ಗಿಂತ ಅಧಿಕ ಬಿಳುಪು ಕೊಡುತ್ತದೆ ಸುಪರ್ ರಿನ್. ಏಕೆಂದರೆ ಸುಪರ್ ರಿನ್‌ನಲ್ಲಿ ಅಧಿಕ ಬಿಳುಪುಗೊಳಿಸುವ ಶಕ್ತಿ ಇದೆ.




ನಿಮಗೆ ನೀವೇ ಖಾತ್ರಿ ಮಾಡಿಕೊಳ್ಳಿ।

ಬೇರೆ ಯಾವುದೇ ಡಿಟರ್ಜಂಟ್ ಬಾರ್‌ನಿಂದ ಒಗೆದದ್ದು





ಸುಪರ್ ರಿನ್‌ನಿಂದ ಒಗೆದದ್ದು

ಸುಪರ್ ರಿನ್‌ನಲ್ಲಿ **ಅಧಿಕ** ಬಿಳುಪುಗೊಳಿಸುವ ಶಕ್ತಿ ಇದೆ.

ಹಿಂದೂಸ್ತಾನ್ ಲೀವರ್ ಅವರ ಉತ್ಕೃಷ್ಟ ತಯಾರಿಕೆ

ಲಿಂಟಾಸ್-RIN.35-1811

# ಸೂಕ್ಷ್ಮ ಶಸ್ತ್ರವೈದ್ಯದ ಅದ್ಭುತಗಳು

ಡಾ. ಎಂ. ದಯಾಕರ

ಸೂಕ್ಷ್ಮ ಶಸ್ತ್ರಕ್ರಿಯೆ ಚಿಕಿತ್ಸೆಯು ಸೂಕ್ಷ್ಮ ದರ್ಶಕ ಮತ್ತು ಅದರ ಉಪಯೋಗದಿಂದ ರೂಪುಗೊಂಡ ಅತಿ ಸಣ್ಣ ಸಲಕರಣೆಗಳು ವೈದ್ಯರಿಗೆ ಹೊಸ ದಾರಿಯನ್ನು ತೋರಿಸಿವೆ. ಐದು ವರ್ಷಗಳ ಹಿಂದೆ ನಾವು ಕನಸಿನಲ್ಲಿಯೂ ಕಾಣಲಾರದ ಪವಾಡಗಳನ್ನು ಅವು ಮಾಡಿಸಿವೆ. ಅವು ಕಿತ್ತು ಹೋದ ದೇಹಭಾಗಗಳನ್ನು ಸ್ವಸ್ಥಾನದಲ್ಲಿ ಕೂಡಿಸುವುದು ಮಾತ್ರವಲ್ಲದೆ ಶಸ್ತ್ರವೈದ್ಯದ ಎಲ್ಲ ಶಾಖೆಗಳಲ್ಲೂ ಸೂಕ್ಷ್ಮಶಸ್ತ್ರ ವೈದ್ಯದ ಆಶ್ಚರ್ಯಗಳನ್ನು ವ್ಯಕ್ತಪಡಿಸಿವೆ" [ಮಾಂಟ್ರಿಯಲ್ ರಾಯಲ್ ವಿಕ್ಟೋರಿಯಾ ಆಸ್ಪತ್ರೆಯ ಸೂಕ್ಷ್ಮ ಶಸ್ತ್ರವೈದ್ಯಕ ( Micro-surgery ) ಪ್ರಯೋಗಾಲಯದ ಸಹ ನಿರ್ದೇಶಕರಾದ ಡಾ. ರಾಲಿನ್ ಡೇನಿಯಲ್ ]

ಸೂಕ್ಷ್ಮದರ್ಶಕದಲ್ಲಿ ನೋಡಿಕೊಂಡು ಶಸ್ತ್ರವೈದ್ಯ ಮಾಡುವುದು ಹೊಸದೇನಲ್ಲ. ೧೯೨೦ರಷ್ಟು ಹಿಂದೆ ಸ್ವೀಡನ್ನಿನ ವೈದ್ಯರು ಮಧ್ಯ ಕಿವಿಯ ಸಣ್ಣ ಭಾಗಗಳ ಮೇಲೆ ಶಸ್ತ್ರಪ್ರಯೋಗ ಆರಂಭಿಸಿದ್ದರು. ೧೯೪೦ರ ವೇಳೆಗೆ ಕಣ್ಣನ್ನು ಸೂಕ್ಷ್ಮದರ್ಶಕದಲ್ಲಿ ನೋಡಿಕೊಂಡು ಕಣ್ಣು ಹೂ ತೆಗೆದು ಸತ್ತವರ ಕಾರ್ನಿಯವನ್ನು ಸರಿಯಾದ ಸ್ಥಳದಲ್ಲಿ ಹೊಲಿದು ಒಳನೀರು ಹೊರ ಬರದಂತೆ ಮಾಡಲಾರಂಭಿಸಿದ್ದರು. ಅದೇ ರೀತಿ ಕಿತ್ತು ಹೋದ ಸೂಕ್ಷ್ಮ ರಕ್ತನಾಳಗಳನ್ನು ಮುಚ್ಚಿಕೊಳ್ಳದೆ ತೆರೆದಿರುವಂತೆ ಹೊಲಿಯುವುದು ಹೇಗೆ ಎಂಬ ಸಮಸ್ಯೆ ಶಸ್ತ್ರವೈದ್ಯರನ್ನು [illegible]

ಸೂಕ್ಷ್ಮವಿರುವ, ಆದರೆ ಗಟ್ಟಿಯಾದ, ದಾರಗಳು ಬೇಕಾದವು.

ವರ್ಮಾಂಟಿನ ಮೆಡಿಕಲ್ ಸ್ಕೂಲಿನಲ್ಲಿ ಡಾ. ಜುಲಿಯಸ್ ಜಾಕೋಬ್ಸನ್ ಎಂಬುವವರು ಸಣ್ಣ ಪ್ರಾಣಿಗಳ ರಕ್ತನಾಳಗಳ ಮೇಲೆ ಪ್ರಯೋಗಗಳನ್ನು ೧೯೫೭ರಲ್ಲಿ ಪ್ರಾರಂಭಿಸಿದರು. ಅವರು ಮೊದಲು ವಜ್ರ ವ್ಯಾಪಾರಿಗಳ ಮಸೂರಗಳನ್ನು ಉಪಯೋಗಿಸಿದರು. ಆದರೆ ಒಂದು ಗಂಟೆಯ ನಂತರ ಕತ್ತು ಬಿಗಿದುಕೊಂಡು ಬೆನ್ನು ನೋವು ಪ್ರಾರಂಭಿಸಿತು. ಮಸೂರವು ಕೆಲಸಕ್ಕೆ ಅಡ್ಡ ಬರುತ್ತಿತ್ತು. ಒಂದು ದಿನ ಅವರು ಆಸ್ಪತ್ರೆಯಲ್ಲಿ ನಡೆಯುವಾಗ ಕಿವಿಶಸ್ತ್ರವೈದ್ಯರು ಶಸ್ತ್ರಕ್ರಿಯಾ ಸೂಕ್ಷ್ಮದರ್ಶಕವನ್ನು ಉಪಯೋಗಿಸುತ್ತಿದ್ದುದನ್ನು ಕಂಡರು. ಸೂಕ್ಷ್ಮ ರಕ್ತನಾಳಗಳ ಶಸ್ತ್ರಕ್ರಿಯೆಗೂ ಏಕೆ ಸೂಕ್ಷ್ಮದರ್ಶಕವನ್ನು ಉಪಯೋಗಿಸಬಾರದೆಂದು ಯೋಚಿಸಿದರು. ಮೊದಲ ಸಲ ಶಸ್ತ್ರಕ್ರಿಯಾ ಸೂಕ್ಷ್ಮದರ್ಶಕದಲ್ಲಿ ಸೂಕ್ಷ್ಮ ರಕ್ತನಾಳಗಳನ್ನು ನೋಡಿದಾಗ ಚಂದ್ರನನ್ನು ಬಲವಾದ ದೂರದರ್ಶಕದಲ್ಲಿ ನೋಡಿದಂತೆ ಇತ್ತು. ಬರಿಗಣ್ಣಿಗೆ ಕಾಣಲಾರದ ಸೂಕ್ಷ್ಮ ವಿವರಗಳು ಸ್ಪಷ್ಟವಾಗಿ ಕಾಣುತ್ತಿದ್ದವು.

ಜಾಕೋಬ್ಸನ್ನರ ನಂತರ ಇತರ ವೈದ್ಯರು ಪ್ರತಿದಿನವೂ ಆಪರೇಟಿಂಗ್ ಮೈಕ್ರೋಸ್ಕೋಪಿನೊಡನೆ ಗಂಟೆಗಳಷ್ಟು ಕಾಲ ಕಳೆಯುತ್ತಿದ್ದಾಗ ಆ ಮೈಕ್ರೋಸ್ಕೋಪುಗಳು ಸೂಕ್ಷ್ಮ ಕೆಲಸಗಳಿಗೆ ತುಂಬಾ [illegible]

ಸೂಕ್ಷ್ಮ ವೈದ್ಯ ಆಯುಧಗಳು ಇನ್ನೂ ಅಕ್ಕಸಾಲಿಯವನಿಗೇ ಆಗಿದ್ದವು. ಕೈಗಡಿಯಾರ ರಿಪೇರಿ ಆಯುಧಗಳು ಮತ್ತು ಸಣ್ಣ ಹರಳುಗಳನ್ನು ಕೂಡಿಸುವದಕ್ಕೆ ಉಪಯೋಗಿಸುತ್ತಿದ್ದ ಸಾಧನಗಳಾಗಿದ್ದವು.

ಅಕ್ಕಸಾಲಿಗನ [illegible] ಒಂದು ಸಣ್ಣ ಕೂದಲನ್ನು ಹಿಂಗೈಯಿಂದ ಜಾರಿ ಅಥವಾ ಕತ್ತರಿಸಿ ಹೋಗದಂತೆ ಹಿಡಿಯುವುದಾದರೆ, ಅದು ಒಂದು ಸಣ್ಣ ರಕ್ತನಾಳವನ್ನು ಅದೇ ರೀತಿ ಹಿಡಿಯ ಬಲ್ಲುದೆಂದು ತಿಳಿಯಲಾಯಿತು. ರಕ್ತನಾಳಗಳನ್ನು ಭದ್ರವಾಗಿ ಹಿಡಿದುಕೊಳ್ಳುವ ಹಿಡಿ ಕಚ್ಚುಗಳು, ರೂಬ್‌ಗೋಲ್ಡ್ ಬರ್ಗಿಯನ್ ಕತ್ತಿಗಳು, ಕಂಸಗಳು, ಬಂಧನಿಗಳು ಹಿಡಿತಗಳನ್ನು ಸರಿಯಾದ ಸ್ಥಳಗಳಲ್ಲಿರುವಂತೆ ಅಳವಡಿಸಲಾಯಿತು.

ಆದರೆ ಮೊದ ಮೊದಲಲ್ಲಿ ಪ್ರಾಣಿ ಧಮನಿಗಳ ಕೊನೆಗಳನ್ನು ಅಡ್ಡ ಸೇರಿಸುವುದು ಸೂಕ್ಷ್ಮದರ್ಶಕದಲ್ಲಿ ಚೆನ್ನಾಗಿಯೇ ಆಗುತ್ತಿತ್ತು. "ಆದರೂ ನಾವು ಕಲಿಯುವುದು ಬಹಳವಿತ್ತು. ಒಂದು ತೊಂದರೆ ತೀರಿದರೆ ಮತ್ತೊಂದು ಸಿದ್ಧವಾಗುತ್ತಿತ್ತು. ಆದರೆ ಮನುಷ್ಯನ ಸತತ ಪ್ರಯತ್ನದ ಮುಂದೆ ಎಲ್ಲವೂ ಕರಗುತ್ತಿದ್ದವು. ಒಂದು ಮಿಲಿಮೀಟರ್ ವ್ಯಾಸ ನಾಳದ ಹೊಲಿಗೆ ಯಶಸ್ವಿಯಾಗಿ ಅದು ೮೦% ತೆರೆದಿರುತ್ತಿತ್ತು."

ಡಾ. ಜೊನಾಗಿ ಹೀಗೆ ಹೇಳುತ್ತಾರೆ: "ಸೂಕ್ಷ್ಮದರ್ಶಕದಲ್ಲಿ ನಾಳ ದೊಡ್ಡದಾಗಿ ಕಾಣುವುದು, ಗಟ್ಟಿ ಸಡಿಲಾಗುವುದು, ಅಥವಾ ನರ ಛಿದ್ರವಾಗುವುದರಲ್ಲಿ ಹೆಚ್ಚೇನಿಲ್ಲ. ಸೂಕ್ಷ್ಮ ಶಸ್ತ್ರವೈದ್ಯದಲ್ಲಿ ಮುಖ್ಯ ವಿಚಾರವೆಂದರೆ ಅದರಲ್ಲಿ ಕೆಲಸ ಮಾಡುವ ಆಯುಧಗಳನ್ನು ಸೃಷ್ಟಿಸುವುದು ಮತ್ತು ಕಣ್ಣು ಅವುಗಳನ್ನು ಸರಿಯಾಗಿ ಉಪಯೋಗಿಸಲು ಕೈಗಳನ್ನು ಸರಿಯಾಗಿ ನಡೆಸುವುದು."

ಸೂಕ್ಷ್ಮ ಶಸ್ತ್ರವೈದ್ಯ ಬಹು ಕಷ್ಟಕರವಾದುದು. ಎಲ್ಲರೂ ಮಾಡುವಂತಹುದಲ್ಲ. ಸಾಧಾರಣ ಶಸ್ತ್ರಕ್ರಿಯೆಯಲ್ಲಿ ಕೈ ಅದುರುವುದು ಕಾಣಿಸುವುದಿಲ್ಲ. ಒಂದು ಹೊಲಿಗೆ ಹಾಕುವುದರಲ್ಲಿ ಕೈ ಸುಮಾರು ೫" ಕಮಾನಿನಲ್ಲಿ ತಿರುಗುತ್ತದೆ. ಆದರೆ ಸೂಕ್ಷ್ಮ ಶಸ್ತ್ರಕ್ರಿಯೆಯಲ್ಲಿ ಕೇವಲ ೧'೮" ಗಿಂತ ಹೆಚ್ಚಿರದಾ [illegible]

ಗಳನ್ನು ಮಾತ್ರ ಆಡಿಸುತ್ತ ಸಣ್ಣ ಆಯುಧಗಳನ್ನು ಉಪಯೋಗಿಸಬೇಕು. ಸೂಕ್ಷ್ಮದರ್ಶಕದಿಂದ ಪದಾರ್ಥಗಳು ದೊಡ್ಡದಾಗಿ ಕಾಣುವುದಲ್ಲದೆ ಅವುಗಳ ಚಲನೆಗಳೂ ದೊಡ್ಡದಾಗಿ ಕಾಣಿಸುವುವು. ಎಲ್ಲಾ ಸೂಕ್ಷ್ಮ ವೈದ್ಯರು ೩೫ ವರ್ಷಗಳಿಗಿಂತ ಹೆಚ್ಚು ವಯಸ್ಸಿನವರಲ್ಲ. ಆದರೂ ಅವರು ಅವರಿಗಾದ ವಯಸ್ಸಿಗಿಂತ ಕಮ್ಮಿಯಾದವರಂತೆ ಕಾಣುವರು. ಅವರೆಲ್ಲ ವಾರದಲ್ಲಿ ೫ ದಿನ ದಿನಕ್ಕೆ ೫-೬ ಮೈಲು ನಡೆಯುವುದು, ಹೆಚ್ಚು ಈಜುವುದು ಮುಂತಾದ ವ್ಯಾಯಾಮ ಮಾಡುವರು. ಅವರ್‍ಯಾರೂ ತಂಬಾಕು ಸೇವಿಸುವವರಲ್ಲ. ಅವರೆಲ್ಲ ಸೂಕ್ಷ್ಮದರ್ಶಕದೊಡನೆ ದಿನಕ್ಕೆ ೫-೬ ಗಂಟೆ ತರಬೇತು ತೆಗೆದುಕೊಂಡವರು. ಇಷ್ಟು ಗಂಟೆ ತರಬೇತು ಹೊಂದಿದ್ದರೂ ಅವರಲ್ಲಿ ಬಹು ಜನ ಒಂದು ಸಲಕ್ಕೆ ಒಂದು ಗಂಟೆಗಿಂತ ಹೆಚ್ಚಾಗಿ ತಮ್ಮ ವಿಶೇಷ ಶಸ್ತ್ರಕ್ರಿಯೆ ಮಾಡಲಾರರು. ಕೆಲವರು ತರಬೇತು ಹೊಂದಿದ್ದೇ ಸಾಕೆಂದು ಸೂಕ್ಷ್ಮ ಕೆಲಸಕ್ಕೆ ನಮಸ್ಕಾರ ಹಾಕುತ್ತಾರೆ.

ಮೊದಲು ಒಂದು ಸಣ್ಣ ಕೂದಲನ್ನು ಒಂದು ಸಣ್ಣ ಕೊಕ್ಕೆಯಂತಹ ಆಯುಧದಿಂದ ಸೂಕ್ಷ್ಮದರ್ಶಕದಲ್ಲಿ ಎತ್ತಲು ಬಹು ಶ್ರಮಿಸಿ ತಿಂಗಳು ಗಟ್ಟಲೆ ಸಾಧಿಸಬೇಕಾಗುತ್ತದೆ. ಆ ಕೆಲಸವನ್ನು ಒಂದು ಸಲಕ್ಕೆ ೧೦ ನಿಮಿಷ ಮಾಡುವುದರಲ್ಲಿ ಸುಸ್ತಾಗುತ್ತದೆ.

ಕತ್ತರಿಸಿದ ತೋಳು, ಕಾಲು ಮತ್ತು ಬೆರಳುಗಳನ್ನು ಜೋಡಿಸುವುದು ಹೆಚ್ಚು ಕಷ್ಟತರವಾದುದು. ಕತ್ತರಿಸಿ ಹೋದ ಭಾಗ ಚಿಕ್ಕದಾದಷ್ಟೂ ಹೆಚ್ಚು ಕಾಲ ತೆಗೆದುಕೊಳ್ಳುತ್ತದೆ. ಡಾ. ಡೇನಿಯಲ್ ಹೀಗೆಂದು ಬರೆಯುತ್ತಾರೆ: "ನಾವು ಒಂದು ಗಂಟೆ ಕಾಲ ಸರೂಪಿಕ ಶಸ್ತ್ರಚಿಕಿತ್ಸೆ ಮಾಡಿ ಆಗ ತಾನೆ ಸುಧಾರಿಸಿಕೊಳ್ಳುತ್ತಿದ್ದೆವು. ಒಂದು ಬಸ್ಸಿನ ಯಂತ್ರದಲ್ಲಿ ತನ್ನ ಬಲಗೈಯ ೪ ಬೆರಳುಗಳನ್ನು ಪೂರ್ತಿ ಕತ್ತರಿಸಿಕೊಂಡ ೧೮ ವರ್ಷದ ಹುಡುಗಿಯನ್ನು ಆಗ ಕರೆ ತಂದರು. ಆಕೆ ಕತ್ತರಿಸಿ ಹೋದ ೪ ಬೆರಳುಗಳನ್ನು ಜಾಮ್ ಬಟ್ಟಲಿನಲ್ಲಿ ಸುತ್ತಿ ಮಂಜುಗಡ್ಡೆ ಹಾಕಿಕೊಂಡು ಬಂದಿದ್ದಳು. ಸೂಕ್ಷ್ಮ ಶಸ್ತ್ರಕ್ರಿಯೆ ವೈದ್ಯರು ಕೆಲಸಕ್ಕಿಳಿದರು. ೪ ಕತ್ತರಿಸಿದ ಬೆರಳು [illegible]

ಯ ಹೊಲಿಗೆ ಹಾಕುವುದರಲ್ಲಿ ೨೪ ಗಂಟೆ ೨೦ ನಿಮಿಷಗಳಾಗಿದ್ದವು. ಹುಡುಗಿಗೆ ಗಾಯಗಳು ವಾಸಿಯಾದ ಮೇಲೆ ೬೦% ಬೆರಳು ಕೆಲಸ ಸಾಧ್ಯವಿದ್ದಿತು. ಆಕೆ ಬಿಗಿಮುಷ್ಟಿ ಮಾಡಲಾರಳು ಅಥವಾ ಸಣ್ಣ ಪದಾರ್ಥಗಳನ್ನು ಎತ್ತಲಾರದವಳಾಗಿದ್ದಳು."

ಮೊದಲ ಸಲ ಯಶಸ್ವಿಯಾಗಿ ತೋಳನ್ನು ಹೊಲಿದುದು ೨೩ ಮೇ ೧೯೬೨ರಂದು. ಬಾಸ್ಟನ್ನಿನ ಮಸ್ಸಾಚುಸೆಟ್ಸ್ ಜನರಲ್ ಆಸ್ಪತ್ರೆಯ ಡಾ. ರೊನಾಲ್ಡ್ ಎ. ಮಾಲ್ಟ್ ಅವರಿಂದ ಇದು ನಡೆಯಿತು. ೧೨ ವರ್ಷದ ಎವರೆಟ್ ನೋಲ್ಸ್‌ನು ಗುಡ್ಸ್ ರೈಲಿಗೆ ಹಾರುವಾಗ ತನ್ನ ಬಲ ತೋಳನ್ನು ಕಳೆದುಕೊಂಡನು. ತನ್ನ ಅಂಗಿಯ ತೋಳಲ್ಲಿದ್ದ ಕತ್ತರಿಸಿ ಹೋದ ತನ್ನ ತೋಳನ್ನು ಪುನಃ ಅಂಟಿಸಲಾಗುವುದೆಂದು ಆ ಮುಗ್ಧ ಬಾಲಕ ನಂಬಿದ್ದನು. ಅದುವರೆಗೆ ಅಂತಹ ಕೆಲಸ ಎಲ್ಲೂ ಜರುಗಿರಲಿಲ್ಲ. ಈ ಹೊತ್ತು ನೋಲ್ಸನು ತನ್ನ ಕಡಿದು ಹೋಗಿದ್ದ ತೋಳಿನಿಂದ ೮೦ ಪೌಂಡುಗಳಷ್ಟು ತೂಕ ಎತ್ತಬಲ್ಲನು. ನೋಲ್ಸನ ವಿಚಾರ ಆಶ್ಚರ್ಯದ್ದಾಗಿ ಬೇರೆ ವೈದ್ಯರು ಕಿತ್ತು ಹೋದ ತೋಳು ಕಾಲುಗಳನ್ನು ಹೊಲಿಯಲು ಹುರುಪು ಕೊಟ್ಟಿತು. ಬೆರಳುಗಳನ್ನಂಟಿಸಲು ಸ್ವಲ್ಪ ಕಾಲ ತೆಗೆದುಕೊಂಡಿತು. ಬೆರಳುಗಳಿಗೆ ಹೆಚ್ಚು ಸೂಕ್ಷ್ಮ ಶಸ್ತ್ರಕ್ರಿಯೆ ಬೇಕು.

ಕಳೆದ ೫ ವರ್ಷಗಳಲ್ಲಿ ೨೦೦೦-೩೦೦೦ ಕತ್ತರಿಸಿ ಹೋದ ತೋಳು ಕಾಲುಗಳನ್ನು ಅಮೇರಿಕ ಮತ್ತು ಕೆನಡಾಗಳಲ್ಲಿ ಅಂಟಿಸಲಾಗಿದೆ. ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ರಾಲ್ಫ್ ಕೆ. ಡೇವಿಸ್ ಮೆಡಿಕಲ್ ಕೇಂದ್ರದ ಡಾ. ಹ್ಯಾರಿ ಜೆ. ಬಂಕ್ ಜ್ಯೂನಿಯರ್ ಎಂಬುವರು ಮೊದಲ ಸೂಕ್ಷ್ಮ ವೈದ್ಯ ಕ್ರಮ ಪ್ರಾರಂಭವಾಗಲು ಕಾರಣರಾದರಲ್ಲದೆ ಬಹು ಸಂಖ್ಯೆಯಲ್ಲಿ ಸೂಕ್ಷ್ಮ ಶಸ್ತ್ರವೈದ್ಯರನ್ನು ತರಪೇತು ಮಾಡಿದರು. ಆದರಿಂದ ಈಗ ೫೦೦ ಸೂಕ್ಷ್ಮ ಶಸ್ತ್ರವೈದ್ಯಗಳು ನಡೆಯುತ್ತದೆ. ಈಗ ಕೆಲವು ಆಸ್ಪತ್ರೆಗಳಲ್ಲಿ ಸರಿಯಾದ ರಕ್ತ ಚಲನೆ ಮತ್ತು ನರಗಳ ಕೆಲಸವಿರುವ ಜಯಪ್ರದ ಶಸ್ತ್ರಕ್ರಿಯೆಗಳು ೯೦% ಕ್ಕೂ ಹೆಚ್ಚು ನಡೆಯುತ್ತಿವೆ.

ಆದರೂ ಸೂಕ್ಷ್ಮ ಶಸ್ತ್ರಚಿಕಿತ್ಸೆ ಹೊಂದಿದ ತೋಳು ಕಾಲುಗಳಿಗೆ, ಅವುಗಳಲ್ಲೂ ಬೆರಳುಗಳಿಗೆ, ಮುಂಚಿನ ಶಕ್ತಿ ಬರುವುದಿಲ್ಲ. ಬೆರಳುಗಳಲ್ಲಿ ನರಗಳು ಮೊದಲಿರುವಂತೆ ಪೂರ್ತಿ ಕೂಡಿಕೊಳ್ಳಲಾರವು. ಆದರೂ ಅವುಗಳಲ್ಲಿ ಸಾಕಷ್ಟು ಬಲವಿದ್ದು, ಕೆಲಸಗಳನ್ನು ಮಾಡಲು ಸಾಧ್ಯ. ಆದರೆ ಅವು ತಣ್ಣಗಿನ ಸ್ಥಿತಿಯನ್ನು ತಡೆದುಕೊಳ್ಳುವುದು ಕಷ್ಟ.

ಅತಿ ಕಷ್ಟಕರವಾದ ಕೆಲಸಗಳಲ್ಲಿ ಸಿರಗಳನ್ನು ಹೊಲೆಯುವದೊಂದು. ಹಾರ್ವರ್ಡ್ ಮೆಡಿಕಲ್ ಸ್ಕೂಲಿನಲ್ಲಿ ಮೂಳೆ ಕೀಲು ಶಸ್ತ್ರವೈದ್ಯದ ಅಸೋಸಿಯೇಟ್ ಪ್ರೊಫೆಸರ್ ಆದ ಡಾ. ರಿಚರ್ಡ್ ಜೆ. ಸ್ಮಿತ್‌ರು ಈ ರೀತಿ ಹೇಳುತ್ತಾರೆ, "ನರವು ಟೆಲಿಫೋನ್ ಕೇಬಲ್ಲಿನ ಹಾಗೆ ಹಲವು ತಂತುಗಳುಳ್ಳದ್ದು. ರೋಗಿ ಕೆಲಸಗಳನ್ನು ಸರಿಯಾಗಿ ಮಾಡಬೇಕಾದರೆ ಸರಿಯಾದ ತಂತುಗಳು ಮಿದುಳಿನ ನಿರ್ದಿಷ್ಟಭಾಗಗಳಿಂದ ಸರಿಯಾದ ಭಾಗಗಳಿಗೆ ಹೋಗಬೇಕು. ಇಲ್ಲದಿದ್ದರೆ ಭಾಗಗಳ ಕೆಲಸಗಳು ತಪ್ಪಾಗುತ್ತವೆ. ಈ ವೈದ್ಯರು ನರಸಂಬಂಧಗಳನ್ನು ವಿಶೇಷವಾಗಿ ಕಲಿತು ಕಂಪ್ಯೂಟರುಗಳಿಂದ ನಕ್ಷೆಗಳನ್ನು ಬರೆದುಕೊಂಡು ಆಪರೇಷನ್ ರೂಮಿಗೆ ಒಯ್ಯುತ್ತಾರೆ. ಆದರೂ ಆಗಾಗ ಅದಲು ಬದಲು ಸಂಬಂಧಗಳು ಏರ್ಪಡುತ್ತವೆ."

ಸೂಕ್ಷ್ಮ ಶಸ್ತ್ರಕಲಾತತ್ತ್ವವನ್ನು ದೇಹದ ಒಂದು ಭಾಗದಿಂದ ಮತ್ತೊಂದಕ್ಕೆ ಭಾಗಗಳನ್ನು ವರ್ಗ ಮಾಡಲುಪಯೋಗಿಸುತ್ತಾರೆ; ಉದಾ:- ಕೈಬೆರಳುಗಳಿಲ್ಲದೆ ಹುಟ್ಟಿದ ಮಗುವಿನ ಕಾಲು ಬೆರಳುಗಳನ್ನು ಕೈಗಳಿಗೆ ವರ್ಗಾಯಿಸುವುದು.

ಚೀನದಲ್ಲೂ ಸೂಕ್ಷ್ಮಶಸ್ತ್ರವೈದ್ಯ ಬೆಳೆದಿದೆ. ಮಸ್ಸಾಚುಸೆಟ್ಸ್‌ನ ಡಾ. ಮಾಲ್ಟ್ ಚೀನಕ್ಕೆ ಹೋಗಿದ್ದಾಗ ಒಬ್ಬನಿಗೆ ರೈಲು ಅಪಘಾತದಲ್ಲಿ ಎಡ ಪಾದ ಕತ್ತರಿಸಿಹೋಗಿ, ಎಡ ಮೀನಖಂಡ ಮತ್ತು ಬಲ ಪಾದ ಬಹಳ ಜಜ್ಜಿಹೋಗಿದ್ದವು. ಚೀನಿಯ ಸೂಕ್ಷ್ಮ ಶಸ್ತ್ರವೈದ್ಯರು ಅವನ ಎಡ ಪಾದವನ್ನು ತೆಗೆದು ಬಲ ಪಾದದ, ಸ್ಥಳದಲ್ಲಿ ಜೋಡಿಸಿದರು. ಅನಂತರ ಅವನಿಗೆ ಒಂದು ಕಾಲು ಪೂರ್ತಿ ಬಂದಂತಾಗಿ ಬಲಗಡೆ ಕೃತಕ ಕಾಲನ್ನು ಜೋಡಿಸಿ ಆತನು ಊರುಗೋಲಿಲ್ಲದೆ ನಡೆಯುವಂತಾದನು.

ಒಬ್ಬ ೫೫ ವರ್ಷದ ರೈತನಿಗೆ ಹಲವು ಸಲ ಬಲಗಡೆ ಲಕ್ವ ಹೊಡೆದು ಅವನ ಮಾತು ತೊದಲಾಗಿ ಬಲ ತೋಳು,ಕಾಲು ಬಲಹೀನವಾದುವು. ವರ್ಮಾಂಟ್ ವಿಶ್ವವಿದ್ಯಾಲಯದ ಮೆಡಿಕಲ್ ಸ್ಕೂಲಿನಲ್ಲಿ

ಸೂಕ್ಷ್ಮದರ್ಶಕದ ಸಹಾಯದಿಂದ ಅವನ ಎಡಗಡೆಯ ಮಿದುಳಿನಲ್ಲಿ ಬೆಂಕಿ ಕಡ್ಡಿಯ ಅರ್ಧವಿರುವ ಎರಡು ರಕ್ತನಾಳಗಳನ್ನು ಸುಮಾರು ೧೨ ಅತಿ ಸಣ್ಣ ಹೊಲಿಗೆಗಳಿಂದ ಸೇರಿಸಿದರು. ಈಗ ಅವನಿಗೆ ಬಹುಕಾಲಪೂರ್ತಿ ಲಕ್ವ ಹೊಡೆಯದಿರಬಹುದು.

ಓಹಾಯೋದಲ್ಲಿಯ ಕ್ಲಿವ್ಲೆಂಡ್ ಕ್ಲಿನಿಕ್‌ನಲ್ಲಿ ೪೫ ವರ್ಷದ ಗೃಹಿಣಿಯಿಂದ ಒಬ್ಬ ಸೂಕ್ಷ್ಮ ಶಸ್ತ್ರವೈದ್ಯನು ಇದ್ದ ಒಂದೇ ಮೂತ್ರ ಜನಕಾಂಗ ತೆಗೆದು ಬಿಟ್ಟಿದ್ದ [illegible] ಜೋಡಿಸಿಟ್ಟು [illegible] ಧಮನಿಯ ಸಣ್ಣ ಬುಡ್ಡೆಯನ್ನು ಕತ್ತರಿಸಿ ತೆಗೆದು ಪುನಃ ಸೂಕ್ಷ್ಮ ದರ್ಶಕದ ಸಹಾಯದಿಂದ ಮೂತ್ರಜನಕಾಂಗದ ೭ ಧಮನಿಗಳನ್ನು ಗಂಟೆಗೊಂಡರಂತೆ ಹೊಲೆದನು. ಎಲ್ಲೂ ರಕ್ತ ಸೋರುತ್ತಿರಲಿಲ್ಲ. ೧೦ ದಿನಗಳ ನಂತರ ಆ ಹೆಂಗಸು ತೊಂದರೆಯಿಲ್ಲದೆ ಮನೆಗೆ ಹೋದಳು.

ಮಾಂಟ್ರಿಯಲ್‌ನಲ್ಲಿ ರಾಯಲ್ ವಿಕ್ಟೋರಿಯ ಆಸ್ಪತ್ರೆಯ ಸೂಕ್ಷ್ಮಶಸ್ತ್ರವೈದ್ಯರು ೧೨ ಗಂಟೆ ಸತತ ಹೋರಾಡಿ ೨೨ ವರ್ಷದ ಹೆಂಗಸಿನ ಬಲ ಕಣಕಾಲಿನಲ್ಲಿ ಮೂಳೆಯ ಅರ್ಬುದ ತೆಗೆದು ಅದರ ಸ್ಥಳದಲ್ಲಿ ಆಕೆಯ ಎಡ ಕಣಕಾಲಿನ ಫಿಬುಲ ಮೂಳೆಯ ಭಾಗವನ್ನು ಹೊಲೆದರು. ಸಾಧಾರಣವಾಗಿ ಸಿಕ್ಕಿಸಿನ ಮೂಳೆಯ ತುಂಡು ಕಾಲನ್ನು ಬಹು ಕಾಲ ಆಡಿಸದೆ ಇಟ್ಟಿದ್ದರೆ ಕೂಡಿಕೊಳ್ಳುತ್ತದೆ. ಆದರೆ ಇಲ್ಲಿ ಮೂಳೆಯನ್ನು ಸುಮ್ಮನೆ ಸಿಕ್ಕಿಸದೆ ಸೂಕ್ಷ್ಮ ದರ್ಶಕ ಮತ್ತು ಸಣ್ಣ ಆಯುಧಗಳಿಂದ ಪೋಷಕ ಧಮನಿ ಮತ್ತು ಒಂದು ಸಿರವನ್ನು ಮೂಳೆಗೆ ಸೇರಿಸಿ ಹೊಲೆದುದರಿಂದ ಕಾಲು ಆಡಿಸುತ್ತಿದ್ದರೂ ಮೂಳೆ ಕೂಡಿಕೊಂಡಿತು. ೭ ವರ್ಷಗಳ ಹಿಂದೆ ಆಗಿದ್ದರೆ ಆ ಹೆಂಗಸು ಬಲ ಕಣಕಾಲನ್ನು ಕಳೆದುಕೊಳ್ಳಬೇಕಾಗಿದ್ದಿತು.

೧೯೭೭ರ ವಸಂತದಲ್ಲಿ ೪ ವಾರಗಳಿಗಿಂತ ಕಮ್ಮಿ ಕಾಲದಲ್ಲಿ ನ್ಯೂಯಾರ್ಕಿನ ೫ ಆಸ್ಪತ್ರೆಗಳ ಸೂಕ್ಷ್ಮವೈದ್ಯರು ಅಪಘಾತಗಳಲ್ಲಿ ಕಿತ್ತು ಅಥವಾ ಕತ್ತರಿಸಿ ಹೋಗಿದ್ದ ೫ ಕಾಲುಗಳು, ೧ ತೋಳು, ೨ ಕೈಗಳನ್ನು ಹೊಲೆದರು. ಬೆಲ್‌ವ್ಯೂ ಆಸ್ಪತ್ರೆ ತಂಡದ ಇಬ್ಬರು ಮೂಳೆ ಕೀಲು ವೈದ್ಯರು ಮತ್ತು ಆರು ಸುರೂಪ ಶಸ್ತ್ರವೈದ್ಯರು ಕೂಡಿ, ೧೬ ಗಂಟೆಗಳಿಗಿಂತ ಹೆಚ್ಚು ಹೆಣಗಾಡಿ, ಭೂಗತ ರೈಲಿನ ಕೆಳಗೆ ಸಿಕ್ಕಿಕೊಂಡವನ ಕತ್ತರಿಸಿಹೋದ ೨ ಕಾಲುಗಳನ್ನು ಹೊಲಿದರು.

ಇದುವರೆಗೆ ಎಲ್ಲಾ ಸೂಕ್ಷ್ಮ ಶಸ್ತ್ರವೈದ್ಯಗಳು ಯಶಸ್ವಿಯಾಗಿ, ರೋಗಿಗಳು ೪೦–೮೦% ಕೆಲಸಗಳನ್ನು ಉಳಿಸಿಕೊಂಡರು.

ಈಗ ತೋಳು ಕಾಲುಗಳಲ್ಲದೆ ದೇಹದ ರೋಗಗಳಿಗೆ ಸೂಕ್ಷ್ಮ ಶಸ್ತ್ರವೈದ್ಯದಿಂದ ಪ್ರಯೋಜನವಿದೆ. ಅನ್ನನಾಳದ ಏಡಿ ಹುಣ್ಣು ಇರುವ ಒಬ್ಬನಲ್ಲಿ ಹುಣ್ಣಿರುವ ಭಾಗವನ್ನು ತೆಗೆದು ಅದರ ಸ್ಥಳದಲ್ಲಿ ಕರುಳಿನ ಭಾಗವನ್ನು ಕತ್ತಿನಲ್ಲಿ ಹೊಲಿದು, ಅದಕ್ಕೆ ರಕ್ತನಾಳಗಳನ್ನು ಕಲ್ಪಿಸಿದರು. ಈ ದಿನ ಆ ಮನುಷ್ಯನು ಎಲ್ಲರಂತೆ ತಿನ್ನಬಲ್ಲನು: ಇಲ್ಲದಿದ್ದರೆ ಕಬಂಧನಿಗಿದ್ದಂತೆ ಆತನ ಬಾಯಿ ಹೊಟ್ಟೆಯಲ್ಲಿರಬೇಕಾಗಿತ್ತು.

ನೇತ್ರತಜ್ಞರು ೧೯೪೦ರಿಂದ ಸೂಕ್ಷ್ಮದರ್ಶಕ ಉಪಯೋಗಿಸುತ್ತಿದ್ದರೂ ಕಣ್ಣಾಲಿಯ ಹಿಂಭಾಗವನ್ನು ಮುಟ್ಟಿರಲಿಲ್ಲ. ಈಗ ಸೂಕ್ಷ್ಮದರ್ಶಕದ ಶಲ್ಯಗಳನ್ನೂ ಪ್ರಯೋಗತಂತ್ರಗಳನ್ನೂ ಕಣ್ಣಿನ ಹಿಂಭಾಗಕ್ಕೂ ಉಪಯೋಗಿಸಿ ದೃಷ್ಟಿಪಟಲದ ತಂತುಗಳನ್ನು ಸರಿಪಡಿಸುವವರಿದ್ದಾರೆ. ಕಳೆದ ಆಗಸ್ಟ್‌ನಲ್ಲಿ ಮ್ಯಾನ್‌ಹಟನ್ ಕಣ್ಣು, ಕಿವಿ, ಗಂಟಲು ಆಸ್ಪತ್ರೆಯಲ್ಲಿ ಡಾ. ಯೇಲ್ ಎಲ್. ಫಿಷರ್ ಸಣ್ಣ ಕ್ಷೌರದ ಕತ್ತಿ ಮತ್ತು ೨೦ ಸಲ ದೊಡ್ಡದು ಮಾಡುವ ತೂಗು ಸೂಕ್ಷ್ಮದರ್ಶಕವನ್ನುಪಯೋಗಿಸಿ ಕಣ್ಣಿನ ಹಿಂಭಾಗದಲ್ಲಿ ದೃಷ್ಟಿಗೆ ಅಡ್ಡವಾಗಿಲ್ಲದ್ದ ಹಳೇ ಗಾಯದ ಕಲೆಯನ್ನು ತೆಗೆದರು. ೪ ವರ್ಷಗಳ ಹಿಂದೆ ಇದು ಸಾಧ್ಯವಿರುತ್ತಿರಲಿಲ್ಲ.

ಹಿಂದೆ ಸುರೂಪಿಕ ಶಸ್ತ್ರಚಿಕಿತ್ಸೆಯಲ್ಲಿ ತಿಂಗಳು ವರ್ಷಗಳು ತೆಗೆದುಕೊಳ್ಳುತ್ತಿದ್ದ ಕೆಲಸಗಳು ಈಗ ಸೂಕ್ಷ್ಮವೈದ್ಯ ರೀತಿಗಳಿಂದ ಒಂದು ದಿನದಲ್ಲೇ ಮುಗಿಯುತ್ತವೆ.

ಈಗ ಹೊಸ ಶಲ್ಯ ಮತ್ತು ಕಲಾತತ್ತ್ವಗಳು ಸೂಕ್ಷ್ಮ ಶಸ್ತ್ರಕಲೆಯ ಎಲ್ಲಾ ಶಾಖೆಗಳಿಗೂ ವಿಸ್ತರಿಸುತ್ತಿವೆ. ಈಚೆಗೆ ರೂ. ೮,೦೦,೦೦೦ ಬೆಲೆಯ ಶಸ್ತ್ರಚಿಕಿತ್ಸಾ ಸೂಕ್ಷ್ಮದರ್ಶಕಗಳು ಬಂದಿವೆ. ಅವುಗಳಲ್ಲಿ ಪ್ರತಿಯೊಂದರಲ್ಲೂ ಒಂದೇ ಸಲಕ್ಕೆ ಹಲವರು ಕೆಲಸ ಮಾಡಬಲ್ಲವು. ಪಾದಗಳಿಂದ ನಡೆಸಿ ಸರಿಮಾಡಿಕೊಳ್ಳಬಹುದು. ನೆರಳು ಬೀಳದ ಬೆಳಕನ್ನು ಹೊಂದಬಹುದು. ಹಿಡಕಟ್ಟು, ಕತ್ತರಿ, ಚಿಮುಟ ಮುಂತಾದ

ಪುನಃ ಹೊಸ ಹೊಸದಾಗಿ ಬರುತ್ತವೆ. ದ್ವಿಧ್ರುವ ರಕ್ತ ನಾಳ ಕಟ್ಟಿಸುವುದು ವಿದ್ಯುಚ್ಛಕ್ತಿಯಿಂದ ಸುತ್ತ ರಕ್ತ ಸೋರುವುದನ್ನು ನಿಲ್ಲಿಸುತ್ತ. ಸುತ್ತ ಮಾಂಸ ಹಾನಿಗೊಳ್ಳುವುದನ್ನು ಕಡಿಮೆ ಮಾಡಬಹುದು. ಸೂಕ್ಷ್ಮದರ್ಶಕದಲ್ಲಿ ಒಂದು ತೊಟ್ಟು ರಕ್ತ ಕೂಡ ಅತಿ ದೊಡ್ಡದಾಗಿ ಕಾಣುತ್ತದೆ. ಅದನ್ನು ತಪ್ಪಿಸಲು ದ್ವಿಧ್ರುವ ರಕ್ತನಾಳ ಕಟ್ಟಿಸುವುದು ಬಹು ಸಹಾಯಕಾರಿ.

ಮಿದುಳು. ಮಿದುಳು ಬಳ್ಳಿಗಳ ಮೇಲೆ ಶಸ್ತ್ರಕ್ರಿಯೆ ನಡೆಸುವುದು ಮೊದಲು ಅಸಾಧ್ಯವಾಗಿತ್ತು. ಈಗ ಸೂಕ್ಷ್ಮ ಶಸ್ತ್ರವೈದ್ಯದಿಂದ ಸಣ್ಣ ಗಡ್ಡೆಗಳನ್ನು ತೆಗೆಯುವುದು ಸುಲಭವಾಗಿದೆ. ರಕ್ತ ಬುದ್ಬುದಗಳನ್ನು ಅವು ಒಡೆಯುವುದಕ್ಕಿಂತ ಮುಂಚೆ, ತೆಗೆಯುವುದು ಸೂಕ್ಷ್ಮ ಶಸ್ತ್ರಕ್ರಿಯೆಯಿಂದ ಸಾಧ್ಯ.

ಕ್ಲೀವ್‌ಲೆಂಡ್ ಕ್ಲಿನಿಕ್‌ನಲ್ಲಿ ಸಾವಿರಾರು ಸಂತಾನಹರಣ ಚಿಕಿತ್ಸೆಗಳನ್ನು ಗಂಡಸರಲ್ಲಿ ಮಾಡುತ್ತಾರೆ. ಅವರಲ್ಲಿ ಸುಮಾರು ೩% ಮತ್ತೆ ಮರು ಮದುವೆಯಾದ ಮೇಲೆ. ಮಕ್ಕಳನ್ನು ಪಡೆಯಲು ಇಚ್ಛಿಸುತ್ತಾರೆ. ವೀರ್ಯನಾಳದ ಒಳದಾರಿ ಬಹು ಸೂಜಿ ವ್ಯಾಸವಿರುವುದರಿಂದ ಶಸ್ತ್ರಕ್ರಿಯೆ ಕಷ್ಟ. ಸೂಕ್ಷ್ಮ ಶಸ್ತ್ರವೈದ್ಯದಿಂದ ಈಗ ೮೦% ರಷ್ಟು ಗಂಡಂದಿರ ವೀರ್ಯದಲ್ಲಿ ವೀರ್ಯಾಣುಗಳಿದ್ದು, ೫೫%ಹೆಂಡತಿಯರು ಬಸುರಾಗುತ್ತಾರೆ.

ಮೂತ್ರಾಂಗಗಳ ಶಸ್ತ್ರವೈದ್ಯದಲ್ಲೂ ಸೂಕ್ಷ್ಮದರ್ಶಕದಿಂದ ಬಹಳ ಪ್ರಯೋಜನವಾಗುತ್ತದೆ.

ಈಗ ಸೂಕ್ಷ್ಮ ಶಸ್ತ್ರವೈದ್ಯದ ಸಾಧ್ಯತೆಗೆ ಕೊನೆಯಿದ್ದಂತೆ ತೋರುವುದಿಲ್ಲ. ಗರ್ಭಕೋಶನಾಳಗಳನ್ನು ಸರಿಪಡಿಸುವುದು, ಮೂಗಿನ ಮೂಲಕ ಪಿಟ್ಯುಯಿಟರಿ ಗ್ರಂಥಿಯ ತೊಂದರೆಗಳನ್ನು ಗುಣ ಪಡಿಸುವುದು. ಮೂತ್ರಜನಕಾಂಗ ಮತ್ತು ಮೂತ್ರಜನಕಾಂಗನಾಳದ ಕಲ್ಲುಗಳನ್ನು ತೆಗೆಯುವುದು, ಮಿದುಳಿನ ಧಮನಿಗಳಲ್ಲಿ ಕೊಬ್ಬಿನ ತುಣುಕುಗಳನ್ನು ತೆಗೆಯುವುದು ಮತ್ತು ವಿಕಾರಗಳನ್ನು ತಿದ್ದುವುದು ಮುಂತಾದುವಾಗುತ್ತಿವೆ.

ತೋಳು, ಕಾಲು, ಇತ್ಯಾದಿ ತುಂಡಾದ ಭಾಗಗಳನ್ನು ಸೂಕ್ಷ್ಮ ಶಸ್ತ್ರವೈದ್ಯದಲ್ಲಿ ಉಪಯೋಗಿಸುವ ದಿನಗಳು ಮುಂದೆ ಬರಬಹುದು. ಹಾಗೆಯೇ ಮಾನವ ದೇಹದ ಬಿಡಿ ಭಾಗಗಳ ಬ್ಯಾಂಕುಗಳು ಸ್ಥಾಪಿತವಾಗಬಹುದು. ✡



## ಅರ್ಹತೆ

ಸ್ವರ್ಗದ ಬಾಗಿಲಲ್ಲಿ ದ್ವಾರಪಾಲಕ ನಿಂತಿದ್ದಾನೆ. ಅಲ್ಲಿಗೆ ಒಬ್ಬ ಗೃಹಸ್ಥ ಬಂದ. ಅವನಲ್ಲಿ ಪಾಂಡಿತ್ಯದ ಹೆಮ್ಮೆ ಇತ್ತು. ದ್ವಾರಪಾಲಕನು ಅವನನ್ನು ತಡೆದ. ಆತ, "ಏಕೆ? ನಾನು ಅನೇಕ ಧರ್ಮಶಾಸ್ತ್ರಗಳ ಅಧ್ಯಯನ ಮಾಡಿದವನು; ನನಗೆ ಸ್ವರ್ಗದಲ್ಲಿ ಪ್ರವೇಶವಿಲ್ಲವೇ?" ಎಂದು ಕೇಳಿದ. ದ್ವಾರಪಾಲಕ, "ನೀನು ಧರ್ಮಗ್ರಂಥಗಳ ಅಧ್ಯಯನವನ್ನು ನಿಃಸ್ವಾರ್ಥ ಭಾವದಿಂದ ಮಾಡಿರುವೆಯಾ? ಇದನ್ನು ಪರೀಕ್ಷಿಸಬೇಕಾಗಿದೆ ನಿಲ್ಲು," ಎಂದ. ಮತ್ತೊಬ್ಬ ಮುಂದೆ ಬಂದ. ಅವನು, "ನಾನು ಅನೇಕ ವ್ರತಗಳನ್ನು ಸಂಪನ್ನಗೊಳಿಸಿದ್ದೇನೆ; ಅನೇಕ ಯಜ್ಞಗಳನ್ನು ಮಾಡಿದ್ದೇನೆ," ಎಂದ. ದ್ವಾರಪಾಲಕ ಅವನನ್ನೂ ಹಾಗೆಯೇ ತಡೆದು ನಿಲ್ಲಿಸಿದ. ಕೊನೆಗೆ ಒಬ್ಬ ರೈತ ಅಲ್ಲಿಗೆ ಬಂದ. ಅವನು, "ನಾನು ಹೊಲದ ಹತ್ತಿರ ವಾಸವಾಗಿದ್ದೆ. ಬಡವ, ಆದರೂ ಆಯಾಸಗೊಂಡು ಬಂದ ಪಥಿಕರನ್ನು ಮನೆಗೆ ಕರೆದೊಯ್ದು ಮಲಗಲು ಸ್ಥಳ ಕೊಡುತ್ತಿದ್ದೆ. ಎಂದಾದರೂ ಒಂದೆರಡು ಒಣ ರೊಟ್ಟಿ ತಿನ್ನಲು ಕೊಡುತ್ತಿದ್ದುದೂ ಉಂಟು" ಎಂದ. ದ್ವಾರಪಾಲಕ ಅವನಿಗಾಗಿ ಕೂಡಲೆ ದ್ವಾರ ತೆರೆದ.

– ಆನಂದ ದಂಡಾಪುರ

# JOHNSON®

# ಪ್ರೆಷರ್ ಕುಕ್ಕರ್

## – ಎಲ್ಲಾ ವಿಚಾರಗಳಲ್ಲೂ ಇದು ಜಯಶಾಲಿ




- ಸ್ಟೇನ್‌ಲೆಸ್ ಸ್ಟೀಲ್‌ನಂತಹ ಹೊಳಪು
- ಅಧಿಕ 'ಹಿಸ್' ಶಬ್ದ
- ಇನ್ಸುಲೇಟ್ ಆದ ಒತ್ತಡದ ಬಟ್ಟು
- ಹೆಚ್ಚು ಸುರಕ್ಷಿತವಾದ ಸೇಫ್ಟಿ ವಾಲ್ವ್
- ಸಂಪೂರ್ಣ ಕುಟಿಕರ ರಿವೆಟಿಂಗ್
- ಅತಿ ಕಠಿಣ ಹೊರಮೈ
- ಬಿಸಿ ತಟ್ಟದ ಹಿಂಬದಿಯ ಹಿಡಿ
- ಅತಿ ದಪ್ಪ ಗ್ಯಾಸ್ಕೆಟ್
- ಮಜಬೂತಾದ ಜಾಲರಿ ತಟ್ಟೆ
- ಉತ್ತಮ ರಚನೆಯುಳ್ಳ ವೆಂಟ್ ಟ್ಯೂಬ್
- ಸರಾಗ ಹಿಡಿತವುಳ್ಳ ಬಲವಾದ ಹಿಡಿಗಳು

ಅತಿ ವಿಸ್ತಾರ ಶ್ರೇಣಿ :
4.5, 5.5, 6.5,7.5. 9.
11,13.5 ಮತ್ತು 16
ಲೀಟರುಗಳ ಸೈಜುಗಳಲ್ಲಿ



# ಏಲಕ್ಕಿ

**ಕರುಣಾಕರ ಕೋವರ್ ಕೊಲ್ಲಿ**

ದಾಲ್ಚಿನ್ನಿ-ಲವಂಗಗಳಂತೆ ಏಲಕ್ಕಿಯೂ ಸಂಬಾರ ಜೀನಸುಗಳಲ್ಲಿ ಅತ್ಯಮೂಲ್ಯವಾದದ್ದು.

ಇದುಉಷ್ಣಪ್ರದೇಶದಲ್ಲಿ ತಂಪು ನೆರಳಿನಲ್ಲಿ ಬೆಳೆಯುವ ಬೆಳೆ. ಸಾಮಾನ್ಯವಾಗಿ ಈ ಬೆಳೆಯು ಸಮುದ್ರ ತೀರದಿಂದ ೨೫೦೦ ಅಡಿಯಿಂದ ೩೫೦೦ ಅಡಿ ಎತ್ತರ ಪ್ರದೇಶಗಳಲ್ಲಿ, ಸುಮಾರು ೮೦ ಇಂಚಿನಿಂದ ೧೫೦ ಇಂಚಿನವರೆಗೆ ಮಳೆ ಬೀಳುವ ಗುಡ್ಡ ಕಾಡುಗಳಲ್ಲಿ ಬೆಳೆಯುವುದು. ದಟ್ಟವಾದ ಕಾಡು ಪ್ರದೇಶವಾದ ಪಶ್ಚಿಮ ಘಟ್ಟಗಳಲ್ಲಿ ಇದು ಅಧಿಕವಾಗಿ ಬೆಳೆಯುವುದು. ಏಲಕ್ಕಿಯ ಗಿಡದ ಬುಡದಲ್ಲಿ ಸದಾ ನೀರಿನ ತೇವ ಇರಬೇಕು. ಇದರ ಸಸಿಗಳನ್ನು ಇತರ ಗಿಡಗಳನ್ನು ನೆಡುವ ಹಾಗೆ ನೆಲವನ್ನು ಸಮತಟ್ಟು ಮಾಡಿ ನಡಬೇಕಾಗಿಲ್ಲ. ಕಾಡು ಪ್ರದೇಶದ ಕುರಚಲು ಮುಳ್ಳುಗಳನ್ನು ಕಡಿದು ಇಳಿಜಾರು ಪ್ರದೇಶಗಳಲ್ಲಿ ಬಹಳ ಸುಲಭವಾಗಿ ನೆಡಬಹುದು.

ಏಲಕ್ಕಿಯ ಬೀಜಗಳಿಂದ ಸಸಿಗಳನ್ನು ಮಾಡುತ್ತಾರೆ. ಏಲಕ್ಕಿ ಹಣ್ಣಿನ ಹೊರಮೈಯಲ್ಲಿ ಮೆದುವಾದ ರಸ ತುಂಬಿದ ಸಿಪ್ಪೆಯಿರುವುದು. ಅದರ ಒಳ ಭಾಗದಲ್ಲಿ ಮೂರು ಹಂತಗಳಲ್ಲಿ ಪುಡಿ ಬೀಜವಿರುವುದು. ಬೀಜದ ಹಣ್ಣನ್ನು ಆಯ್ಕೆಮಾಡುವಾಗ ಯಾವ ರೀತಿಯ ರೋಗಗಳಿಗೂ ಒಳಗಾಗಿರದ ಹಾಗೂ ಅಧಿಕ ಇಳುವರಿ ಕೊಡುವ ಗಿಡದ ಬುಡದಿಂದ ಉತ್ತಮ ಹಣ್ಣನ್ನು ಆಯ್ದು. ಅದನ್ನು ನೀರಿನಲ್ಲಿ ನೆನೆಹಾಕಬೇಕು. ನಂತರ ಬಹಳ ಎಚ್ಚರಿಕೆವಹಿಸಿ

ಹಣ್ಣಿನ ಮೇಲಿನ ಸಿಪ್ಪೆಯನ್ನು ಮೃದುವಾಗಿ ಹಿಸುಕಿ ಒಳಗಿನ ಬೀಜದ ಕಣಗಳನ್ನು ಹೊರತೆಗೆಯಬೇಕು. ಈ ಸಣ್ಣ ಬೀಜವನ್ನು ತಣ್ಣೀರಿನಲ್ಲಿ ಹಾಕಿ ಮೂರು ನಾಲ್ಕು ಬಾರಿ ತೊಳೆಯಬೇಕು. ಹೀಗೆ ತೊಳೆದು ಶುಭ್ರವಾದ ಬೀಜವನ್ನು ಧೂಳು ಬೂದಿಯಲ್ಲಿ ಮಿಶ್ರಮಾಡಿ ನೆರಳಿನಲ್ಲಿ ಸುಮಾರು ಮೂರು ದಿನಗಳ ಕಾಲ ಒಣಗಲು ಬಿಡಬೇಕು. ಬೀಜಗಳು ಒಣಗಿದ ನಂತರ ನೆಲದ ಪಾತಿಗಳಲ್ಲಿ ಮೊಳಕೆಗೆ ಬಿತ್ತಬೇಕು.

ಕೇರಳ ಹಾಗೂ ತಮಿಳುನಾಡುಗಳಲ್ಲಿ ಏಲಕ್ಕಿಯ ಬೀಜಗಳನ್ನು ನವೆಂಬರ್ ಡಿಸೆಂಬರ್‌ಗಳಲ್ಲಿ ಸಂಗ್ರಹಿಸುತ್ತಾರೆ. ಕರ್ನಾಟಕದಲ್ಲಿ ಸೆಪ್ಟೆಂಬರ್ ಅಕ್ಟೋಬರ್ ತಿಂಗಳುಗಳಲ್ಲಿ ಸಂಗ್ರಹಿಸುತ್ತಾರೆ.

ಸಾಮಾನ್ಯವಾಗಿ ಎಲ್ಲಾ ಬೆಳೆಗಳ ಬೀಜಗಳನ್ನು ಬಿತ್ತಲು ಆಯ್ಕೆಮಾಡಿದ ಸಮತಟ್ಟಾದ ಸ್ಥಳವನ್ನು ಉಪಯೋಗಿಸುವುದು ಸಹಜ. ಹಾಗೆ ಏಲಕ್ಕಿ ಬಿತ್ತನೆಗೆ ಸಹ ಉತ್ತಮವಾದ ಸ್ಥಳ ಅತ್ಯವಶ್ಯಕ. ಆಯ್ಕೆ ಮಾಡಿದ ಸ್ಥಳದಲ್ಲಿ ಒಂದು ಅಡಿಯಷ್ಟು ಆಳವಾಗಿ ಮಣ್ಣನ್ನು ಕದಿದು ಸಡಿಲಿಸಬೇಕು. ಇಂಥ ಪ್ರದೇಶದಲ್ಲಿ ಅಗತ್ಯವಿರುವ ಉದ್ದ ಅಳತೆಯಲ್ಲಿ ಪಾತಿಯನ್ನು ನಿರ್ಮಿಸಬೇಕು. ನಂತರ ಪಾತಿಯ ಮೇಲ್ಭಾಗದಲ್ಲಿ ಅಧಿಕ ಪ್ರಮಾಣದ ಫಲವತ್ತಾದ ಕಾಡು ಮಣ್ಣನ್ನು ಹರಡಬೇಕು. ಬೀಜ ಬಿತ್ತುವಾಗ ಒಂದು ಚದರ ಮೀಟರಿಗೆ ಸುಮಾರು ಹತ್ತು ಗ್ರಾಮಿನಷ್ಟು ಬೀಜವನ್ನು ಸಾಲಾಗಿ ಬಿತ್ತಬೇಕು. ಬಿತ್ತನೆಯ ನಂತರ ವಾಟರ್ ಕೇನಿನಿಂದ ತುಂತುರು ತುಂತುರಾಗಿ ತಣ್ಣನೆ ನೀರು ಬಿಡಬೇಕು. ನಂತರ ಭತ್ತದ ಒಣ ಹುಲ್ಲಿನಿಂದ ಪಾತಿಯನ್ನು ಮುಚ್ಚಬೇಕು. ಆಗ ಬಿತ್ತನೆಯ ಪ್ರದೇಶದ ನೀರಿನ ತೇವ ಬಹುಬೇಗನೆ ಆರುವುದಿಲ್ಲ. ಹೀಗೆ ದಿನಕ್ಕೆ ಎರಡು ಬಾರಿಯಂತೆ ನೀರು ಬಿಡುತ್ತಿರಬೇಕು (ಮಳೆ ಇಲ್ಲವಾದರೆ). ಒಮ್ಮೆ ಮೊಳಕೆಗೆ ಪ್ರಾರಂಭವಾಯಿತೆಂದರೆ, ಪಾತಿಯ ಮೇಲೆ ಮುಚ್ಚಿದ ಹುಲ್ಲನ್ನು ತೆಗೆದುಹಾಕಿ, ಬಿಸಿಲಿನ ತಡೆಗೆ ಚಪ್ಪರ ಹಾಕಬೇಕು.

ಕೇರಳ ಹಾಗೂ ತಮಿಳ್ನಾಡುಗಳಲ್ಲಿ ಆರು ತಿಂಗಳ ಏಲಕ್ಕಿ ಸಸಿಗಳನ್ನು ಎರಡನೆ ಹಂತದ ಪಾತಿಗಳಿಗೆ ಕಿತ್ತು ನೆಡುತ್ತಾರೆ. ಬಿತ್ತನೆಗೆ ಉಪಯೋಗಿಸುವ ಪಾತಿಗಳ ಹಾಗೆ ಎರಡನೆಯ ಬಾರಿಯ ಪಾತಿಗೆ ಉತ್ತಮ ಸಗಣಿಗೊಬ್ಬರದ ಹುಡಿ ಹಾಗೂ ಮರದ ಬೂದಿಯನ್ನು ಅಧಿಕ ಪ್ರಮಾಣದಲ್ಲಿ ಉಪಯೋಗಿಸಬೇಕು. ಮೊದಲನೆಯ ಪಾತಿಯಿಂದ ಏಲಕ್ಕಿ ಸಸಿಗಳನ್ನು ಎರಡನೆಯ ಪಾತಿಗೆ ಕಿತ್ತು ನೆಡುವುದಕ್ಕಿಂತ ಮುಂಚೆ ನೆರಳಿಗೆ ಚಪ್ಪರವನ್ನು ಹಾಕಬೇಕು. ಚಿಕ್ಕ ಸಸಿಗಳನ್ನು ಕಿತ್ತು ನೆಡಲು ಮೇ-ಜೂನ್ ತಿಂಗಳುಗಳು ಅನುಕೂಲ.

ಎರಡನೇ ಹಂತದ ಪಾತಿಯಲ್ಲಿ ಸಸಿಯನ್ನು ಬಹಳ ಜಾಗ್ರತೆಯಿಂದ ನೋಡಿಕೊಳ್ಳಬೇಕು. ಎರಡೂ ವೇಳೆ ನೀರನ್ನು ತಪ್ಪದೆ ಹಾಕಬೇಕು. ಒಣಗಿದ ಎಲೆಯ ಸೊಪ್ಪನ್ನು ಸಸಿಗಳ ಸುತ್ತಲೂ ಹರಡಬೇಕು.

ಕರ್ನಾಟಕದಲ್ಲಿ ೧೦ನೇ ತಿಂಗಳಿನಲ್ಲಿ ಏಲಕ್ಕಿ ಸಸಿಯನ್ನು ತೋಟದಲ್ಲಿ ನೆಡುತ್ತಾರೆ. ಏಲಕ್ಕಿ ಮಂಡಳಿಯವರು ದಕ್ಷಿಣ ಭಾರತದಲ್ಲಿ ಅಗತ್ಯವಾದ ಪಾತಿಗಳನ್ನು ಕಾಪಾಡಿಕೊಂಡು ಏಲಕ್ಕಿ ಬೆಳೆಗಾರರಿಗೆ ಉತ್ತಮ ರೀತಿಯಲ್ಲಿ ನೆರವಾಗುತ್ತಿದ್ದಾರೆ.

ಕೇರಳದ ವಲ್ಲಿಯಾರ್, ಚಿನ್ನಕನಲ್, ಸಾಂತಮ್‌ಪರ, ಉಡುಂಬ, ಚೋಲ, ಪಂಪಡುಂಪರ, ಅಮಯಾರ್, ಕುಟ್ಟಪ್ಪನ್, ಪುಟ್ಟಾಡಿ, ವಂಡಿಪರಿಯಾರ್, ಕುಮಿಳಿ, ತಮಿಳ್ನಾಡಿನ ರಾಜಪಾಳಯಂ, ದಕ್ಷಿಣ ಪಲನಿ, ಕರ್ನಾಟಕದ ವೀರಾಜಪೇಟೆ, ಸೋಮವಾರ ಪೇಟೆ, ಮಡಿಕೇರಿ, ಎಸಳೂರು, ಸಕಲೇಶಪುರ, ಮೂಡಿಗೆರೆಗಳಲ್ಲಿ ಏಲಕ್ಕಿ ಬೆಳೆಯಲು ಈ ಮಂಡಳಿ ತುಂಬ ಜಾಗ್ರತೆ ವಹಿಸುತ್ತಿದೆ.

ಈಗೀಗ ಕೇರಳದ ಏಲಕ್ಕಿ ಮಂಡಳಿಯವರು ಪಾತಿಗಳ ಸಸಿಗಳ ೧೮ ತಿಂಗಳುಗಳಲ್ಲಿಯೇ ಮಾರಾಟ ಶುರುಮಾಡುತ್ತಾರೆ. ಆದರೆ ಕರ್ನಾಟಕದಲ್ಲಿ ೧೦ ತಿಂಗಳ ಸಸಿಗಳನ್ನು ಮಾರಾಟ ಮಾಡುವರು.

ಏಲಕ್ಕಿಯು ಮೇಲೆ ಹೇಳಿದಂತೆ ದಟ್ಟವಾದ ಕಾಡು ಪ್ರದೇಶದಲ್ಲಿ ಬಹಳ ಚೆನ್ನಾಗಿ ಬೆಳೆಯುತ್ತದೆ. ಆದುದರಿಂದ ತುಂಬಾ ನೆರಳು ಇರುವ ಮರವನ್ನು ತುಸು ತೆಳುವಾಗಿ ರೆಂಬೆಗಳನ್ನು ಕದಿದುಕೊಳ್ಳಬಹುದು. ನಂತರ ೬೦ × ೬೦ × ೩೫ ಸೆಂಟಿಮೀಟರ್ ಅಂತರದಲ್ಲಿ ಸಸಿಗಳನ್ನು ನೆಡಬಹುದು. ಏಲಕ್ಕಿ ಗಿಡಗಳನ್ನು ನೆಡಲು ಮೇ-ಜೂನ್ ತಿಂಗಳು ಉತ್ತಮ. ಯಾಕೆಂದರೆ ಅಧಿಕ ಮಳೆಯಾದರೆ ಸಸ್ಯ ಗಿಡಗಳ

## ಇನ್ನಿಷ್ಟು ವಿವರಗಳು

ಏಲಕ್ಕಿ (ಆಡುಭಾಷೆಯಲ್ಲಿ ಯಾಲಕ್ಕಿ) ಸೈಟಾಮಿನಿ ಉಪವರ್ಗದ ಜಿಂಜಿಬರೇಸಿ ಸಸ್ಯವರ್ಗಕ್ಕೆ ಸೇರಿದ್ದು. ಏಕದಳ ಪಂಗಡದ ಬಹುವಾರ್ಷಿಕ ಸಸ್ಯವಾದ ಏಲಕ್ಕಿಗೆ ಎಲೆಟೇರಿಯಾ ಕಾರ್ಡಮೋಮಮ್ ಎಂಬ ವೈಜ್ಞಾನಿಕ ಹೆಸರಿದೆ.

ಸಂಸ್ಕೃತದಲ್ಲಿ "ಉಪಕುಂಚಿಕ" ಎಂದು ಕರೆಯಲ್ಪಡುವ ಏಲಕ್ಕಿಗೆ ಮರಾಠಿಯಲ್ಲಿ "ವೇಲ್ದೋಡಾ" (ಆಡು ಭಾ ಷೆಯ ಲ್ಲಿ ವೇಲ್ಚಿ, ವಿಲಾಯ್ಚಿ), ಗುಜರಾತಿಯಲ್ಲಿ "ಏಲ್ಚಿ"; ಕೊಂಕಣಿಯಲ್ಲಿ "ಯಾಳ"; ಉರ್ದುವಿನಲ್ಲಿ "ಇಲಾಯ್ಚಿ" (ಹೈದ್ರಾಬಾದಿನ ಉರ್ದುವಿನಲ್ಲಿ "ಹೇಲಾಚಿ") ಎನ್ನುತ್ತಾರೆ. ತುಳು ಭಾಷೆಯಲ್ಲಿ "ಏಲಕ್ಕಿ" ಎಂದೇ ಕರೆಯಲ್ಪಡುತ್ತದೆ.

ಮೊದಲು ಕಾಡಿನಲ್ಲಿ ಬೆಳೆಯುತ್ತಿದ್ದ ಇದು ಕೆಲ ಶತಮಾನಗಳಿಂದ ವಾಣಿಜ್ಯ ಬೆಳೆಯಾಗಿದೆ.ತೋಟಗಳಲ್ಲಿ ಸಾಕಷ್ಟು ಆಧುನಿಕ ತಂತ್ರಗಳಿಂದ ಏಲಕ್ಕಿ ಬೆಳೆಯಲ್ಪಡುತ್ತಿದೆ. ಸುಮಾರು ಆರರಿಂದ ಹನ್ನೆರಡು ಅಡಿಗಳ ವರೆಗೆ ಎತ್ತರವಾಗಿ ಬೆಳೆಯುವ ಇದರ ಕೃಷಿ ಶಾಖಯುಂತೆಯೇ. ನೆರಳು ಅತ್ಯಗತ್ಯ.

ಕಾಯಿಯ ಗಾತ್ರದ ಮೇಲೆ ಏಲಕ್ಕಿಯ ವರ್ಗೀಕರಣ ನಡೆಯುತ್ತದೆ. ವರ್ಗೀಕರಣಕ್ಕೆ ಅನುಗುಣವಾಗಿ ಬೆಲೆ ನಿರ್ಧರಿಸಲ್ಪಡುತ್ತದೆ. ಸಿಲೋನ್ ಏಲಕ್ಕಿ ನಾವು ಸಾಮಾನ್ಯವಾಗಿ ನೋಡುವ ಏಲಕ್ಕಿಗಿಂತ ಉದ್ದವಾಗಿದೆ (ಒಂದು ಅಂಗುಲ). ನಾವು ನೋಡುವುದು ಮಲಬಾರ್ ಏಲಕ್ಕಿ. ಇದು ಗಿಡ್ಡ ಜಾತಿಯದು. ಕೇರಳದ ನೀಲಗಿರಿ ಬೆಟ್ಟಗಳ ಪ್ರದೇಶದಲ್ಲಿದು ಬೆಳೆಯುತ್ತದೆ. ಇದೇ ಜಾತಿಯ ಏಲಕ್ಕಿಯನ್ನು ಕರ್ನಾಟಕದ ಪಶ್ಚಿಮ ತೀರದ ಜಿಲ್ಲೆಗಳಲ್ಲಿ ಮಲೆನಾಡಿನಲ್ಲೂ ಕೃಷಿ ಮಾಡಲಾಗುತ್ತದೆ. ಇದಕ್ಕಿಂತ ದೊಡ್ಡ ಜಾತಿಯ ಏಲಕ್ಕಿ (ಅಮೋಮಮ್ ಕಾರ್ಡಮಾಮಮ್)ಯನ್ನು ಇಂಡೋಚೀನ, ಪೂರ್ವ ಹಾಗೂ ಪಶ್ಚಿಮ ಆಫ್ರಿಕ, ಥಾಯಲಂಡ್ ವಿಯೆಟ್ನಾಂ ಮತ್ತು ಲಾವೋಸಗಳಲ್ಲಿ ಬೆಳೆಯುತ್ತಾರೆ.

ಒಂದು ಎಕರೆಯಲ್ಲಿ ಚೆನ್ನಾಗಿ ಬೆಳೆದ ಗಿಡಗಳಿಂದ ೨೫೦ ಪೌಂಡುಗಳ ವರೆಗೂ ಸರಾಸರಿ ೧೫ ವರ್ಷಗಳ ವರೆಗೆ ಏಲಕ್ಕಿಯನ್ನು ಪಡೆಯಬಹುದು.

---

ಕೊಳೆತು ಹೋಗುವ ಸಂಭವವಿದೆ. ಗಿಡ ನೆಡುವಾಗ ಸಗಣಿಗೊಬ್ಬರದ ಕಾಂಪೋಸ್ಟನ್ನು ಮತ್ತು ರಾಸಾಯನಿಕ ಗೊಬ್ಬರವನ್ನು ಗುಂಡಿಯ ಮೇಲ್ಭಾಗದಲ್ಲಿ ಹಾಕಬೇಕು. ಗಿಡಗಳ ಬುಡದಲ್ಲಿ ದಟ್ಟವಾದ ಸೊಪ್ಪನ್ನು ಅಥವಾ ಒಣ ಎಲೆಯನ್ನು ತಂಪಾಗಿರಲು ಹರಡಬೇಕು.

ಸಾಮಾನ್ಯವಾಗಿ ಏಲಕ್ಕಿಯು ಏಪ್ರಿಲ್–ಮೇಯಿಂದ ಹೂಬಿಡಲು ಶುರುವಾಗುತ್ತದೆ. ಒಂದು ವರ್ಷದಲ್ಲಿ ಐದರಿಂದ ಏಳುಬಾರಿ ಹಣ್ಣನ್ನು ಕೊಯ್ಯುವರು. ಹಣ್ಣಾದ ಏಲಕ್ಕಿಯನ್ನು ಕೊಯ್ದು ಬಿಸಿಲಿನಲ್ಲಿ ಅಥವಾ ಉಗ್ರಾಣಗಳಲ್ಲಿ ಕೃತಕ ಶಾಖದಿಂದ ಒಣಗಿಸಬಹುದು. ಕೊಯ್ದ ಏಲಕ್ಕಿಯನ್ನು ಚೆನ್ನಾಗಿ ನೀರಿನಲ್ಲಿ ತೊಳೆದು ತೆಳುವಾಗಿ ಒಣಗಲು ಹಾಕಬೇಕು. ಹಣ್ಣು ಒಣಗಲು ಸುಮಾರು ೪೮ ಗಂಟೆಗಳ ಕಾಲ ಬೇಕಾಗುತ್ತದೆ. ಒಣಗಿದ ಏಲಕ್ಕಿಯು ತುಸು ಹಸುರು ಬಣ್ಣಕ್ಕೆ ಬಂದರೆ ಅದು ಉತ್ತಮ ತರದ ಏಲಕ್ಕಿಯ ವರ್ಗಕ್ಕೆ ಸೇರುತ್ತದೆ. ಹಸುರು ಏಲಕ್ಕಿಗೆ ಹೊರದೇಶಗಳಲ್ಲಿ ಒಳ್ಳೆಯ ಮಾರುಕಟ್ಟೆಯಿದೆ. ಈ ತರದ ಹಸುರು ಬಣ್ಣ ಬರಲು ಕೆಲವರು ಒಣಗುವುದಕ್ಕಿಂತ ಮುಂಚಿತವಾಗಿ ೨% ವಾಷಿಂಗ್ ಸೋಡದ ದ್ರವದಲ್ಲಿ ೧೦ ನಿಮಿಷಗಳ ಕಾಲ ಇರಿಸುವುದುಂಟು.

ಏಲಕ್ಕಿಯಿಂದ ತೈಲವನ್ನು ತೆಗೆಯುತ್ತಾರೆ. ಈ ತೈಲವೂ ಹೊರ ದೇಶಕ್ಕೆ ಅಧಿಕ ಪ್ರಮಾಣದಲ್ಲಿ ರಫ್ತಾಗುತ್ತಿದೆ. ಭಾರತದಲ್ಲಿ ಏಲಕ್ಕಿಯ ಬೆಲೆ ಒಂದು ಕಿಲೋಕ್ಕೆ ೧೫೦ ರೂಪಾಯಿಗಳು. ಆದರೆ ಹೊರ ದೇಶದಲ್ಲಿ ಸುಮಾರು ೪೦೦ ರೂಪಾಯಿಗಳು.

ಏಲಕ್ಕಿಯ ಉತ್ಪಾದನೆ, ರಫ್ತು ಮತ್ತು ರಫ್ತು ಗಳಿಕೆಯಲ್ಲಿ ೧೯೭೮–೭೯ ಒಂದು ಸಾಧನೆಯ ವರ್ಷ. ಈ ವರ್ಷದಲ್ಲಿ ೪ ಸಾವಿರ ಮೆಟ್ರಿಕ್‌ಟನ್ ಏಲಕ್ಕಿಯನ್ನು ಉತ್ಪಾದಿಸಲಾಯಿತು. ೨,೯೦೦ ಮೆಟ್ರಿಕ್ ಟನ್ ಏಲಕ್ಕಿಯನ್ನು ರಫ್ತು ಮಾಡಲಾಯಿತು. ಈ ರಫ್ತಿನಿಂದ ಆದ ಗಳಿಕೆ ೬೦ ಕೋಟಿ ರೂ.ಗಳು. ಇದು ಹಿಂದಿನ ಎಲ್ಲ ದಾಖಲೆಗಳನ್ನು ಮೀರಿದ ಹೊಸ ದಾಖಲೆ.

೧೯೭೭–೭೮ರಲ್ಲಿ ೩,೯೦೦ ಮೆಟ್ರಿಕ್ ಟನ್ ಏಲಕ್ಕಿಯ ಉತ್ಪಾದನೆಯಾಯಿತು. ೨.೭೬೩ ಮೆಟ್ರಿಕ್ ಟನ್ ರಫ್ತಾಯಿತು. ಇದರ ರಫ್ತು ಗಳಿಕೆ ೪೮೪ ಕೋಟಿ ರೂಪಾಯಿಗಳಾಗಿತ್ತು. ಮುಂದೆಯೂ ಇದೇ ರೀತಿಯಲ್ಲಿ ಉತ್ಪಾದನೆ ಹಾಗೂ ರಫ್ತುಗಳಿಕೆಯನ್ನು ಹೆಚ್ಚಿಸುವ ಪ್ರಯತ್ನಗಳನ್ನು ಮಾಡಲಾಗುತ್ತಿದೆ. ಪ್ರಸಕ್ತ ಹಣಕಾಸು ವರ್ಷದಲ್ಲಿ ೪೫೦೦ ಮೆಟ್ರಿಕ್ ಟನ್ ಏಲಕ್ಕಿ ಉತ್ಪಾದನೆಯ ನಿರೀಕ್ಷೆಯಿದೆ.

ಇದರಲ್ಲಿ ಕರ್ನಾಟಕದ ಪಾಲು ೭೦೦ ಮೆಟ್ರಿಕ್ ಟನ್‌ಗಳು, ೮,೦೦೦ ಜನ ಸಣ್ಣ ಹಿಡುವಳಿದಾರರು, ೨,೮೦೦ ಹೆಕ್ಟೇರ್ ಪ್ರದೇಶದಲ್ಲಿ ಏಲಕ್ಕಿಯನ್ನು ಬೆಳೆಯುತ್ತಿದ್ದಾರೆ. ✡



ಒಂದು ಪರ್ವತ ಪ್ರದೇಶದ ಒಬ್ಬ ವ್ಯಕ್ತಿಯ ಮನೆಯ ಬಳಿ ಅನಾದಾರದಿಂದ ಒಂದು ಶಿಲಾಪ್ರತಿಮೆ ಬಿದ್ದಿತ್ತು. ಅದನ್ನು ನೋಡಿದ ಕಲಾವಿದನೊಬ್ಬ ಆ ವ್ಯಕ್ತಿಯನ್ನು, "ಇದನ್ನು ಮಾರುತ್ತೀಯಾ?" ಎಂದು ಕೇಳಿದ. ಆ ಪ್ರತಿಮೆಯ ಮಾಲಿಕ ನಗುತ್ತಾ, "ಇದನ್ನಾರು ಕೊಳ್ತಾರೆ?" ಎಂದು ಕೇಳಿದ.

ಆ ಕಲಾವಿದ ಬೆಳ್ಳಿಯ ಒಂದು ನಾಣ್ಯವನ್ನು ತನ್ನ ಜೇಬಿನಿಂದ ಅವನಿಗೆ ತೆಗೆದು ಕೊಟ್ಟ. ಪ್ರತಿಮೆಯ ಮಾಲಿಕ ವಿಸ್ಮಯ ಚಕಿತನಾದ. ಪ್ರತಿಮೆಯನ್ನು ಕಲಾವಿದನ ಸ್ವಾಮ್ಯಕ್ಕೆ ವಹಿಸಿಕೊಡುತ್ತಾ, "ನಾನು ನಿಮ್ಮ ಸ್ಥಾನದಲ್ಲಿದ್ದರೆ ಇದಕ್ಕೆ ಒಂದು ಎಂಟಾಣೆಯನ್ನೂ ಕೊಡುತ್ತಿರಲಿಲ್ಲ." ಎಂದು ಹೇಳಿದ.

ಇದು ನಡೆದು ಕೆಲ ವಾರಗಳೇ ಸಂದುಹೋದವು. ಮೇಲೆ ಹೇಳಿದ ಆ ಪರ್ವತ ಪ್ರದೇಶದ ವ್ಯಕ್ತಿ ಒಮ್ಮೆ ನಗರಕ್ಕೆ ಬಂದಾಗ ಒಂದು ಬಂಗಲೆಯೆದುರು ಅಸಾಧ್ಯ ಜನಜಂಗುಳಿ ಸೇರಿದ್ದನ್ನು ಕಂಡ.

ಒಬ್ಬ ವ್ಯಕ್ತಿ ಕಿರುಚುತ್ತಾ ಹೇಳಿದ, "ಯುನಾನಿನ ಪ್ರಾಚೀನ ಕಲೆಯ ಶ್ರೇಷ್ಠ ಮಾದರಿ; ಪ್ರವೇಶ ಶುಲ್ಕ ಕೇವಲ ಎರಡೇ ಎರಡು ರೂಪಾಯಿಗಳು."

ಪರ್ವತ ಪ್ರದೇಶದ ವ್ಯಕ್ತಿಯೂ ಕೂಡ ಎರಡು ರೂಪಾಯಿ ಪ್ರವೇಶ ಶುಲ್ಕವನ್ನು ತೆತ್ತು ಬಂಗಲೆಯೊಳಕ್ಕೆ ಪ್ರವೇಶಿಸಿದ. ಆತ ಕಲೆಯ ಶ್ರೇಷ್ಠ ಮಾದರಿಯನ್ನು ನೋಡಿದಾಗ ಅದು ತಾನು ನಿರುಪಯುಕ್ತ ವಸ್ತು– ಕುರೂಪಿ ಪ್ರತಿಮೆ ಎಂದು ತಿಳಿದು ಎಂದೋ ಒಂದು ರೂಪಾಯಿಗೆ ಯಾರಿಗೋ ಮಾರಿದ್ದ ಮೂರ್ತಿ ಆದಾಗಿತ್ತು.

–ಖಲೀಲ್ ಜಿಬ್ರಾನ್

ಸಂಗ್ರಹ: **ಎಸ್. ವಿಶ್ವನಾಥ**

# ಇವರು ನಮ್ಮ ಪೂರ್ವಜರು...

ಕೃಷ್ಣ

ಆಸ್ಪತ್ರೆಯ ಆವಾರದಲ್ಲಿ ಬೆಂಚಿನ ಮೇಲೆ ಕುಳಿತಾಗ ನನ್ನ ಮನಸ್ಸು ಪೂರ್ತಿ ಶಸ್ತ್ರಚಿಕಿತ್ಸೆಯ ಕೋಣೆಯ ಮೇಲೆ, ಒಳಗಿದ್ದ ರೋಗಿಯ ಮೇಲೆ ನೆಟ್ಟಿತ್ತು. ಶಸ್ತ್ರಚಿಕಿತ್ಸೆ ಯಶಸ್ವಿಯಾಗಿ ಅವನು ಜೀವಂತ ಮರಳಿ ಬರುತ್ತಾನೆಂದು ಒಳಮನಸ್ಸು ಹೇಳುತ್ತಿತ್ತಾದರೂ ಅದನ್ನು ಒಮ್ಮೆಲೆ ನಂಬಲಾಗದಂತಹ ಶಂಕೆ ಕಾಡುತ್ತಿತ್ತು. ಯೋಚನೆಗಳ ತಾಕಲಾಟದಿಂದ ಮನಸ್ಸಿನ ಸ್ತಿಮಿತವೇ ಕದಡಿ ಹೋಗಿತ್ತು. ಕಣ್ತೆರೆದೇ ಕುಳಿತಿದ್ದರೂ ದೃಷ್ಟಿ ಮತ್ತೆಲ್ಲೋ ನೆಟ್ಟಿರುವಂಥ ಅವಸೆ. ಅಂದು ಸೂರ್ಯನಿಗೂ ಬಹುಶಃ ವಿಶ್ರಾಂತಿಯ ದಿನವಾಗಿರಬೇಕು. ಮುಗಿಲಲ್ಲಿ ಆತ ಮಸುಣೆಸುತ್ತಿದ್ದಂತೆ,

ಸಮಯ ಸರಿಯುತ್ತಿದ್ದಂತೆ ನನಗಂತೂ ಅನಿಸುತ್ತಲೇ ಇರಲಿಲ್ಲ. ಆ ಉದ್ವಿಗ್ನ ಅವಸ್ಥೆಯಲ್ಲಿ ಅದೇನೋ ಜಡದ ಅನುಭವ. ಕುಳಿತಲ್ಲೇ ನಾನೂ ಮರಗಟ್ಟಿ ಹೋಗುತ್ತೇನೋ ಎಂಬ ಶಂಕೆಯೂ ಕಾಡಿತು... ಒಮ್ಮೊಮ್ಮೆ ನನ್ನ ಮನಸ್ಸುದೇಹಗಳೆರಡೂ ತೀರ ವಿಭಿನ್ನ ಜಗತ್ತಿನಲ್ಲೇ ಅಲೆಯುತ್ತಿವೆಯೇನೊ ಎಂಬ ಭಾವನೆ ಸುಳಿಯುತ್ತಿರುವಂತೆಯೇ ಆ ಒಂದು ಘಟನೆ ನನ್ನನ್ನು ಇಹ ಜಗತ್ತಿಗೆ ಎಳೆದು ತಂದು ಸ್ವಾರ್ಥದ ಹೊರಗೂ ಜಗತ್ತಿದೆಯೆಂಬ ವಾಸ್ತವ ಚಿತ್ರವನ್ನು ಕಣ್ಣೆದುರು ನಿಲ್ಲಿಸಿತು.

ಎದುರುಗಡೆಯ ಅಂಗಳದಲ್ಲಿ ಹುಲ್ಲ ಮೇಲೇನೋ ಧೊಪ್ಪನೆ ಬಿದ್ದಂತೆನಿಸಿ ನನ್ನ ಗಮನವೆಲ್ಲ ಆ ಕಡೆ ಹರಿಯಿತು. ಎತ್ತರದ ಗಿಡದಿಂದ ಮಂಗನ ಮರಿಯೊಂದು ಆಯ ತಪ್ಪಿ ಕೆಳಕ್ಕೆ ಬಿದ್ದಿತ್ತು. ಅದು ಚೀರುತ್ತ ಒದ್ದಾಡುವುದನ್ನು ನೋಡಲಾಗದೆ ಅದನ್ನೆತ್ತಿ ಉಪಚರಿಸಬೇಕೆಂದು ನಾನು ನಿರ್ಧರಿಸುವುದಕ್ಕೆ ಕ್ಷಣಾರ್ಧ ಹಿಡಿದಿರಬೇಕು. ಆದರೆ ಅಷ್ಟರಲ್ಲೇ ಅದರ ಬೆನ್ನ ಹಿಂದೆಯೇ ಮಿಂಚಿನಂತೆ ಹಾರಿ ಬಂತು ತಾಯಿ ಮಂಗ. ಅದು ಏನು ಮಾಡಬಹುದೆಂಬ ಕುತೂಹಲ ನನ್ನಲ್ಲಿ ಅರಳಿ ನನ್ನ ಗಮನವೆಲ್ಲ ಅತ್ತಲೇ ಹರಿಯಿತು. ಭಯದಿಂದ ತತ್ತರಿಸಿ ಹೋಗಿದ್ದ ತಾಯಿಯೂ ಪೆಟ್ಟು ತಿಂದ ಮಗುವನ್ನು ನೋಡಿ ಚೀರತೊಡಗಿತು. ಆದರೆ ತಾಯಿ ಎಷ್ಟು ಪ್ರಯತ್ನಿಸಿದರೂ ಮರಿಗೆ ಸ್ವಾಭಾವಿಕ ರೀತಿಯಲ್ಲಿ ತಾಯಿಯನ್ನು ತಬ್ಬಿಕೊಳ್ಳಲಾಗಲೇಯಿಲ್ಲ. ಕೊನೆಗೆ ತಾಯಿ ಮರಿಯನ್ನು ಮನುಷ್ಯರು ಎತ್ತಿಕೊಳ್ಳುವಂತೆ ಒಂದು ಕೈಯಿಂದ ಎತ್ತಿ ಮಗುವನ್ನು ಹೆಗಲ ಮೇಲೆ ಹಾಕಿಕೊಂಡು ಮರವನ್ನು ಏರಲೆತ್ನಿಸಿತು. ಆದರೆ ಒಂದೇ ಕೈಯ ಆಧಾರದಿಂದ ಏರಬೇಕಿದ್ದ ತಾಯಿಗೆ ಅದೂ ಕಷ್ಟದ ಕೆಲಸವಾಗಿ ಪರಿಣಮಿಸಿತು. ಕೊನೆಗೆ ಹೇಗೋ ಒಂದು ಅಗಲವಾದ ಟೊಂಗೆಯನ್ನಾಶ್ರಯಿಸಿತು. ಆಗಲೂ ಮರಿಯ ಅಳಲು ನಿಲ್ಲಲಿಲ್ಲ. ತಾಯಿ–ಮಗುಗಳೆರಡೂ ಚೀರಲಾರಂಭಿಸಿದುವು. ನನಗೆ ಆ ಕ್ಷಣಕ್ಕೆ ಅದೇನೋ ಮನುಷ್ಯಸಹಜ ಜೀವನವನ್ನೇ ಕಾಣುತ್ತಿರುವಂತೆ ತೋರಿತು. ಮರಿಯನ್ನು ತನ್ನ ತೊಡೆಗಳ ಮೇಲೆ ಹಾಕಿಕೊಂಡು ರಮಿಸುವ ತೆರದಲ್ಲಿ ಅದರ ತಲೆಯ



ಮೇಲೆ ಕೈಯಾಡಿಸುತ್ತ ಅದನ್ನು ಮಮತೆಯಿಂದ ಮುದ್ದಿಸುತ್ತಿತ್ತಾದರೂ ಮರಿಯು ಅಳಲು ಮಾತ್ರ ನಿಲ್ಲಲಿಲ್ಲ. ತಾಯಿ ಮಂಗ ಅಸಹಾಯಳಂತೆ ಒಮ್ಮೆ ದಿಗಂತವನ್ನು ನೋಡುತ್ತಿತ್ತು, ಮತ್ತೊಮ್ಮೆ ಚೀರುತ್ತಿತ್ತು. ಅದರ ಈ ಅವಸ್ಥೆ ಅದೇ ಮರದ ಇನ್ನೊಂದು ಟೊಂಗೆಯ ಮೇಲಿದ್ದ ಬೇರೊಂದು ಮಂಗಕ್ಕೆ ಅರ್ಥವಾಗಿರಬೇಕು. ಕಂಕುಳಲ್ಲಿದ್ದ ತನ್ನ ಮರಿಯನ್ನು ಅಲ್ಲಿಯೇ ಟೊಂಗೆಯ ಮೇಲೆಯೇ ಬಿಟ್ಟು ಅದು ಸರ್ರನೆ ಈ ಮಂಗವಿರುವಲ್ಲಿಗೆ ಧಾವಿಸಿ ಅನಂತರ ಗಾಯ-ಗೊಂಡ ಮರಿಯನ್ನು ತಾನು ಎತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಂಡು ರಮಿಸ-ತೊಡಗಿತು. ಅದು ಮರಿಯ ಎರಡೂ ಕಿವಿಗಳಲ್ಲಿ ಊದಿದಂತೆ ಮಾಡಿ ತಾನು ಲಲ್ಲೆಗರೆಯುತೊಡ-ಗಿತು. ತಾಯಿ ಇದನ್ನು ನೋಡುತ್ತ ತೆಪ್ಪಗೆ ಕುಳಿತಿತ್ತು.

ಆಹಾ! ಇಂದೆಂಥ ಮನುಷ್ಯಸಹಜ ವರ್ತನೆ ಈ ಕೋತಿಗಳದು ಎಂಬ ವಿಚಾರ ಸಟ್ಟನೆ ನನ್ನ ತಲೆಯಲ್ಲಿ ಸುಳಿಯಿತು. ಆದರೆ ಮರುನಿಮಿಷದಲ್ಲೇ ಮನುಷ್ಯರಿಗೂ ಕೋತಿಗಳಿಗೂ ಇರುವ ಅಂತರ ವೇದ್ಯವಾಯಿತು. ನಮ್ಮ ನೆರೆಯವರಲ್ಲಿ ಯಾರಾದರೂ ಸತ್ತರೂ ನಾವು ಮರುವಿಚಾರ ವಿಲ್ಲದೆ ಹೆಣ ಹೊರಲೂ ಮುಂದಾಗುವುದಿಲ್ಲ. ಆದರೆ ಮೂಕ ಪ್ರಾಣಿಗಳ ಈ ಜಗತ್ತಿನಲ್ಲಿ "ನಾಗರಿಕತೆ" ಇನ್ನೂ ಚುಚು ಪ್ರವೇಶ ಮಾಡಿಲ್ಲವಲ್ಲ!

ಆದರೆ ಕೋತಿ ಜಗತ್ತಿನಲ್ಲಿಯ ಈ ಸಹಜ ಕ್ರಿಯೆಯನ್ನು ನೋಡಿದ ನಂತರ ಸರ್ಜನ್ನರ ಟೇಬಲ್ ಮೇಲೆ ಮಲಗಿದ್ದ ಬಂಧುವಿನ ಭವಿಷ್ಯ-ತ್ತಿನ ಬಗ್ಗೆ ನನ್ನಲ್ಲಿ ಯಾವ ಉದ್ವಿಗ್ನತೆಯೂ ಉಳಿಯಲಿಲ್ಲ.

✡

# ಈ ಹುಡುಗರ ಮಾತು ಯಾರು....ಕೇಳಬೇಕು

ಗೋವಿಂದಮೂರ್ತಿ ದೇಸಾಯಿ

ಹೋಳೀ ಹುಣ್ಣಿಮೆ ಬಂತೆಂದರೆ ಶಿರಹಟ್ಟಿಯ ಉಲಕೋಚಿ ಹುಡುಗರಿಗೆ ಎಲ್ಲಿಲ್ಲದ ಸಂಭ್ರಮ. ಕಾಮದಹನದಲ್ಲಿ ಯಾರ ಮನೆಯ ವಸ್ತುಗಳು ಬೂದಿಯಾದಾವೆಂದು ಹೇಳುವುದು ದುಷ್ಕರ. ರಾತ್ರಿಯೆಲ್ಲಾ ಹುಡುಗರು ಓಣಿ ಓಣಿ ಅಲೆದಾಡಿ ಕೈಗೆ ಸಿಕ್ಕ ಪದಾರ್ಥಗಳನ್ನು ಉಡಾಯಿಸಿಕೊಂಡು ಬಂದು, ಕಾಮನ ಬೆಂಕಿಯಲ್ಲಿ ಚೆಲ್ಲಿಬಿಡುತ್ತಿದ್ದರು. ಈ ಚಂಡಾಳ ಚೌಕಳಿಯ ಪ್ರಮುಖರೆಂದರೆ ಶ್ರೀಮಂತ ಮೋರೋಪಂತರ ಮಕ್ಕಳಾದ ರಘು, ರಾವಜಿ ಹಾಗು ಅವರ ತಮ್ಮಂದಿರಾದ ಶ್ರೀಮಂತ ಮಾಧವರಾಯರ ಮಕ್ಕಳಾದ ಭಾವು ಮತ್ತು ಮುರಲಿ! ಇವರ ಸುತ್ತಲೂ ಇವರ ವಯಸ್ಸಿನ ಎಂಟ್ಹತ್ತು ಹುಡುಗರ ಗುಂಪು! ಇವರನ್ನು ನಿಯಂತ್ರಿಸುವುದು ಯಾರಿಗೂ ಸಾಧ್ಯವಿರಲಿಲ್ಲ, ಏನ್ನುವಷ್ಟು ಉಡಾಳರಿದ್ದರು!

ಮೋರೋಪಂತರ ವಾಡೆಯ ಮಕ್ಕಳು ಯಾವ ಕಿಡಿಗೇಡಿ ಕೆಲಸ ಮಾಡಿದರೂ ನಡೆಯುತ್ತಿತ್ತು. ಕಾರಣ, ಶಿರಹಟ್ಟಿಯವರು ಶ್ರೀಮಂತ ಮೋರೋಪಂತರ ದರ್ಪಕ್ಕೆ ಅಂಜುತ್ತಿದ್ದರು. ಊರವರೆಲ್ಲರೂ ಒಂದಿಲ್ಲ ಒಂದು ರೀತಿ ಅವರ ಹಂಗಿನಲ್ಲಿ ಸಿಕ್ಕಿದ್ದವರೇ. ಶಿರಹಟ್ಟಿಯ ಸುತ್ತು ಮುತ್ತಲಿನ ಅರ್ಧ ಭೂಮಿ ಮೊರೋಪಂತರಿಗೆ ಸಾಲದಲ್ಲಿ ಬಂದಿದ್ದವು. ಅಲ್ಲದೆ ಮೋರೋಪಂತರು. ಸಂಸ್ಥಾನದ ರಾಜನಿಗೆ ದೂರದ ಸಂಬಂಧಿಕರಾಗಿದ್ದರು. ಸಂಸ್ಥಾನಿಕರು ತಮ್ಮ ತಾಲೂಕಾದ ಶಿರಹಟ್ಟಿಗೆ ಬಂದಾಗ ಒಂದು ದಿವಸ ಮೋರೋಪಂತರಲ್ಲಿ ಭೋಜನಕ್ಕೆ ಬರುತ್ತಿದ್ದರು. ಆಗ ಶಿರಹಟ್ಟಿಯ ಪ್ರತಿಷ್ಠಿತರಲ್ಲದೆ ಸರಕಾರೀ ಅಧಿಕಾರಿಗಳೂ ಆಹ್ವಾನಿತರಾಗಿ ವಾಡೆಗೆ ಬರುತ್ತಿದ್ದರು. ಮೋರೋಪಂತರ ಮುತ್ತಜ್ಜನು ನಾಲ್ಕುರೂಪಾಯಿ ಸಂಬಳಕ್ಕೆ ಸಂಸ್ಥಾನಿಕರ ಕಾರಭಾರಿಯೆಂದು ಶಿರಹಟ್ಟಿಗೆ ಬಂದ. ಮುಂದೆ ಅವನು ಕಾರಭಾರಿಕೆಯನ್ನು ಕಳೆದುಕೊಂಡರೂ, ಹತ್ತು ತಲೆಗಳಿಗೆ ಸಾಕಾಗುವಷ್ಟು ಗಡದ್ದು ಭೂಮಿ, ಬೆಳ್ಳಿ ಬಂಗಾರಗಳನ್ನು ಮಾಡಿಟ್ಟ.

ಈ ಸಲದ ಹೋಳೀ ಹುಣ್ಣಿಮೆಯಲ್ಲಿ ರಘು, ರಾವಜಿ, ಭಾವು, ಮುರಲಿ ಸೇರಿ ಹುಣ್ಣಿಮೆಯ ರಾತ್ರಿ ತಮ್ಮಣ್ಣನ ಕುದುರೆಯನ್ನು ಕದ್ದು, ಅವರ ಬಾಲಕ್ಕೊಂದು ಡಬ್ಬಿಯನ್ನು ಕಟ್ಟಿ ಊರಲ್ಲಿ ಹತ್ತಬೇಕೆಂದು ಯೋಜಿಸಿದರು. ತಮ್ಮಣ್ಣನು ನಾಲ್ಕಾರು ಹಳ್ಳಿಗಳ ಶಾನುಭೋಗಿಕೆಯನ್ನು ಮಾಡುತ್ತಿದ್ದುದರಿಂದ ಕುದುರೆಯನ್ನು ಕಟ್ಟಿದ್ದನು. ಅವನಿಗೆ ಮಕ್ಕಳಿಲ್ಲದ್ದರಿಂದ ಅವನು ತನ್ನೆಲ್ಲ ಪ್ರೀತಿಯನ್ನೂ ಕುದುರೆಯ ಮೇಲೆ ತೋರಿಸುತ್ತಿದ್ದನು. ಕುದುರೆಯ ಚಾಕರಿಯೊಂದಿಗೆ ಅವನಿಗೆ ಎಲ್ಲಿಲ್ಲದ ಉತ್ಸಾಹ. ಮೋರೋಪಂತರ ವಾಡೆಯಲ್ಲಿ ಕೂಡ ಎರಡು ಕುದುರೆಗಳಿದ್ದವು. ಅವರು ಅವುಗಳನ್ನು ಡಮಣಿಯನ್ನೆಳೆಯಲು ಉಪಯೋಗಿಸುತ್ತಿದ್ದರು. ಅವು ಸೊರಗಿ ಸಣ್ಣಗಾಗಿದ್ದವು. ಹೀಗಾಗಿ ಮೊರೋಪಂತರ ತಟ್ಟೂ ಕುದುರೆಗಳ ಮುಂದೆ, ತಮ್ಮಣ್ಣನ ಕುದುರೆ ಐರಾವತದಂತೆ ಕಾಣುತ್ತಿತ್ತು!



ತಮ್ಮಣ್ಣನ ಕುದುರೆಗೆ ಹೊಡಿಸಿದರು.

"ತಮ್ಮಾಜಿ... ನೀನೇಕೆ ನಿನ್ನೆ ಕುದುರೆಯ ಲಿಂಗಾಲುಗಳನ್ನು ಕಟ್ಟಿರಲಿಲ್ಲ...?" ಎಂದು ರೊಚ್ಚಿಗೆದ್ದು ಮೋರೋಪಂತರು ಬೈದರು.

"ಸರಕಾರ್... ನಾನು... ರಾತ್ರಿ ಕಟ್ಟಿಯೇ ಮಲಗಿದ್ದೆ..." ಎಂದನು, ನಡುಗುತ್ತ ತಮ್ಮಣ್ಣ. ಅವನು ತಾನೇ ಅಪರಾಧ ಮಾಡಿದವನಂತೆ ಹೆದರಿ ನಿಂತಿದ್ದನು.

"ಕಟ್ಟಿದ್ದರೆ... ಅದು ಹೇಗೆ... ರಘುವನ್ನು ಒದೆಯಿತು ಹೇಳು...? ನೀನು ಸುಳ್ಳು ಹೇಳುತ್ತಿ... ನಾಳಿಂದ ನಾಳೆಗೆ ಹೋಗಿ ಈ ಪೋಲಿ ಕುದುರೆಯನ್ನು ಪಂಢರಪುರ ಸಂತೆಯಲ್ಲಿ ಮಾರಿ ಬಾ... ಅರ್ಜುನ ಅದಕ್ಕೆ ಇನ್ನಷ್ಟು ಲಗಾಯಿಸು..." ಎಂದರು. ಮೋರೋಪಂತರು.

ಪಾಪ, ಅರ್ಜುನನ ಹೊಡೆತವನ್ನು ಸಹಿಸಲಾರದ ಕುದುರೆ ಜಿಗಿದಾಡಹತ್ತಿತು. ಅದನ್ನು ಸಹಿಸಲಾರದ ತಮ್ಮಣ್ಣನು, "ಸರಕಾರ್... ಮಾಫ್ ಮಾಡಿಬಿಡಿರಿ... ಅದರ ಬದಲು... ಬೇಕಾದರೆ ನನಗೆ ಹೊ...ಡೆ...ಯಿ...ರಿ...," ಎಂದನು. ಅವನ ಕಣ್ಣಿಂದ ನೀರು ಉದುರುತ್ತಿತ್ತು.

ಆಗ ಭಾವು, "ರಘು ಬಾಯಿಬಿಟ್ಟು ನೀನಾದರೂ ಏನಾಯಿತೆಂದು ಖರೇ ಹೇಳೋ... ಪಾಪ... ಕುದುರೆ ಹೊಡೆತ ತಿನ್ನಹತ್ತಿದೆಯಲ್ಲ," ಎಂದು ಅಂಗಲಾಚಿದರೂ ರಘು ಸುಮ್ಮನಿದ್ದನು.

ಮುರಲಿ ಮೆಲ್ಲನೆ, "...ಪಾಪ... ಕುದುರೆಗೇ ಮಾತನಾಡಲಿಕ್ಕೆ ಬರುತ್ತಿದ್ದರೆ ನಮ್ಮ ಹೂರಣವೆಲ್ಲಾ ಹೊರಗೆ ಬರುತ್ತಿತ್ತು... ಆಗ...ಮೊರೋಕಾಕಾನಿಗೆ ರಘು ಮಾಡಿದ್ದು ತಿಳಿಯುತ್ತಿತ್ತು..." ಎಂದನು.

"ಮುರಲಿ, ನಿನಗಷ್ಟು ತಿಳಿಯುವುದಿಲ್ಲವೇನೋ... ರಘು ಬಾಯಿಯಿದ್ದೂ ಮೂಕನಾಗಿದ್ದಾನೋ... ನನಗೆ ಕಣ್ಣಿದ್ದೂ ಕಾಣದಂತಾಗಿದೆ..." ಎಂದು, ನರಳುತ್ತ ರಾಮಜಿ ಮೆತ್ತಗೆ ಭಾವೂನಿಗೆ ಹೇಳಿದನು.

ರಘು ಹಾಗು ರಾಮಜಿಯನ್ನು ಡಮಣಿಯಲ್ಲಿ ಹಾಕಿಕೊಂಡು ಶಾಲೆಗೆ ಹೋಗಬೇಕೆಂದು ಮೋರೋಪಂತರು ಡಮಣಿಯನ್ನು ತರಲು ಅರ್ಜುನನ್ನು ವಾಡೆಗೆ ಓಡಿಸಿದರು. ಅರ್ಜುನನು ವಾಡೆಗೆ ಹೋದವನೇ ಅರೆಕ್ಷಣದಲ್ಲಿ ಮರಳಿ ಓಡುತ್ತ ಬಂದು, "ಸರಕಾರ್. ನಮ್ಮ ಡಮಣಿ ಮಾಯವಾಗಿದೆ. ಹುಡುಗರು ಎಳೆದೊಯ್ದು ಕಾಮನ ಬೆಂಕಿಗೆ ಹಾಕಿದರೇನೋ...!" ಎಂದು ನಡಗುತ್ತ ನಿಂತ.

ಅಲ್ಲಿಯೇ ಇದ್ದ ಭಾವು ರಾಮಜಿಗೆ, "ರಾಮಜಿ... ನಮ್ಮ ಪಳಂಕರು ನಾವಿತ್ತ ಬಂದಾಗ ನಮ್ಮ ಡಮಣಿಯನ್ನೇ ಎಬ್ಬಿಸಿಕೊಂಡು ಬಂದು ಬೆಂಕಿಗೆ ಹಾಕಿದ್ದಾರೆ ನೋಡು. ಡಮಣಿಯನ್ನು ಸರಿಯಾಗಿ ಇಡದ್ದಕ್ಕೆ, ಕುದುರೆಗೆ ಹೊಡೆದಂತೆ, ಮೋರೋಕಾಕಾನಿಗೇಕೆ ಹೊಡೆಯಬಾರದು...!" ಎಂದು ನಕ್ಕನು. ಆದರೆ ಇವು ಹುಡುಗರ ಮಾತುಗಳು... ಇವುಗಳನ್ನು ಯಾರು ಕೇಳಬೇಕು? ✡



ತೊಂಡೈ ಬಂತೂಂಡ್ರೆ ತಲೆಯಿಂದಲ್ಲ, ಕಾಲ್ನಿಂದ ನಿಜಾರಾ ಮಾಡೋಕಾರಂಭಿಸ್ತಾವೆ ಎಲ್ಲಾವೂ.

# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದಭಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧ ಕಗ್ಗಂಟು.
(ಅ) ಕೆಲಸಕ್ಕೆ ಬಾರದ ಹಣ (ಆ) ಬಿಡಿಸಲಾರದ ಸಮಸ್ಯೆ (ಇ) ಹಣದ ನಷ್ಟ (ಈ) ಬಲವಾಗಿ ತಗಲಿದ್ದು

೨ ಕುಂದಕ
(ಅ) ಬಂಗಾರದ ಆಭರಣ (ಆ) ದೋಷ (ಇ) ಕಂಬ (ಈ) ದೊಡ್ಡ ಕಣೆ

೩. ಶಾಬ್ದಿಕ
(ಅ) ಸಪ್ಪಳ (ಆ) ಬೈಗಳು (ಇ) ಬಾಯ್ಮಾತಿನ (ಈ) ಶಾಸ್ತ್ರಾಧಾರ

೪ ಪೌರಸ್ತ್ಯ
(ಅ) ಪೂರ್ವ ದಿಕ್ಕಿನ (ಆ) ಒಬ್ಬ ದೈತ್ಯ (ಇ) ಪಟ್ಟಣದ (ಈ) ಸೋತು ಹೋದ

೫ ಬೆಸೆ
(ಅ) ಜೋಡಿಸು (ಆ) ಮರಿಹಾಕು (ಇ) ವಿಷ (ಈ) ಮಿಗಿಲು ಸಂಖ್ಯೆ

೬. ಮುಗ್ಗಟ್ಟು
(ಅ) ದುರ್ವಾಸನೆ (ಆ) ಸಂಕಟ (ಇ) ಮುಂದಿನ ಭಾಗ (ಈ) ಬಾಯಿ ಬಡಾಯಿ

೭. ಸರ್ವತೋಮುಖ
(ಅ) ಕಲಸು ಮೇಲೋಗರ (ಆ) ಒಂದು ಯಜ್ಞ (ಇ) ಎದುರಾಬದುರು (ಈ) ಎಲ್ಲಾ ಕಡೆಯಿಂದ

೮. ಮುಖಾಬಿಲೆ
(ಅ) ಬಾಯಿ ಬಡಿಯುವಿಕೆ (ಆ) ಒಬ್ಬ ಪೋಲೀಸು ಅಧಿಕಾರಿ (ಇ) ಎದುರಾಬದುರು (ಈ) ಅರ್ಧ ಮುರಿದದ್ದು

೯. ಕಟ್ಟೆದಿರು
(ಅ) ನೇರವಾಗಿ ಎದುರು (ಆ) ಬಂಧಿಸಿ ಹಾಜರು ಮಾಡುವುದು (ಇ) ಮನೆ ಮುಂದಿನ ಜಗಲಿ (ಈ) ಮಾರಾಮಾರಿ

೧೦. ಉಸ್ತುವಾರಿ
(ಅ) ಹೊಲ ಉಳುವುದು (ಆ) ಮೇಲ್ವಿಚಾರಣೆ (ಇ) ಒಂದೇ ಬಗೆಯ ವೇಷ (ಈ) ವಸತಿ ಸೌಕರ್ಯ

೧೧. ಆನುಷಂಗಿಕ
(ಅ) ಆಧಾರಕ್ಕೆ ಕೊಟ್ಟ ಕಂಬ (ಆ) ಸಂಪಾದಿಸಿದ್ದು (ಇ) ಸಂಬಂಧಪಟ್ಟಂಥ (ಈ) ಸಂನ್ಯಾಸಕ್ಕೆ ಸಂಬಂಧಿಸಿದ

೧೨. ವಿತೃಷ್ಣೆ
(ಅ) ಬೆಳ್ಳಗಿನವಳು (ಆ) ಸಮಾಧಾನ (ಇ) ಹಂಚುವಿಕೆ (ಈ) ವೈರಾಗ್ಯ

೧. **ಕಗ್ಗಂಟು** (ಅ) ಬಿಡಿಸಲಾರದ ಗಂಟು, ಜಟಿಲ ಪ್ರಶ್ನೆ, ಕಷ್ಟಕರವಾದ ಸಮಸ್ಯೆ. ಉದಾ:— ಅವಳ ವರ್ತನೆ ಕಗ್ಗಂಟಾಗಿದೆ. [ಕನ್ನಡ, ಕಗ್ = ಕಡು + ಗಂಟು]

೨. **ಕುಂದಕ** (ಅ) ದೋಷ, ಕೊರತೆ. ಉದಾ:— ಸುಮ್ಮನೆ ಕುಂದಕವಿಟ್ಟು ನುಡಿಯಬೇಡ. [ಕನ್ನಡ, ಕುಂದು = ಕುಗ್ಗುವಿಕೆ + ಕ]

೩. **ಶಾಬ್ದಿಕ** (ಇ) ಬಾಯ್ಮಾತಿನ, ಮಾತಿಗೆ ಸಂಬಂಧಿಸಿದ, ವ್ಯಾಕರಣಶಾಸ್ತ್ರದ. ಉದಾ:– ಶಾಬ್ದಿಕ ಆಡಂಬರ. [ಸಂ. ಶಬ್ದ = ಮಾತು–ಇಂದ]

೪. **ಪೌರಸ್ತ್ಯ** (ಅ) ಪೂರ್ವದಿಕ್ಕಿನ, ಎದುರುಗಿನ, ಮುಂದಿನ. ಉದಾ:— ಪೌರಸ್ತ್ಯ ದೇಶಗಳು. [ಸಂ. ಪುರಃ = ಎದುರಿನ, ಪೂರ್ವದ–ಇಂದ]

೫. **ಬೆಸೆ** (ಅ) ಜೋಡಿಸು, ಒಂದಕ್ಕಿಂತ ಹೆಚ್ಚು ತುಂಡುಗಳನ್ನು ಸಂದುಗೂಡಿಸು. ಉದಾ:— ಅವರ ಹೃದಯಗಳು ಬೆಸೆದುಕೊಂಡವು. [ದೇಶ್ಯ]

೬. **ಮುಗ್ಗಟ್ಟು** (ಅ) ಸಂಕಟ, ವಿಪತ್ತು, ಬಿಕ್ಕಟ್ಟು. ಉದಾ:– ಹಣಕಾಸಿನ ಮುಗ್ಗಟ್ಟು. [ಕನ್ನಡ, ಮುಗ್ಗು = ಎಡವು, ನಿಶ್ಶಕ್ತವಾಗು + ಕಟ್ಟು = ಬಿಗಿತ]

೭. **ಸರ್ವತೋಮುಖ** (ಈ) ಎಲ್ಲಾ ಕಡೆಯಿಂದ; ಎಲ್ಲ ಕಡೆ ನೋಡಬಲ್ಲ. ಉದಾ:– ಸರ್ವತೋಮುಖ ಪ್ರಗತಿ [ಸಂ. ಸರ್ವತಃ = ಎಲ್ಲಕಡೆ + ಮುಖ = ಮೋರೆ]

೮. **ಮುಕಾಬಿಲೆ** (ಇ) ಎದುರಾಬದುರು, ಮುಖಾಮುಖಿ, ಭೇಟಿಯಾಗುವುದು, ಹೋಲಿಸುವಿಕೆ. ಉದಾ:— ಎರಡೂ ಪಕ್ಷಗಳಿಗೆ ಮುಕಾಬಿಲೆ ಮಾಡಿಸಿದ. [ಉರ್ದು, ಅರಬ್ಬಿ, ಮುಕಾಬಿಲಃ]

೯. **ಕಟ್ಟಿದಿರು** (ಅ) ನೇರವಾಗಿ ಎದುರು, ಮುಂದುಗಡೆ, ಮುಖಾಮುಖಿ. ಉದಾ:– ರಾಣಿಯ ಕಟ್ಟಿದುರಲ್ಲೇ ಕೊಲೆಯಾಯಿತು. [ಕನ್ನಡ, ಕಟ್ = ಕಡು + ಇದಿರು]

೧೦. **ಉಸ್ತುವಾರಿ** (ಅ) ಮೇಲ್ವಿಚಾರಣೆ. ವ್ಯವಸ್ಥೆ, ಉದಾ:— ಆಸ್ತಿಯ ಉಸ್ತುವಾರಿ. [ಉರ್ದು, ಫಾರಸಿಯಿಂದ, ಉಸ್ತವಾರಿ = ಪಕ್ಕಾ ಆಗಿರುವಿಕೆ]

೧೧. **ಆನುಷಂಗಿಕ** (ಇ) ಸಂಬಂಧಪಟ್ಟ, ಮುಖ್ಯ ವಿಷಯಕ್ಕೆ ಸಂಬಂಧಿಸಿದಂತೆ ಬೇರೆ ಪ್ರಯೋಜನ. ಉದಾ:–ಆನುಷಂಗಿಕ ಲಾಭ [ಸಂ. ಅನು = ಹಿಂದಿನಿಂದ ಬಂದ = ಸಂಗ = ಸಂಬಂಧ]

೧೨. **ವಿತೃಷ್ಣೆ** (ಈ) ವೈರಾಗ್ಯ, ಆಸಕ್ತಿ ಇಲ್ಲದಿರುವುದು, ಉದಾ:— ಸಂಸಾರದಲ್ಲಿ ವಿತೃಷ್ಣೆ ಬಂತು. [ಸಂ. ವಿ = ಇಲ್ಲ + ತೃಷ್ಣಾ = ನೀರಡಿಕೆ, ಆತುರ]

## ನಿಮ್ಮ ಶಬ್ದಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | |
|---|---|---|
| ೬—೮ ಸರಿಯಿದ್ದರೆ | ... | ಸಾಧಾರಣ |
| ೯—೧೦ ,, | ... | ಉತ್ತಮ |
| ೧೧—೧೨ ,, | ... | ಅತ್ಯುತ್ತಮ |

# ಇಂದಿರಾಬಾಯಿ

ಕನ್ನಡದ ಪ್ರಪ್ರಥಮ ಸಾಮಾಜಿಕ ಕಾದಂಬರಿ 'ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ'ದ ಸಂಗ್ರಹ.

೧೮೯೯ರಲ್ಲಿ ಮೊದಲು ಪ್ರಕಟವಾದ ಈ ಕಾದಂಬರಿಯನ್ನು ಹಿಂದೆ ದಕ್ಷಿಣ ಕನ್ನಡದ ಕಲೆಕ್ಟರರಾಗಿದ್ದ ಕಾಚ್‌ಮನ್ ಎಂಬವರು ಇಂಗ್ಲೀಷಿಗೆ ಭಾಷಾಂತರಿಸಿದರು. ಈ ಕಾದಂಬರಿಯ ಕರ್ತೃ ಶ್ರೀ ಗುಲವಾಡಿ ವೆಂಕಟರಾಯರು (೧೮೪೪-೧೯೧೩) ಪೋಲೀಸ್ ಅಧಿಕಾರಿಯಾಗಿದ್ದರು. ಇವರು ಬರೆದ ಇನ್ನೆರಡು ಕಾದಂಬರಿಗಳೆಂದರೆ 'ಸೀಮಂತಿನಿ' ಮತ್ತು 'ಭಾಗೀರಥಿ.'

ಪ್ರಸ್ತುತ ಸಂಗ್ರಹದಲ್ಲಿ ನಮಗೆ ಆ ಕಾಲದ ಶೈಲಿ ಮತ್ತು ಜೀವನ ಚಿತ್ರಣದ ಪರಿ ಕಂಡುಬರುತ್ತದೆ.

ವಿಂಧ್ಯಾಚಲ ದಕ್ಷಿಣ ಪ್ರಾಂತ್ಯದ ರೋಹಿಣೀ ನದೀತೀರದಲ್ಲಿ ಕಮಲಪುರವೆಂಬ ವಿಸ್ತಾರವಾದ ನಗರವೊಂದಿರುವುದು. ಈ ನಗರದಲ್ಲಿ ಅಗ್ರಹಾರದ ಕೇರಿ ಎಂಬಲ್ಲಿ ಹಿಂದೆ ಭೀಮರಾಯನೆಂಬ ಒಬ್ಬ ಗೃಹಸ್ಥನಿರುವನು. ಅವನ ಹಿರಿಯರು ಬಿಜಾಪುರ ಸೀಮೆಯಲ್ಲಿ ಬಹು ವರ್ಷಗಳ ಪರ್ಯಂತರ ವಂಶ ಪರಂಪರಾಗತವಾಗಿ ಕುಲಕರ್ಣಿ ಉದ್ಯೋಗವನ್ನು ಮಾಡಿಕೊಂಡಿದ್ದರು. ಭೀಮರಾಯನು ಆರೇಳು ವರ್ಷದವನಿರುವಾಗ ಅವನ ಹೆತ್ತವರು ಕಾಲವಾಗಲು ಪಿತ್ರಾರ್ಜಿತ ಆಸ್ತಿ ಇಲ್ಲವಾದುದರಿಂದ ಜೀವನ ನಿರ್ವಹಣೆಗಾಗಿ ಅವನ ಅಜ್ಜಿಯು ಮನೆಯಲ್ಲಿದ್ದ ಪಾತ್ರೆ ಪದಾರ್ಥಗಳನ್ನೆಲ್ಲಾ ಮಾರಿ, ಭೀಮರಾಯನೊಂದಿಗೆ ಕಮಲಪುರಕ್ಕೆ ಬಂದು ಬಹು ಬಡತನದಲ್ಲಿ ಕಾಲಕ್ಷೇಪ ಮಾಡಿಕೊಂಡಿದ್ದಳು. ಅಲ್ಲಿ ಭೀಮರಾಯನು ಒಬ್ಬ ಪಂತೋಜಿಯ ಶಾಲೆಯಲ್ಲಿ ಕನ್ನಡ ಬರಹವನ್ನು ಕಲಿತನು. ಹತ್ತು ವರ್ಷ ಪ್ರಾಯದಲ್ಲಿ ಆತನ ಉಪನಯನವಾಯಿತು. ಪ್ರಾಯಸ್ಥನಾದ ಮೇಲೆ ಅವನು ನರಸಿಂಹಶಾಸ್ತ್ರಿ ಎಂಬ ದೊಡ್ಡ ವರ್ತಕನ ಹತ್ತಿರ ಕಾರುಭಾರಿತನವನ್ನು ನೋಡಿಕೊಂಡಿದ್ದನು. ಸ್ವಲ್ಪ ಕಾಲದ ಅನಂತರ ರೂಪವತಿಯೂ ಜಾಣಾಕ್ಷಳೂ ಆಗಿದ್ದ ಅಂಬಾಬಾಯಿಯೆಂಬ ಹೆಸರಿನ ಹುಡುಗಿಯನ್ನು ಮದುವೆಯಾದನು. ಮದುವೆಯ ಬಳಿಕ ಭೀಮರಾಯನು ಜುಟ್ಟು ಹಿಡಿದೆತ್ತಿದಂತೆ ದೊಡ್ಡಸ್ತಿಕೆಗೆ ಏರತೊಡಗಿದನು. ಜಾತಕದಲ್ಲಿ ಗಜಕೇಸರಿಯೋಗವಿದ್ದ ಅಂಬಾಬಾಯಿಯು ಪ್ರಾಯಭರಿತಳಾದ ಮೇಲೆ ಮನೆಯ ಸಮಸ್ತ ಆಡಳಿತವನ್ನು ಆಟೋಪದಿಂದಲೂ ಯುಕ್ತಿಯಿಂದಲೂ ನಡೆಸತೊಡಗಿದಳು. ಭೀಮರಾಯನೂ ಸ್ವಾರ್ಥ ಪರಾರ್ಥಗಳೆಂಬ ಭೇದವಿಲ್ಲದೆ ಕುಶಲ ಬುದ್ಧಿಯಿಂದಲೂ ಸ್ವಾಮಿಭಕ್ತಿಯಿಂದಲೂ ಆಡಳಿತಗಳನ್ನು ನಡೆಸುತ್ತಾ ನರಸಿಂಹಶಾಸ್ತ್ರಿಯನ್ನು ಸಂತೋಷಪಡಿಸಿದನು. ಭೀಮರಾಯನಿಗೆ ಹೀಗೆಲ್ಲಾ ಸುಖವಿದ್ದರೂ ಪುತ್ರ ಸಂತತಿ ಇಲ್ಲವೆಂಬುದೊಂದು ದೊಡ್ಡ ಕೊರತೆ ಇದ್ದುದರಿಂದ ಪುತ್ರ ಸಂತತಿಯನ್ನು ಪಡೆಯುವುದಕ್ಕೋಸ್ಕರ ವ್ರತ ಹರಕೆಗಳನ್ನೂ, ಹೋಮ ನೇಮ, ದಾನಧರ್ಮಗಳನ್ನೂ ಮಾಡುತ್ತಿದ್ದನು.

*

ಅದೇ ಅಗ್ರಹಾರದ ಕೇರಿಯಲ್ಲಿ ತಂಬೂರಿ ಬಾಳಾ

ಜಿರಾಯನೆಂಬ ಒಬ್ಬ ಬಡ ವಯೋವೃದ್ಧನು ತನ್ನ ಮೂರು ಮಂದಿ ಮಕ್ಕಳೊಂದಿಗೆ ವಾಸವಾಗಿದ್ದನು. ಅವರಲ್ಲಿ ಇಬ್ಬರು ಸಾಹುಕಾರರಲ್ಲಿ ಕಾಸುಭೋಗಿ-ಕೆಯ ಉದ್ಯೋಗವನ್ನು ಸಂಪಾದಿಸಿದ್ದರೆ ಸುಂದರರಾಯನೆಂಬ ಇನ್ನೊಬ್ಬನು ಉದ್ಯೋಗ ದೊರಕದೆ ಅದನ್ನು ದೊರಕಿಸಿಕೊಳ್ಳುವ ಪ್ರಯತ್ನದಲ್ಲಿದ್ದನು. ಅವನಿಗೆ ಸಾವಿತ್ರಿಯೆಂಬ ಹೆಂಡತಿಯೂ ಭಾಸ್ಕರನೆಂಬ ಮಗನೂ ಇದ್ದಿದ್ದರು. ಉದ್ಯೋಗಕ್ಕಾಗಿ ಸುಂದರರಾಯನು ಭೀಮರಾಯನನ್ನು ಆಶ್ರಯಿಸಿದನು.

ಭೀಮರಾಯನು ತನ್ನ ಪತ್ನಿಯೊಡನೆ ಆಲೋಚಿಸದೆ ಯಾವೊಂದೂ ವಿಷಯವನ್ನಾದರೂ ತೀರ್ಮಾನಿಸುತ್ತಿದ್ದಿಲ್ಲ. ಒಂದು ದಿನ ರಾತ್ರಿ ತನ್ನ ಯಕ್ಷಗಾನ ಪ್ರಸಂಗವೇ ಮುಂತಾದ ನಿತ್ಯನಿಯಮಗಳೂ ರಾತ್ರಿಯ ಭೋಜನವೂ ತೀರಿದ ಬಳಿಕ ಶಯ್ಯಾಗೃಹದಲ್ಲಿ ಪವಡಿಸುವುದಕ್ಕೆ ಹೋದಾಗ ಸಮಯ ನೋಡಿ ಸುಂದರರಾಯನ ವಿಷಯ—ಆತನನ್ನು ತನ್ನ ನೌಕರನಾಗಿ ಸೇರಿಸಿಕೊಳ್ಳುವ ವಿಷಯವನ್ನು ಎತ್ತಿದಾಗ ಅಂಬಾಬಾಯಿಯು—

"ಸರಿ, ಸರಿ ಆದುದರಿಂದ ತಮಗೆ ಸುಂದರರಾಯನ ಚಿಂತೆಯೋ? ತಮಗೇಕೆ ಅವನ ಚಿಂತೆ?"

"ನಮ್ಮನ್ನು ಹೊಂದಿರುವವರ ಸುಖ ಕಷ್ಟದ ಅವಸ್ಥೆಗಳನ್ನು ಕುರಿತು ನಾವು ಚಿಂತಿಸುವುದು ಶಾಸ್ತ್ರಸಮ್ಮತವಾದ ವಿಷಯವಲ್ಲವೇ?"

"ಶಾಸ್ತ್ರ! ಶಾಸ್ತ್ರ ಪುರಾಣಗಳಲ್ಲೆಲ್ಲಾ ನಾವು ನಿನ್ನೆ ಮೊನ್ನೆ ಕೇಳುತ್ತಿಲ್ಲವೇ? ಎಲ್ಲಾ ಕಾರ್ಯಗಳಲ್ಲೂ ಸ್ವಕಾರ್ಯವೇ ಶ್ರೇಷ್ಠವಾಗಿದೆ. ಆದುದರಿಂದ ನಮ್ಮ ಸ್ವಂತಕಾರ್ಯವನ್ನೇ ಮುಂದಾಗಿ ಆಲೋಚಿಸಬೇಕು. ಪರೋಪಕಾರವು ಎಲ್ಲಾ ಪುಣ್ಯಕಾರ್ಯಗಳಲ್ಲಿ ಶ್ರೇಷ್ಠವಾದುದೇ ಸರಿ. ಪರಂತು ಪರೋಪಕಾರ ಮಾಡುವುದರಲ್ಲಿ ಪಾತ್ರಾಪಾತ್ರ ವಿಚಾರವಿರಬೇಕು. ಸುಂದರರಾಯನು ಉಪಕಾರಕ್ಕೆಂದಿಗೂ ಪಾತ್ರನಲ್ಲ. ಅವನಂತಹ ದುಷ್ಕರ್ಮಿಯು ಲೋಕತ್ರಯದಲ್ಲಿಯೂ ಇಲ್ಲ."

"ಅಮ್ಮಯ್ಯ! ಇದೇನು ಚೋದ್ಯ! ಸುಂದರರಾಯನ ದುಷ್ಟತನವನ್ನು ನಾನಿಷ್ಟರವರೆಗೆ ಕಂಡಿದ್ದೂ ಇಲ್ಲ; ಕೇಳಿದ್ದೂ ಇಲ್ಲ. ಇದರಲ್ಲೇನೋ ಗುಟ್ಟಿರಬೇಕು," ಎಂದು ಆಲೋಚಿಸತೊಡಗಿದನು.

ಕೆಲವು ದಿನಗಳು ಕಳೆದ ಮೇಲೆ ಅಪೇಕ್ಷಿತ ಗರ್ಭಗಳನ್ನು ಇಳಿಸುವುದರಲ್ಲಿ ವಿವಿಧಪ್ರಯೋಗಗಳಲ್ಲೂ ಪ್ರವೀಣಳಾದ ತುಮಕೂರು ದೇವಕಿಯು ಅಂಬಾಬಾಯಿಯೊಡನೆ ಮಾತನಾಡಲು ಬಂದಳು. ಅಂಬಾಬಾಯಿಯು ಆಕೆಗೆ ಬೇಕಾದ ವಸ್ತುಗಳನ್ನು ಕೊಟ್ಟು ಆಕೆಯನ್ನು ಸಂತೋಷವಾಗಿ ಕಳುಹಿಸಿಕೊಟ್ಟಳು.

ಅದೇ ದಿನದ ರಾತ್ರಿ ಭೀಮರಾಯನು ಶಯ್ಯಾಗಾರವನ್ನು ಪ್ರವೇಶಿಸಿದ ಅನಂತರ ಪುನಃ ಸುಂದರರಾಯನ ವೃತ್ತಾಂತವನ್ನು ಎತ್ತಲು ಅಂಬಾಬಾಯಿಯು ಕೋಪೋದ್ರೇಕದಿಂದ ಮಾತನಾಡುತ್ತಾ, ಬಿಕ್ಕಿ ಅತ್ತು ಪ್ರಲಾಪಿಸುತ್ತಿರಲು ಭೀಮರಾಯನು ಮನಸ್ಸಿನಲ್ಲಿ ಗಲಿಬಿಲಿ ಉಂಟಾದವನಾಗಿ ಕಾರಣವನ್ನು ವಿಚಾರಿಸಲು ಅಂಬಾಬಾಯಿಯು,

"ನೆರೆಮನೆಯ ಸೀತಾಬಾಯಿಯು— 'ನರಸಿಂಹಶಾಸ್ತ್ರಿ ಹೆಚ್ಚಾಗಿ ನಿಮ್ಮ ಮನೆಯಲ್ಲೇ ಕಾಣಸಿಗುತ್ತಾನೆ. ಅದೇನು?' ಎಂದು ಕೇಳುತ್ತಾ ಕಿರುನಗೆ ನಗುತ್ತಾ ಹತ್ತಿರ ಕುಳಿತಿದ್ದ ಲಲಿತಾಬಾಯಿಯ ತೊಡೆಯನ್ನು ಬೆರಳಿನಿಂದ ಕುಕ್ಕಿ ತನ್ನ ಮುಖವನ್ನು ತಿರುಗಿಸಿ ದೊಡ್ಡ ನಗೆ ಬರುವುದನ್ನು ಅಲ್ಲಲ್ಲೇ ಅಡಗಿಸಿದಳು. 'ಸುಂದರರಾಯನು ಆ ದಿವಸ ನಮ್ಮ ಬೀದಿಗೆ ಬಂದಾಗ ನರಸಿಂಹಶಾಸ್ತ್ರಿ, ನರಸಿಂಹಶಾಸ್ತ್ರಿ ಎಂದನೇಕ ಸಾರಿ ಹೆಸರು ತೆಗೆದು ಗಂಡಸರ ಹತ್ತಿರ ಏನೇನೋ ಮಾತನಾಡಿಕೊಂಡಿದ್ದನು' ಎಂದು ಇನ್ನಷ್ಟು ನಕ್ಕಳು. ಕೂಡಿದ ಸ್ತ್ರೀಯರೆಲ್ಲಾ ಬಾಯಿ ಕೆಯ ಮುಚ್ಚಿ ಇನ್ನೊಬ್ಬಾಕೆ ನೋಡಿ ಸ್ವಲ್ಪ ಸ್ವಲ್ಪ ನಗಾಡಿದರು. ತತ್ಕಾಲ ಯಾವುದೊಂದು ಉತ್ತರ ಕೊಡುವುದಕ್ಕೆ ನನಗೆ ಸೂಚಿಸದೆ ನಾನಲ್ಲೇ ಸತ್ತಂತಾದೆನು. ತ್ರಿಕರಣ ಶುದ್ಧವಾಗಿಯೂ ಯಾವುದೊಂದೂ ಅವಿಚಾರದ ಕೆಲಸಕ್ಕೆ ಹೋಗದೆಯೂ ಇರುವಾಗ ಹೀಗೆ ನಿಷ್ಕಾರಣವಾಗಿ ಅಪವಾದವನ್ನು ಹುಟ್ಟಿಸಿ ವಿಪತ್ತಿಗೊಳಗಾದ ಪಾಪವನ್ನುಂಟು ಮಾಡಿದ ಸುಂದರರಾಯನನ್ನು ತಾವು ಕ್ಷಣೇ ಕ್ಷಣೇ ಹೊಗಳುವುದು, ತದ್ದ್ವಾರ ನನಗೆ ಸಹಿಸಕೂಡದ ಮನೋವೇದನೆಯನ್ನುಂಟುಮಾಡುವುದು— ಅಯ್ಯೋ! ಏನು ಹೇಳಲಿ!" ಎಂದು ವಿಷಾದವಾಗಿ ಪ್ರಲಾಪಿಸಲು, ತನ್ನ ಹೆಂಡತಿಯ ಸಂತೋಷಕ್ಕಾಗಿ ಭೀಮರಾಯನು ಸುಂದರರಾಯನನ್ನು ನಿಗ್ರಹಿಸುವ ಮನಸ್ಸು ಮಾಡಿದನು.

*

ಮರುದಿನ ಕೀಚಕ ವಧೆಯ ಪ್ರಸಂಗದ ನಿಮಿತ್ತ ಆಗಬೇಕಾಗಿದ್ದ ಬ್ರಾಹ್ಮಣ ಸಂತರ್ಪಣೆಯ ಬದಲು ಫಲಾಹಾರದ ಏರ್ಪಾಡನ್ನು ಮಾಡಿದನು. ತುಮಕೂರ ದೇವಕಿಯ ಮಗ ಗೋಪಣ್ಣನು ತಂದುಕೊಟ್ಟ ನಾಲ್ಕು ಬದನೇಕಾಯಿಯ ಬಜ್ಜಿಯನ್ನು ಸುಂದರ ರಾಯನಿಗೆ ಬಡಿಸಿದನು. ಫಲಾಹಾರದ ಬಳಿಕ ಅಭ್ಯಾಗತರೆಲ್ಲರೂ ವೀಳ್ಯ ತೆಗೆದುಕೊಂಡು ತಂತಮ್ಮ ಮನೆಗಳಿಗೆ ಮರಳಿದರು.

ಅಂಬಾಬಾಯಿಯ ಸಲಹೆಯಂತೆ ಭೀಮರಾಯನು ಅನಾರೋಗ್ಯವನ್ನು ನಟಿಸುತ್ತಾ ಮಲಗಿರಲು ಇತ್ತಲಾಗಿ ಸುಂದರರಾಯನಲ್ಲಿ ನಾಲ್ಕಾರು ಸೂರ್ಯಾಸ್ತಮಯದ ಸಮಯದಲ್ಲಿ ಗೋಳಾಟ ಬಿತ್ತು. ಪತ್ನಿ ಸುಶೀಲೆಯು ಮಗ ಭಾಸ್ಕರನೊಂದಿಗೆ ಗಂಡನ ಕಾಲ ಬಳಿಯಲ್ಲಿ ಬಿದ್ದು ಹೊರಳಾಡಿದಳು. ಅಷ್ಟರಲ್ಲಿ ಡಾಕ್ಟರರು ಬಂದು ಶರೀರವನ್ನು ಪರೀಕ್ಷಿಸಿ ನೋಡಿ, "ಸುಂದರರಾಯನು ವಿಷಪ್ರಯೋಗದಿಂದ ಪ್ರಾಣ ತ್ಯಜಿಸಿದನು," ಎಂದು ಹೇಳಿದರು.

ರಾತ್ರಿ ಜವಾನರಾದ ಬಗ್ಗು, ಜಾರಪ್ಪರು ಶವದ ಕಾವಲಿದ್ದವರೊಡನೆ ಮಾತನಾಡಿ ಮುಂದೆ ಹೋಗುತ್ತಿರಲು ಭೀಮರಾಯನ ಮನೆಯ ಬಳಿ ತಲಪಿದಾಗ ಕಗ್ಗತ್ತಲೆಯಲ್ಲಿ ಭಯಪಟ್ಟು ಎರಡು ಮೂರು ಸಾರಿ ಬಿಗಿತ ಊದಲು, ಭಯಪಟ್ಟ ಭೀಮರಾಯನು ಹೊರ ಬಂದು ಬಗ್ಗು, ಜಾರಪ್ಪರನ್ನು ಒಳಗೆ ಕರೆದೊಯ್ದು ಒಬ್ಬೊಬ್ಬರ ಕೈಯಲ್ಲಿ ಒಂದೊಂದು ಹಣವನ್ನಿಟ್ಟು ಕಳುಹಿಸಿದನು. ಭೀಮರಾಯನ ಈ ಕೃತ್ಯಕ್ಕೆ ಅವರಿಬ್ಬರೂ ತುಂಬ ಬೆರಗುಗೊಂಡರು. ಮರುದಿನ ಈ ಸುದ್ದಿಯನ್ನು ನಡುಗುತ್ತಾ ಫೌಜುದಾರನಿಗೆ ಹೇಳಿದರು.

ಆ ಬಳಿಕ ನಡೆದ ಅನೇಕ ಘಟನೆಗಳಿಂದ ಭೀಮರಾಯನೇ ಕೊಲೆಗಾರನೆಂದು ಫೌಜುದಾರನಿಗೆ ಬಲವಾದ ಸಂಶಯ ಬಂದಿತು. ಕೊನೆಗೆ ಬೆದರಿಸಿ ಕೇಳಲು ತನ್ನ ವಂಶಮರ್ಯಾದೆಗಾಗಿ ಸುಂದರರಾಯನನ್ನು ವಿಷವಿಕ್ಕಿಕೊಂದುದು ಸತ್ಯ ಎಂದು ಭೀಮರಾಯನು ಒಪ್ಪಿದನು.

ಆದರೆ ಪೇಟೆಲ ಅತ್ತೂರ ಸೂರಪ್ಪಯ್ಯನ ಚಾಣಾಕ್ಷತನದಿಂದ ಭೀಮರಾಯನು ತಪ್ಪಿತಸ್ಥನಲ್ಲವೆಂದು ತೀರ್ಮಾನವಾಗಲು ಭೀಮರಾಯನು ಅಟ್ಟಹಾಸಪೂರ್ವಕವಾಗಿ ಶ್ರೀ ಮಹಾಲಿಂಗೇಶ್ವರ ದೇವಾಲಯದಲ್ಲಿ ಮಹಾರುದ್ರ,ವೇದ ಪಾರಾಯಣ, ಸಹಸ್ರ ಭೋಜನ, ರಾತ್ರಿ ಮಹೋತ್ಸವ ಮುಂತಾದ ಸಂಭ್ರಮಗಳನ್ನು ನಡೆಸಿದನು.

*

ಕೆಲವು ದಿವಸಗಳು ಕಳೆದವು. ನರಸಿಂಹಶಾಸ್ತ್ರಿಯು ಪಕ್ಷವಾತದ ರೋಗದಿಂದ ಮಲಗಿದಲ್ಲೇ ಇದನು. ಯಾವ ವೈದ್ಯನಿಂದ ಮಾಡಿಸಿದ ಚಿಕಿತ್ಸೆಯೂ ಪ್ರಯೋಜನಕಾರಿಯಾಗದೇ ಇನ್ನು ತನ್ನ ದಿನವು ಸಮೀಪಿಸಿ ಬಂತೆಂದು ತಿಳಿದುಕೊಂಡು ತನ್ನ ಸ್ಥಿರ, ಚರ ಸೊತ್ತುಗಳ ಮುಂದಣ ವಿನಿಯೋಗವನ್ನು ಕುರಿತು ಮರಣ ಶಾಸನವನ್ನು ಬರೆಸಿ ರಿಜಿಸ್ಟ್ರ ಮಾಡಿಸಿ ಕೆಲವು ದಿನಗಳಲ್ಲೇ ಕಾಲಾಧೀನನಾದನು. ಆ ತರುವಾಯ ಭೀಮರಾಯನು ಅಂಬಾಬಾಯಿಯ ಸಂಗಡ ಆಲೋಚಿಸಿ ಅವಳ ಸಮ್ಮತಿಯನ್ನು ಪಡೆದು ಸ್ವಂತ ವ್ಯಾಪಾರವನ್ನು ನಡೆಸಲಾರಂಭಿಸಿದನು. ದೇವಪೂಜೆ, ಸಂತರ್ಪಣೆ, ಯಕ್ಷಗಾನ ಪ್ರಸಂಗವೇ ಮೊದಲಾದ ಸತ್ಕಾರ್ಯ ಮೊದಲಿಗಿಂತಲೂ ಇನ್ನಷ್ಟು ಶ್ರದ್ಧೆಯಿಂದಲೂ ಭಕ್ತಿಯಿಂದಲೂ ನಡೆಯಿಸುತ್ತಾ ಬಂದನು. ಅವನ ಕೀರ್ತಿಯು ಸ್ವಜಾತಿ ಗುರುಮಠದವರೆಗೂ ಹಬ್ಬಿತು. ಶ್ರೀ ಗುರುಗಳು ಭೀಮರಾಯನ ಭಕ್ತಿಗೆ ಮೆಚ್ಚಿ ಅವನನ್ನು ಧರ್ಮ ವಿಚಾರಕನನ್ನಾಗಿ ನೇಮಿಸಿ ಅಂಬಾಬಾಯಿಗೆ ಸಂತಾನ ಗೋಪಾಲ ಮಂತ್ರೋಪದೇಶವನ್ನು ಕೊಡಿಸಿದನು.

ಒಂದೆರಡು ತಿಂಗಳು ಕಳೆದ ಬಳಿಕ ಅಂಬಾಬಾಯಿಗೆ ಗರ್ಭದ ಚಿಹ್ನೆಗಳು ತೋರಿದವು. ಭೀಮರಾಯನು ಅವಳ ಆರೈಕೆಗೆ ಬೇರೆ ಹೆಂಗಸರನ್ನು ನೇಮಿಸಿ, ಅವಳಿಗೆ ತಕ್ಕ ಸಮಯದಲ್ಲಿ ಚಂದ್ರತಾರಾ ಬಲವನ್ನು ನೋಡಿ ಸೀಮಂತ, ಬಯಕೆ, ಕೂಳ ಮುಂತಾದ ಶಾಸ್ತ್ರಾಚಾರ ಲೋಕಾಚಾರಗಳನ್ನು ವೈಭವದಿಂದ ನಡೆಸಿದನು. ಶ್ರೀ ಗುರುಗಳ ಕೃಪೆಯಿಂದ ಸಂತತಿ ಪುತ್ರೋತ್ಸವವೇ ಆಗುವುದೆಂದು ಹಿಗ್ಗುತ್ತಿದ್ದನು. ಒಂದಾನೊಂದು ದಿನ ಪುತ್ರಕಾಮೇಷ್ಟಿಯ ಪ್ರಸಂಗವನ್ನು ಭೀಮರಾಯನು ಹಾಡುವಾಗ ಅಂಬಾಬಾಯಿಯು ಸಮೀಪದಲ್ಲಿದ್ದುದನ್ನು ಲಕ್ಷಿಸದೆ ತಪ್ಪಿ ಗರ್ಭಧಾರಣೆಯ ಕಷ್ಟದ ಕುರಿತು ಪದವೊಂದನ್ನು ಹಾಡಲು, ಅದನ್ನು ಕೇಳಿ ಅಂಬಾಬಾಯಿಯು ಹೆದರಿ ಕೂಗಿದಳು. ಕೂಡಲೆ ಪ್ರಸವ

ಹೇಡನೆಯೆಂದು ತಿಳಿದು ನೆಂಗಸರು ಮಂಜಪ್ಪನನ್ನು ಕರೆಯಿಸಿದರು. ಅದೇ ದಿನ ಕ್ಷೇಮವಾಗಿ ಮಗುವಿನ ಜನನವೂ ಆಯಿತು. ಭೀಮರಾಯನು ಆ ಕೋಣೆಯ ಬಳಿಯಲ್ಲಿ ನಿಂತು ಮಗು ಹೆಣ್ಣೋ? ಗಂಡೋ? ಎಂದು ಮಂಜಪ್ಪನೊಡನೆ ಕೇಳಲು, ಆಕೆಯು ಗಂಡೆಂದು ಹೇಳಿದ್ದೇ ಸರಿ, ಅಮಿತಾನಂದದಿಂದ ಪರವಶನಾಗಿ, "ಹೇ ಸ್ವಾಮಿನ್" ಎಂದು ಗುರುವನ್ನು ವಂದಿಸಿ, ಒಂದು ಮಣ ಚೀನೀಸಕ್ಕರೆಯನ್ನು ತರಿಸಿ ಹಂಚಿದನು. ಆದರೆ ಕೊನೆಗೆ ನೋಡುವಾಗ ಮಗುವು ಹೆಣ್ಣೆಂದು ತಿಳಿಯಲು "ಗಂಡಾದರೇನು? ಹೆಣ್ಣಾದರೇನು?" ಎಂದು ಸಮಾಧಾನಪಟ್ಟುಕೊಂಡು ಮಗುವಿಗೆ 'ಇಂದಿರೆ' ಎಂಬ ಹೆಸರನ್ನಿಟ್ಟನು.

*

ಇತ್ತಲಾಗಿ ಸಾಕ್ಷಿಯು ಪತಿವಿಯೋಗ ದುಃಖ ದಿಂದಲೂ, ಮಗನಾದ ಭಾಸ್ಕರನ ವಿದ್ಯಾಭ್ಯಾಸಕ್ಕೆ ಮಾರ್ಗ ಕಾಣದೆಯೂ ಚಿಂತಾರ್ಣವದಲ್ಲಿ ಮುಳು ಗಿರುವಾಗ ಒಂದಾನೊಂದು ದಿವಸ, "ಏ ದೇವರೆ, ಈ ದೇಹಕ್ಕೆ ಮರಣವಾದರೂ ಬರುವುದಿಲ್ಲವಲ್ಲ! ಅನ್ನದ ಕಾಳು ನಾಲ್ಕು ಈ ಮನೆಯಲ್ಲಿ ತಿನ್ನಲು ಸಿಕ್ಕಿದರೂ ಬಡ ಪ್ರಾಣಿಯಾದ ಭಾಸ್ಕರನಿಗೆ ಒಂದು ಪಟ್ಟೇ ಕಂಬಿಯ ವೇಷ್ಟಿ, ಅಥವಾ ಒಂದು ಅಂಗಿ, ಇಲ್ಲವೆ ಒಂದು ಎಲ ವಸ್ತ್ರವಾದರೂ ಒಂದು ದಿವಸ ಮೈ ಮೇಲೆ ಹಾಕಿ ಕಣ್ಣು ತುಂಬಾ ನೋಡಬಹುದೆಂದೂ, ವಿದ್ಯಾಭ್ಯಾಸಕ್ಕೋಸ್ಕರ ಶಾಲೆಗೆ ಕಳುಹಿಸಬಹು ದೆಂದೂ ನನ್ನ ಹಣೆಯಲ್ಲಿಲ್ಲವಷ್ಟೆ? ಈ ನನ್ನ ದುಃಖ ವನ್ನು ಹಗೆಗಳು ನೋಡಿ ಸಂತೋಷಿಸುವಾಗ ನಾನು ಹೇಗೆ ಸೈರಿಸಿಕೊಳ್ಳಲಿ! ಭಾಸ್ಕರಾ, ಮುದ್ದಿನವೇ, ಮುಂ ದೇನಪ್ಪಾ ನಿನ್ನ ಗತಿ? ನನ್ನ ಮಾತಂತೂ ಬಿಡು." ಎಂದು ಹೇಳಿ ಹುಡುಗನ್ನಪ್ಪಿಕೊಂಡು ಗೋಳಾಟ ದೊಡನೆ ಮಾಡಿದ ಅಶ್ರುಪಾತವನ್ನು ಕಂಡು ಅವನು, "ತಾಯೇ, ಗೋಳಾಟದಿಂದ ಕಷ್ಟ ಪರಿಹಾರವಾ ಗದು. ನೀನು ನನ್ನನ್ನು ಒಂಭತ್ತು ತಿಂಗಳು ಹೊಟ್ಟೆ ಯಲ್ಲಿ ಹೊತ್ತುಕೊಂಡು ಆ ಮೇಲೆ ಈ ವರೆಗೆ ನನ ಗೋಸ್ಕರ ಪಡೆದ ಕಷ್ಟಗಳ ಪ್ರತಿಫಲವನ್ನು ನಿನಗೆ ಕೊಟ್ಟು ನನ್ನಿಂದ ಪೂರೈಸುವುದು ಅಸಾಧ್ಯವಾ ದರೂ ಈ ನನ್ನ ಶರೀರವು ಬದುಕಿರುವವರೆಗೆ ಸ್ವಲ್ಪ ಮಟ್ಟಿಗಾದರೂ ಪ್ರಯತ್ನಿಸದಿದ್ದರೆ, ನಾನು ನಿನ್ನ ಉದರದಲ್ಲಿ ಜನನವನ್ನು ಧರಿಸಿದ್ದೇ [illegible]ವೆಂದು ತಿಳಿದುಕೋ," ಎಂದು ತಾಯಿಯನ್ನು ಸಮಾಧಾನ ಪಡಿಸಿ ನೆಟ್ಟಗೆ ಹೈಕೋರ್ಟ್ ವಕೀಲರಾದ ಅಮೃತ ರಾಯನಲ್ಲಿಗೆ ಹೋಗಿ, ಅವನ ಸಮಯವನ್ನು ಕಾದು ನಿಂತುಕೊಂಡು, ಸಮಯ ಸಿಕ್ಕಾಗ "ಸ್ವಾಮಿ" ಎಂದು ನಮಸ್ಕರಿಸಿದನು.

ಅಮೃತರಾಯನೆಂಬವರೆ – ಚಿಕ್ಕಂದಿನಲ್ಲೆ ಅವನ ತಾಯಿ ತಂದೆಗಳು ಮೃತರಾಗಿ ಅನಂತರ ಬಹಳ ದಾರಿದ್ರ್ಯವನ್ನನುಭವಿಸಿ ಕೆಲವು ಕಾಲ ಪರಿಯಂತರ ಅನಾಥ ಶಾಲೆಯಲ್ಲಿದ್ದು ದಯಾಶೀಲರನ್ನಾಶ್ರಯಿಸಿ ವಿದ್ಯೆಯನ್ನು ಸಂಪಾದಿಸಿ, ಕ್ರಮೇಣ ಊರ್ಜಿತ ವಾದ ಸ್ಥಿತಿಗೆ ಬಂದವನಾಗಿದ್ದುದರಿಂದ, ಪರರ ಸುಖದುಃಖಗಳೆಂದರೇನೆಂಬುದನ್ನು ಚೆನ್ನಾಗಿ ತಿಳಿ ದವನು. ಅವನು ಭಾಸ್ಕರನನ್ನು ನೋಡಿ, ಬಂದ ಕಾರ ಣವನ್ನು ಕೇಳಲು ಅವನು, "ತಂದೆಯು, ಮೃತರಾ ದಂದಿನಿಂದ ನನ್ನ ಬಡ ತಾಯಿಯು ದುಃಖದಲ್ಲಿ ಮುಳುಗಿ ಸಾಯಲಿದ್ದಾಳೆ. ನಾನು ಅವಳ ಉದರದಲ್ಲಿ ಜನಿಸಿ ಏನು ಫಲ? ತಮ್ಮಂಥವರ ಸೇವಾವೃತ್ತಿ ಯಿಂದೇನಾದರೂ..." ಎಂದಿಷ್ಟು ಹೇಳಿ ಮುಂದೆ ಗದ್ಗದ ಕಂಠನಾಗಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಅಮೃತರಾಯನು ಹುಡುಗನ ಬುದ್ಧಿಗೆ ಮೆಚ್ಚಿ ಕನಿಕ ರದಿಂದ, "ನನ್ನಿಂದೇನಾಗಬೇಕೆಂದು ಹೇಳು" ಎಂದನು.

"ಸ್ವಾಮಿ, ಸೋಮಾರಿಯಾಗಿ ಊರೆಲ್ಲಾ ಸುತ್ತಿ ಕೊಂಡು ಯಾಚಕ ವೃತ್ತಿಯಿಂದ ಕಾಲಕ್ಷೇಪಮಾಡ ಬೇಕೆಂದು ನನಗೆ ಮನಸ್ಸಿಲ್ಲ. ನನ್ನ ಯೋಗ್ಯತೆಗೂ ಶಕ್ತಿಗೂ ತಕ್ಕದ್ದೆಂದು ತಮಗೆ ಕಾಣುವ ಒಂದು ಕೆಲಸ ವನ್ನು ನನಗೆ ದಯಪಾಲಿಸಿದರೆ, ತಮ್ಮ ಸೇವೆಯ ಲ್ಲೇ ನನಗೆ ತೃಪ್ತಿಯಾಗುವುದು," ಎಂದನು.

ಆತನ ಮಾತಿನಿಂದ ಪ್ರೀತನಾದ ಅಮೃತರಾ– ಯನು ಭಾಸ್ಕರನಿಗೆ ಪೂಜೆಯ ಭಟ್ಟನ ಪರಿಚಾರ ಕನ ಕೆಲಸವನ್ನು ಕೊಟ್ಟನು. ಊಟದ ಖರ್ಚು ಹೋಗಿ ತಿಂಗಳಿಗೆ ಅರ್ಧ ರೂಪಾಯಿಯನ್ನು ಭಾಸ್ಕ ರನಿಗೆ ಕೊಡುವ ಏರ್ಪಾಡಾಯಿತು.

*

ಶ್ರೀ ಗೋಪಾಲಕೃಷ್ಣ ದೇವಾಲಯದ ರಥೋ ತ್ಸವದ ದಿನ ಅಮೃತರಾಯನು ತನ್ನ ಸೇವಕರಿಗೆಲ್ಲ ವೆಚ್ಚಕ್ಕೆಂದು ಅರ್ಧಾರ್ಧ ರೂಪಾಯಿ ಕೊಟ್ಟನು. ಅದನ್ನು ಪಡೆದವನೇ ಭಾಸ್ಕರನು ನೆಟ್ಟಗೆ ಮಾವಿ ಗಳ [illegible]

ಮೊದಲನೆ ಪುಸ್ತಕ, ಒಂದು ಸಿಲೇಟಿನ ಹಲಗೆ. ಅದರ ಮೇಲೆ ಬರೆಯುವುದಕ್ಕೆ ನಾಲ್ಕು ಬಳಪದ ಕಡ್ಡಿಗಳನ್ನು ಸಹ ಕ್ರಯಕ್ಕೆ ಕೊಂಡುಕೊಂಡು ಮನೆಗೆ ಬಂದು,ಒಂದು ಕಡೆಯಲ್ಲಿ ಕುಳಿತುಕೊಂಡು. ಆ ಪುಸ್ತಕದಲ್ಲಿದ್ದ ಅಕ್ಷರಗಳನ್ನು ಹಲಗೆಯ ಮೇಲೆ ಬರೆಯುತ್ತಾ ಇದ್ದನು. ಸಾಯಂಕಾಲದ ವರೆಗೆ ಹಾಗೆ ಬರೆಯುತ್ತಾ ಇದ್ದು ಆ ಮೇಲೆ ತಾನು ಮಾಡಬೇಕಾದ ಕೆಲಸಕ್ಕೆ ಹೋದನು. ಅಮೃತರಾಯನು ಮನೆಗೆ ಬಂದಾಗ ಭಾಸ್ಕರನು ಅರ್ಧ ರೂಪಾಯಿ ಹೇಗೆ ವೆಚ್ಚ ಮಾಡಿದನೋ ನೋಡೋಣವೆಂದು ಅವನನ್ನು ಕರೆದು, "ಅರ್ಧ ರೂಪಾಯಿ ಹೇಗೆ ವೆಚ್ಚ ಮಾಡಿದೆ?" ಎಂದು ಕೇಳಲು, "ಸ್ವಾಮಿ. ಒಂದು ಇಂಗ್ಲೀಷ್ ಮೊದಲನೆ ಪುಸ್ತಕ, ಸಿಲೇಟಿನ ಹಲಗೆ, ಬಳಪದ ಕಡ್ಡಿಗಳನ್ನು ಸಹ ಕೊಂಡುಕೊಂಡೆನು. ಪುಸ್ತಕದಲ್ಲಿದ್ದಂತೆಯೇ ಹಲಗೆಯ ಮೇಲೆ ಬರೆಯುವುದಕ್ಕೆ ಪ್ರಯತ್ನ ಮಾಡುತ್ತಿದ್ದೇನೆ. ಇನ್ನು ಐದು ದುಡ್ಡುಗಳುಳಿದಿವೆ. ಮುಂದೇನಾದರೂ ಕೆಲಸಕ್ಕೆ ಬೇಕಾದೀತೆಂದು ಇಟ್ಟಿದ್ದೇನೆ" ಎಂದಾಗ ಅಮೃತರಾಯನು ಸಂತೋಷಪಟ್ಟು ಈ ಹುಡುಗನಿಗೆ ಪೂಜೆಯ ಭಟ್ಟನ ಪರಿಚಾರಕವಲ್ಲ ಎಂದು ಆಲೋಚಿಸಿ ಭಾಸ್ಕರನಿಗೆ ವಿದ್ಯೆ ಕಲಿಸುವ ಏರ್ಪಾಡು ಮಾಡಿ ಆ ಹುಡುಗನನ್ನು ಶಾಲೆಗೆ ಕಳುಹಿಸಿದನು.

ಭಾಸ್ಕರನು ದಿನವೂ ಶಾಲೆಗೆ ಹೋಗಿ ತನ್ನ ಪಾಠಗಳನ್ನು ಬಹಳ ಮನಸ್ಸು ಕೊಟ್ಟು ಕಲಿಯುತ್ತಾ ಮಧ್ಯದಲ್ಲೊಂದು ಕ್ಲಾಸು ಬಿಟ್ಟು ಮುಂದಿನ ಕ್ಲಾಸಿಗೆ ಉನ್ನತಿಯನ್ನು ಹೊಂದುತ್ತಾ ಮೂರು ನಾಲ್ಕು ವರ್ಷಗಳೊಳಗೆ ಅಂದರೆ ಅವನಿಗೆ ಹದಿನೈದು ವರ್ಷ ಪ್ರಾಯ ತುಂಬುವಾಗ ಸಕಲ ಕಲಾಶಾಲೆಯ ಮೆಟ್ರಿಕ್ಯುಲೇಶನ್ ಎಂಬ ಪರೀಕ್ಷೆಯಲ್ಲಿ ಒಂದನೇ ತರಗತಿಯಲ್ಲಿ ಅಗ್ರಣಿಯಾಗಿ ತೇರ್ಗಡೆ ಪಟ್ಟನು. ಅಮೃತರಾಯನು ಬಹು ಸಂತೋಷಪಟ್ಟು ಇನ್ನು ಫಸ್ಟ್ ಆರ್ಟ್ಸ್ ಎಂಬ ಪರೀಕ್ಷೆಯ ಪಾಠಗಳನ್ನು ಕಲಿಯಲು ಸಹಾಯ ಮಾಡಿದನು. ಆಮೇಲೆ ಮದ್ರಾಸಿನ ಸಂಸ್ಥಾನ ಶಾಲೆಯಲ್ಲಿ ಬಿ. ಎ. ಎಂಬ ಪರೀಕ್ಷೆಗೋಸ್ಕರ ಕಲಿಯಲು ಪ್ರಾರಂಭಿಸಿದನು.

*

ಇತ್ತ ಅಂಬಾಬಾಯಿ-ಭೀಮರಾಯನ ಪುತ್ರಿ

ಒಂದು ದಿನ ಅಂಬಾಬಾಯಿಯು ಗಂಡನೊಡನೆ,

"...ಸದ್ಯ ನಮ್ಮ ಇಂದಿರೆಗೆ ಏಳು ವರುಷಗಳು ತುಂಬಿ ಎಂಟು ವರುಷಗಳು ನಡೆಯುತ್ತಿದೆ. ಅವಳ ಕಲ್ಯಾಣದ ವಿಷಯವನ್ನೇನಾದರೂ ಆಲೋಚಿಸಿದ್ದೀರಾ?"

"ಅದನ್ನಾಲೋಚಿಸಬಹುದಷ್ಟೆ ?"

"ಇದೀಗ ತಮ್ಮ ವಿದ್ಯಮಾನ ಕಡೆಯುವ ಕಲ್ಲನ್ನು ಸೆನೆಯುವುದಕ್ಕೆ ಹಾಕಿದ ಹಾಗೆ. 'ಮದುವೆ ಮಾಡಿದವನೇ ಬಲ್ಲ, ಮನೆ ಕಟ್ಟಿದವನೇ ಬಲ್ಲ' ಎಂಬ ಗಾದೆ ಕೇಳಿದಿರಷ್ಟೆ? ಮದುವೆಯೆಂದರೆ ಸಾಧಾರಣ ವಿಷಯವಲ್ಲ. ಪ್ರಥಮತಃ ಒಳ್ಳೆ ಜಾತಕ ಸಿಕ್ಕುವುದೇ ದುರ್ಲಭ. ಅದು ಸಿಕ್ಕಿದರೆ ಆಮೇಲೆ ಕುಟುಂಬ ನೋಡಬೇಕು. ನಮ್ಮ ಕುಟುಂಬವಷ್ಟೇ ಮರ್ಯಾದೆಯುಳ್ಳ ಕುಟುಂಬವಷ್ಟೇ ಬೇಕಾದದ್ದು? ನಾನಾದರೊ ಹುಡುಗಿಯನ್ನು ಈ ವರೆಗೆ ಜಾಗ್ರತೆಯಿಂದ ಬೆಳೆಯಿಸಿ, ಉದಯರಾಗದ ಪಟನೆ, ದೀಪ ಹಚ್ಚುವಾಗಿನ ಪಟನೆ, ಗಜೇಂದ್ರಮೋಕ್ಷ, ಮಂಗಳಗೌರಿಯ ಕಥೆ, ಬೀಗರ ಹಾಡು, ಜೋಗಿ ಹಾಡು, ಕವುಲೆ ಹಾಡು ಇವೇ ಮುಂತಾದ ಬಗೆ ಬಗೆಯ ಹಾಡುಗಳನ್ನೂ ತಕ್ಕಮಟ್ಟಿಗೆ ಅಡಿಗೆಯ ಕೆಲಸಗಳನ್ನೂ ಕಲಿಸಿದ್ದೇನೆ. ಹಾಡುಗಳನ್ನು ಓದಿ ಬರೆದು ಪಾಠ ಮಾಡುವುದಕ್ಕೆ ಅವಶ್ಯವಿದ್ದಷ್ಟು ಬರಹ ಸಹ ಕಲಿಸಿದ್ದೇನೆ. ನಮ್ಮ ಪುಣ್ಯದಿಂದ ಅಂಗ್ಳೆಯಲ್ಲಿ ಆಡಿಸುವುದಕ್ಕೂ ಸೀರೆಯ ಸೆರಗಿನಿಂದ ಮುಖ ಉಜ್ಜಿಕೊಳ್ಳುವದಕ್ಕೂಯೋಗ್ಯನೆಂಬಷ್ಟು ಚಿಕ್ಕ ಪ್ರಾಯದ ಅಳಿಯನು ದೊರಕಿದರೆ ನಮ್ಮ ಜನ್ಮವು ಸಾರ್ಥಕವಾಯಿತು. ಇಂಗ್ರೇಜಿ ಕಲಿತ ಪೋಕರಿ ಹುಡುಗರು ನಮಗೆ ಬೇಡ, ಗೊತ್ತಾಯಿತೆ? ತಾವಿನ್ನು ಕಾಲಹರಣ ಮಾಡದೆ ಕೆಲವು ಒಳ್ಳೇ ಜಾತಕಗಳನ್ನು ಸಂಗ್ರಹಿಸಿ ನಾಳೆಯೇ ಹತ್ತುಕೋಟೆ ಸೀತಾರಾಮ ಜೋಯಿಸನನ್ನು ಕರೆಯಿಸಿ ಜಾತಕದ ಘಟಿತಾರ್ಥವನ್ನು ನೋಡಿಸಬೇಕು. ಮರೆಯಬಾರದಷ್ಟೇ?"

"ಮರೆಯಲಾರೆನು. ನಾಳೆ ಎದ್ದವನೇ ಬಿನ್ನಹಪತ್ರದ ಕೆಲಸವನ್ನು ಮುಗಿಸಿ ಜಾತಕಗಳನ್ನು ಒಂದು ಗಳಿಗೆಯೊಳಗೆ ತರಿಸಿ ಮೇಲಿನ ಏರ್ಪಾಡುಗಳನ್ನೆಲ್ಲಾ ನೋಡಿಕೊಳ್ಳುತ್ತೇನೆ," ಎಂದು ಉತ್ತರ ಕೊಟ್ಟನು.

ಭೀಮರಾಯನು ಮರುದಿನ ಸೀತಾರಾಮ

ಕರಾಯನ ಮಗ ವಿಠಲರಾಯನ ಜಾತಕವು ಇಂದಿರೆಯ ಜಾತಕದೊಂದಿಗೆ ಕೂಡಿ ಬರುವುದೊ?" ಎಂದು ಹೇಳಲು, ಜೋಯಿಸರು, "ಈ ಹುಡುಗಿಯ ಆಯುರ್ಬಲವು ಚೆನ್ನಾಗಿದೆ. ಸೌಮಾಂಗಲ್ಯ, ಗಜ ಕೇಸರಿಯೋಗಗಳು ಸಹಾ ಇವೆ. ಇವುಗಳನ್ನು ಮಿಕ್ಕಿ ಬೇಕಾದ್ದೇನು?" ಎಂದು ಹೇಳಲು ಭೀಮರಾಯನು ಹೆಂಡತಿ ಹೇಳಿದ ಪ್ರಕಾರ ತ್ರಿಯಂಬಕರಾಯನ ಮಗ ವಿಠಲರಾಯನ ಜಾತಕವನ್ನು ಜೋಯಿಸರ ಕೈಯಲ್ಲಿಟ್ಟು, "ಇದರ ಮತ್ತು ಹುಡುಗಿಯ ಜಾತಕ ಘಟಿತಾರ್ಥವನ್ನು ನೋಡಿರಿ," ಎಂದು ಹೇಳಿದನು.

ಜೋಯಿಸರು ಕೆಲವು ಸಮಯದ ವರೆಗೆ ಕವಡಿಗಳನ್ನು ರಾಶಿ ಹಾಕುತ್ತಾ ವಿಂಗಡಿಸುತ್ತಾ ಪುನಃ ಬೇರೆ ತರದಲ್ಲಿ ಕುಪ್ಪೆಗೂಡಿಸುತ್ತಾ ಲೆಕ್ಕ ಹಾಕಿ ನೋಡಿ, ಅನೇಕ ಶ್ಲೋಕಗಳನ್ನು ಹೇಳಿ, ಮನಸ್ಸಿನಲ್ಲಿ ಬ್ರಹ್ಮಾಂಡ ಯೋಚನೆ ಮಾಡಿ, "ಹುಡುಗನಿಗೆ ದೀರ್ಘಾಯುಷ್ಯ, ಸುಪತ್ನೀಯೋಗ ಸಹ ಇವೆ. ಎರಡು ಜಾತಕಗಳನ್ನು ನೋಡಿದಲ್ಲಿ ಅಂಶಮಿತ್ರತ್ವ, ಗೃಹಮಿತ್ರತ್ವ ಸಹ ಚೆನ್ನಾಗಿ ಕೂಡಿ ಬರುತ್ತವೆ..." ಎಂದು ಹೇಳಿದನು. ಭೀಮರಾಯನು ತುಂಬಾ ಸಂತೋಷಪಟ್ಟನು.

ಮುಂದೆ ಒಂದು ದಿನ ಭೀಮರಾಯನು ಅಂಬಾಜಾಯಿಯೊಡನೆ ತ್ರಿಯಂಬಕರಾಯನಲ್ಲಿಗೆ ಬಂದು ಮದುವೆಯ ಮಾತುಕತೆಗಳನ್ನಾಡತೊಡಗಿದನು. ಆಗ ಪತ್ನಿ ಚಂದ್ರಭಾಗಿ ಸಮೇತನಾಗಿ ಕುಳಿತಿದ್ದ ತ್ರಿಯಂಬಕರಾಯನು,

"ನನಗೆ ಒಂದೇ ಗಂಡು ಮಗು. ತಮಗೆ ಒಂದೇ ಹೆಣ್ಣು ಮಗು. ಊರಿನ ಜನರು ಸೈ! ಸೈ! ಎನ್ನುವ






"ನಾಲ್ಕೆಂಟು ದಿನ ತಡಿ ಮಹಾರಾಯಿತಿ, ಇನ್ನೊಂದು ೨೦% ಕಡಿತದಲ್ಲಿ ಹೆಚ್ಚಾಯಿತು ಅಂದ್ರೆ,! ಆಗ

ಹಾಗೆ ಕಾರ್ಯವು ಸಂಪಾದನೆಯಾಗಬೇಕು," ಎನ್ನಲು ಭೀಮರಾಯನು,

"ಅಲ್ಲವೆ! ನಾನೂ ಹಾಗೆಯೇ ಎಣಿಸಿದ್ದೇನೆ. ಮಿಕ್ಕದ್ದೆಲ್ಲವೂ ಅಲ್ಪ ವಿಷಯಗಳೇ ತಾನೇ? ವರದಕ್ಷಿಣೆ–" ಎನ್ನುವಷ್ಟರಲ್ಲಿ ಸ್ವಲ್ಪ ಕೆಮ್ಮು ಬಂತು.

"ಅದೇನು ದೊಡ್ಡ ಮಾತು? ನನ್ನ ಶಕ್ತಿ ಮೀರಿ ನಾನೂ, ತಮ್ಮ ಶಕ್ತಿ ಮೀರಿ ತಾವೂ ನಡೆದುಕೊಳ್ಳದೆ ಇರಲಾರೆವಷ್ಟೆ?"

ಅಂಬಾಬಾಯಿ. "ನಮಗೇನೂ ಎಂಟು ಹತ್ತಿಲ್ಲ, ಇಡೀ ಸಂಸಾರಕ್ಕೆ ಒಬ್ಬ ಹುಡುಗಿ; ನಾಳೆ ಪ್ರಾಯ ತುಂಬಿದಾಗ ಅವಳು ಮುಖ ಸಣ್ಣದಾಗಿ ಮಾಡಿಕೊಳ್ಳಬಾರದು. ಚಿನ್ನದ ಪಟ್ಟಿ ವರೆಗಿನ ಆಭರಣಗಳಾಗಬೇಕು," ಎಂದಳು.

ಚಂದ್ರಭಾಗಿ–"ವಿಹಿತವೇ. ನಮಗೂ ಇಡೀ ಸಂಸಾರಕ್ಕೆ ಒಬ್ಬನೇ ಹುಡುಗ, ನಾಲ್ಕು ಕಾಸು ಖರ್ಚು ಮುಟ್ಟಿಸಿ, ವೈಭವ ಮಾಡಿ ಊರಲ್ಲಿ ಸೈ! ಸೈ! ಎಂದು ಜನರು ಕೊಂಡಾಡುವಂತೆ ನಡೆದುಕೊಳ್ಳಬೇಕಾಗಿ ನಮಗೂ ಮನಸ್ಸಿದೆ," ಎಂದಳು.

ಭೀಮರಾಯನು– "ಎರಡು ಸಾವಿ–ರಹ್ಹ! ಅಹ್ಹ" (ಪುನಃ ಕೆಮ್ಮುತ್ತಾನೆ.)

ತ್ರಿಯಂಬಕರಾಯ, "ಹಾಗೆಯೇ ಆಗಲಿ, ತಮ್ಮ ಇಷ್ಟಾನುಸಾರವಾಗಿಯೇ ಆಗಲಿ."

ಭೀಮರಾಯನು–"ನಿಶ್ಚಯ ತಾಂಬೂಲಕ್ಕೆ ದಿವಸ." (ಇನ್ನಷ್ಟು ಕೆಮ್ಮುತ್ತಾನೆ.)

"ಅದನ್ನು ಬೇಕಾದರೆ ಈಗಲೆ ಮುಗಿಸಬಹುದಷ್ಟೆ? ತಮಗೇನು ಸ್ವಲ್ಪ ಕೆಮ್ಮಿನ ಪೀಡೆ ಇದ್ದ ಹಾಗೆ ಕಾಣಿಸುತ್ತೆ?" ಎಂದ ತ್ರಿಯಂಬಕರಾಯ.

"ನಿನ್ನೆ ಬಕಾಸುರ ವಧೆಯ ಪ್ರಸಂಗವನ್ನು ಹಾಡಿ, ಬಕಾಸುರನ ಮಾತುಗಳನ್ನು ನಾನೇ ಆಡಿದೆ. ಉಷ್ಣದಿಂದ ಗಂಟಲು ಬಿದ್ದು ಕೆಮ್ಮು ಹತ್ತಿಕೊಂಡಿದೆ. ಕರಿಮೆಣಸಿನ ಕಷಾಯ ಕುಡಿದಿದ್ದೇನೆ. ಕೆಮ್ಮು ಈಗಲೇ ಪರಿಣಮಿಸುವುದೇನೋ– ಅಹ್ಹ! ಅಹ್ಹ! ಲಗ್ನವು ಈಗಲೇ ನಿಶ್ಚಯವಾದರೆ, ಉತ್ತಮವಲ್ಲವೆ?" ಎನ್ನಲು ಕಾಶೀನಾಥ ಭಟ್ಟನನ್ನು ಕರೆಯಿಸಿ, ಚಿತ್ರಭಾನು ಸಂವತ್ಸರದ ಚೈತ್ರ ಶುದ್ಧ ಷಷ್ಠಿಯ ರಾತ್ರಿ ಘಟಿ ಹತ್ತರ ಲಗ್ನವನ್ನು ನಿಶ್ಚಯಿಸಿ ಲಗ್ನಪತ್ರಿಕೆಯನ್ನು ಬರೆಯಿಸಿದರು.

ಶ್ರೀಗುರುಗಳವರ ಆಶೀರ್ವಚನದ ಬಲದಿಂದ ಇಂದಿರೆ ಹುಟ್ಟಿದಳಾದುದರಿಂದ ಗುರುವನ್ನು ಮದುವೆಯ ವೇಳೆಯಲ್ಲಿ ಭೀಮರಾಯನು ಕರೆಯಿಸಿಕೊಂಡನು. ಮದುವೆಯ ದಿನ ಸೂರ್ಯಾಸ್ತಮಕ್ಕೆ ಸ್ವಲ್ಪ ಸಮಯವಿರುವಾಗ ದಿಬ್ಬಣಗಳು ಇದಿರುಗೊಂಬೋಣದ ಅಬ್ಬರವೇರಿತು. ಸಾಲೊಂದರಲ್ಲಿ ಐನೂರು ಹಿಲಾಲುಗಳಿರುವ ಎರಡು ಸಾಲು ಹಿಲಾಲುಗಳೂ, ತಟ್ಟೆಯೊಂದರಲ್ಲಿ ಇಪ್ಪತ್ತೈದು ಹಿಲಾಲುಗಳಿರುವ ಇಪ್ಪತ್ತು ಬಳಾರ್ ತಟ್ಟೆಗಳೂ ಬಿರುಸು ಚಕ್ರಬಾಣ, ಆಕಾಶವಿಮಾನ ಮುಂತಾದ ಬಾಣ ಪ್ರದರ್ಶನಗಳೂ, ಭಾಮಾಮಣಿ, ರಾಜಾಮಣಿ ಮುಂತಾದವರ ನರ್ತನ ಸಂಘಗಳೂ, ಅಪರಿಮಿತವಾದ ಜನಸ್ತೋಮವು ಒಟ್ಟುಗೂಡಲು, ವಧೂಪಕ್ಷದ ದಿಬ್ಬಣವು ಹೊರಟು ನಗರದ ಮಧ್ಯಭಾಗದಲ್ಲಿ ಬಂದು, ಇದೇ ತರಹ ಅಟ್ಟಹಾಸದೊಡನೆ ಎರಡು ಕುದುರೆ ಸಾರೋಟಿನಲ್ಲಿ ವರನನ್ನು ಕುಳ್ಳಿರಿಸಿಕೊಂಡು ಬರುತ್ತಿರುವ ವರನ ಪಕ್ಷದವರನ್ನು ಅತಿ ಸಂಭ್ರಮದಿಂದ ಇದಿರುಗೊಂಡು, ಉಭಯಪಕ್ಷದವರೂ ಕೂಡಿ ಮುಂದುವರಿಸಿ ಬಹಳ ಅಟ್ಟಹಾಸದಿಂದ ಬಹುವಾಗಿ ಅಲಂಕರಿಸಲ್ಪಟ್ಟ ಚಪ್ಪರದೊಳಕ್ಕೆ ಪ್ರವೇಶಿಸಿದರು.

ಸಮಾವರ್ತನೆ, ಉದ್ದಿನ ಮುಹೂರ್ತ ಮುಂತಾದ ಕಾರ್ಯಕ್ರಮಗಳೆಲ್ಲ ಸಾಂಗವಾಗಿ ನೆರವೇರಿದ ಬಳಿಕ ಸುಮಾರು ಎಂಟು ಗಳಿಗೆ ರಾತ್ರಿ ಕಳೆಯಲು ಭೀಮರಾಯನು ತನ್ನ ನೆಂಟರಿಷ್ಟರನ್ನು ಕೂಡಿಕೊಂಡು ವರನನ್ನು ಕರೆತಂದನು. ಅನಂತರ ಹೂಮಾಲೆಗಳನ್ನು ಪರಸ್ಪರ ವಧೂವರರಿಗೆ ಹಾಕಿಸಿ ಶಾಸ್ತ್ರೋಕ್ತವಾಗಿ ಭೀಮರಾಯ ಅಂಬಾಬಾಯಿಯರು ಧಾರೆ ಎರೆದರು.

*

ಭಾಸ್ಕರರಾಯನು ಮದರಾಸಿನಲ್ಲಿ ಬಹು ಜಾಣ್ಮೆಯಿಂದ ಕಲಿಯುತ್ತಾ ಇದ್ದು ಕಡೆಗೆ ಬಿ. ಎ. ಪರೀಕ್ಷೆಯಲ್ಲಿ ಸಂಸ್ಥಾನದಲ್ಲಿ ಪ್ರಥಮ ಸ್ಥಾನ ಹೊಂದಿ ತೇರ್ಗಡೆಯಾದನು. ಭಾಸ್ಕರರಾಯನ ಈ ಅಭಿವೃದ್ಧಿಯನ್ನು ನೋಡಿ ಭೀಮರಾಯನೂ ಅಂಬಾಬಾಯಿಯೂ ಬಹಳ ಸಂಕಟಪಟ್ಟು ಆತನ ಕೆಡುಕನ್ನೆ ಹಾರೈಸಿಕೊಂಡಿದ್ದರು.

ಭಾಸ್ಕರರಾಯನು 'ಗೌರ್ನಮೆಂಟ್ ಆಫ್ ಇಂಡಿಯಾ ಸ್ಕೋಲರ್‌ಶಿಪ್' ಎಂಬ ಬಹುಮಾನದ

ವಿದ್ಯಾರ್ಥಿ ವೃತ್ತಿಯನ್ನು ಪಡೆದು 'ಸಿ. ಎಸ್.' ಎಂಬ ಪರೀಕ್ಷೆಗೋಸ್ಕರ ವಿಲಾಯತಿಗೆ ಹೋಗುವುದಕ್ಕೆ ನಿಶ್ಚಯಿಸಿದನು.

ಭಾಸ್ಕರರಾಯನು ಕೆಲವು ದಿವಸ ಅಮೃತರಾಯನಲ್ಲಿಯೂ ಕೆಲವು ದಿವಸ ತಾಯಿಯ ಮನೆಯಲ್ಲಿಯೂ ಇರುತ್ತಾ ವಿಲಾಯತಿಗೆ ಹೋಗುವುದನ್ನು ಕುರಿತು ಆಗಾಗ್ಗೆ ತಾಯಿಯ ಹತ್ತಿರ ಮಾತನಾಡಿ, ಅದರಿಂದ ಮುಂದಿನ ವೃದ್ಧಿಗೆ ಬಹಳ ಒಳ್ಳೆಯದಿದೆಯೆಂದು ಅವಳನ್ನು ಸಮಾಧಾನಪಡಿಸಿದನು. ಹತ್ತು ಹದಿನೈದು ದಿವಸ ಕಳೆದ್ದ ಮೇಲೆ ಅಮೃತರಾಯನು ಪ್ರಯಾಣದ ಸಕಲ ಸಾಹಿತ್ಯಗಳನ್ನು ಒದಗಿಸಿ, ವಿಲಾಯತಿಯಲ್ಲಿ ಸಿಕ್ಕುವ ವೃತ್ತಿಯ ಹಣದಿಂದ ಮಾತ್ರವೇ ಹುಡುಗನ ಕಾಲಕ್ಷೇಪವು ಸರಿಯಾಗಿ ನಡೆಯದೆಂದು ತಿಳಿದುಕೊಂಡು ತನ್ನ ಸ್ವಂತ ಕೈಯಿಂದ ಎರಡು ಸಾವಿರ ರೂಪಾಯಿ, ಮುಂದಾಗಿ ಒಬ್ಬ ದೊಡ್ಡ ಗೃಹಸ್ಥನ ಬಳಿಗೆ ಕಳುಹಿಸಿ, ಹುಡುಗನು ವಿಲಾಯತಿಗೆ ಮುಟ್ಟಿದ ಮೇಲೆ ಅವಶ್ಯ ಬಿದ್ದ ಹಾಗೆ ಅವನಿಗೆ ಕೊಡುವ ಹಾಗೆ ಬೇಕಾದ ಏರ್ಪಾಡುಗಳೆಲ್ಲವನ್ನೂ ಮಾಡಿದನು.

ಭಾಸ್ಕರರಾಯನು ಅಮೃತರಾಯನ ಏರ್ಪಾಟಿನಂತೆ ಹಡಗವೇರಿ ಹೋದ ಅನಂತರ ಐದಾರು ದಿವಸದಲ್ಲಿ ಕಮಲಪುರದ ಸಭಿಕರು ಈ ಪ್ರಕರಣವನ್ನು ಕ್ರಮದಂತೆ ವಿಚಾರಿಸಿ, ತಮ್ಮ ಅಭಿಪ್ರಾಯವನ್ನು ಕುರಿತು ಶೀಘ್ರ ಬಿನ್ನಹ ಪತ್ರ ಬರೆದುಕೊಳ್ಳುವುದು ಎಂದು ತಳ್ಳಿ ಬಿನ್ನಹ ಪತ್ರದ ಮೇಲೆ ಶ್ರೀಪಾದಂಗಳವರ ನಿರೂಪವು ಧರ್ಮ ವಿಚಾರಕನಾದ ಭೀಮರಾಯನಿಗೆ ಬಂದು ಮುಟ್ಟಿತು. ಭಾಸ್ಕರನು ವಿಲಾಯತಿಗೆ ಹೋಗಿದ್ದು ಬರುವ ತನಕ ವಿಚಾರಣೆಯನ್ನು ಮುಂದೂಡಬಹುದೆಂದು ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ, ಶ್ರೀಮದಾಚಾರ್ಯಾಣಾಮ್ ಕರಕಮಲಸಂಜಾತ, ಚತುರ್ವೇದವೇದ್ಯ ಯಮನಿಯಮಾದ್ಯಷ್ಟಾಂಗ ಯೋಗ ಶ್ರೀಪಾದಂಗಳವರಿಗೆ ಬಿನ್ನಹ ಪತ್ರವನ್ನು ಭೀಮರಾಯನು ಗುಮಾಸ್ತನಿಂದ ಬರೆಯಿಸಿ ಸಹಿ ಹಾಕಿ ಕಳುಹಿಸಿದನು.

*

ಇತ್ತಲಾಗಿ ತ್ರಿಯಂಬಕರಾಯನಿಗೆ ವೃದ್ಧಾಪ್ಯ ಬರಲು ತನ್ನ ಮಗನಾದ ವಿಠಲರಾಯನಿಗೆ ವ್ಯಾಪಾರದ ಆಡಳಿತಗಳನ್ನೆಲ್ಲಾ ಒಪ್ಪಿಸಿಕೊಟ್ಟನು. ದೀಪಾವಳಿ ಹಬ್ಬ ಬಂತು. ಆಗ ಮೂರು ದಿವಸಗಳ ಪರ್ಯಂತರ ಪ್ರತಿ ರಾತ್ರಿಯೂ ಊರಿನಲ್ಲಿದ್ದ ನರ್ತನ ಸ್ತ್ರೀಯರ ಮೇಳದವರೆಲ್ಲರೂ ಸಾಹುಕಾರ ಜನರ ಭುಡಸಾಲೆಗಳಿಗೆ ಬಂದು, ಗಾಯನ ನರ್ತನ ಮುಂತಾದ ವಿನೋದಗಳನ್ನು ಮಾಡುವ ಕ್ರಮದಂತೆ ವಿಠಲರಾಯನಲ್ಲೂ ಬಹಳ ವಿನೋದಗಳು ನಡೆದವು. ಈ ಸ್ತ್ರೀಯರಲ್ಲಿ ಗುಲಾಬಿ ಎಂಬವಳು ಗಾಯನ, ನರ್ತನ, ಅಂದ ಚಂದ, ಹಾವಭಾವ, ರೂಪಲಾವಣ್ಯಗಳಲ್ಲಿ ಅತಿ ಯೋಗ್ಯಳೆಂದು ಕಂಡುಕೊಂಡು ವಿಠಲರಾಯನು ಮೋಹಿತನಾಗಿ ಗುಲಾಬಿಯನ್ನು ತನ್ನ ಉಪಪತ್ನಿಯನ್ನಾಗಿ ನಿಶ್ಚೈಸಿಕೊಳ್ಳಲಾಲೋಚಿಸಿದನು. ಆದರೆ ಈ ವಿಷ್ಯಮಾನ ತಂದೆಗೆ ಗೊತ್ತಾದರೆ ಏನಾದೀತೋ ಎಂದು ಭಯಪಟ್ಟು ಹಗಲಿರುಳಲ್ಲಿಯೂ ಅವಳನ್ನೇ ನೆನೆಸುತ್ತಾ, ತನ್ನ ಮನಸಾಭೀಷ್ಟ ಸಿದ್ಧಿಯಾಗದೆ ತಲ್ಲಣಿಸಿ ವ್ಯಾಕುಲಪಟ್ಟು, ದಿನ ಹೋಗುತ್ತಾ ಹೋಗುತ್ತಾ ಮೈಯಲ್ಲಿ ಬಚ್ಚುತ್ತಾ ಬಂದನು. ತ್ರಿಯಂಬಕರಾಯನು ಇದಕ್ಕೆ ಕಾರಣ ತಿಳಿಯದೆ ಮಗನ ದೇಹಸ್ಥಿತಿಗೆ ಬೆಸರಿದಾಗ ಪೊಕ್ಕು ಸೆಟ್ಟಿ ಎಂಬವನು. "ಇಂತಹ ಎಷ್ಟೋ ಸಂಗತಿಗಳನ್ನು ಈ ಮೊದಲು ಕಂಡಿದ್ದೇನೆ. ಪರಿಹಾರವನ್ನು ಚೆನ್ನಾಗಿ ಬಲ್ಲೆ" ಎಂದು ವಿಠಲರಾಯನೊಡನೆ ಮಾತನಾಡಿ ಉಪಾಯವಾಗಿ ಎಲ್ಲಾ ವಿಷಯಗಳನ್ನು ತಿಳಿದುಕೊಂಡನು.

ಪೊಕ್ಕು ಸೆಟ್ಟಿಯ ಔಷಧಿಯಿಂದಾಗಿ ವಿಠಲರಾಯನು ಕೆಲವು ದಿವಸಗಳಲ್ಲಿ ಮೊದಲಿನಂತೆ ಮೈ ಕೈ ತುಂಬಿದವನಾಗಿ, ವ್ಯಾಪಾರಕ್ಕೆ ಮನಸ್ಸು ಕೊಡದೆ ಗುಲಾಬಿಯೊಡನೆ ವಿನೋದ ಕ್ರೀಡೆಯಲ್ಲಿ ಕಾಲಕ್ಷೇಪ ಮಾಡುತ್ತಿದ್ದನು. ಜೀವನಕ್ಕೆ ಬೇಕಾದ್ದಕ್ಕಿಂತ ಹೆಚ್ಚು ಐಶ್ವರ್ಯವಿದ್ದುದರಿಂದ ಅವನ ತಂದೆಯಾಗಲಿ, ಹೆಣ್ಣು ಕೊಟ್ಟು ಮಾವ ಭೀಮರಾಯನಾಗಲಿ ಅವನ ನಡತೆಯನ್ನು ಕುರಿತು ಆಕ್ಷೇಪಿಸದೆ ಹುಡುಗನು ಹೇಗಾದರೂ ಸುಕ್ಷೇಮಿಯಾಗಿರಬೇಕಾದ್ದೇ ಮುಖ್ಯವೆಂದು ಗ್ರಹಿಸಿ ಅವನನ್ನು ಮನಸ್ವಿಯಾಗಿ ನಡೆದುಕೊಳ್ಳುವುದಕ್ಕೆ ಬಿಟ್ಟರು. ಈ ಸ್ಥಿತಿಯಲ್ಲಿ ಕೆಲವು ತಿಂಗಳು ಕಳೆದ ನಂತರ ವಿಠಲರಾಯನು ಗೋಕುಳಿಯೆಂಬ ಇನ್ನೊಬ್ಬಾಕೆಯನ್ನು ಇಟ್ಟುಕೊಂಡು ಬೇಕಾದ ದ್ರವ್ಯವನ್ನು ಅವಳಿಗೂ

ಆವಳ ಮೇಲೆ ಮತ್ಸರ ಬಾರದಂತೆ ಇಮ್ಮಡಿಯಾಗಿ ಗುಲಾಬಿಗೂ ಕೊಡುತ್ತಾ, ಅನೇಕ ವೈಭವಗಳನ್ನನುಭವಿಸುತ್ತಾ ಇರುವಾಗ ಇಂದಿರೆಯು ಮಾತ್ರವು ಬಡವಾದಳು. ಇದನೇ ದಿನ ಸವೇ ಶೋಭನ ಪ್ರಸ್ಥವನ್ನು ಬೆಳೆಯಿಸಬೇಕೆಂದು ಭೀಮರಾಯನು ಆಲೋಚಿಸಿರುವುದನ್ನು ವಿಠಲರಾಯನು ಕೇಳಿ ಅಪರಿಮಿತ ಸಂತೋಷಪಟ್ಟನು. ಆದರೆ ಗುಲಾಬಿ, ಗೋಕುಳಿಯರು ಅದಕ್ಕೆ ಅಡ್ಡಿ ಬಂದುದರಿಂದ, ವಕೀಲ ಸೂರಪ್ಪಯ್ಯನು ಹನ್ನೆರಡು ವರುಷಪ್ರಾಯ ತುಂಬುವ ಮೊದಲು ಶೋಭನ ಪ್ರಸ್ಥ ಕಾನೂನಿಗೆ ವಿರುದ್ಧವೆಂದು ಹೇಳಿ ಒಂದು ವರ್ಷ ಆ ಕಾರ್ಯಕ್ರಮವನ್ನು ಮುಂದಕ್ಕೆ ಹಾಕಿಸಿದನು.

*

ಕೆಲವು ತಿಂಗಳುಗಳು ಕಳೆದವು. ಇಂದಿರೆಯು ತನ್ನ ಗಂಡನ ನಡತೆಯನ್ನು ಕುರಿತು ಒಂದೊಂದು ಸಮಯದಲ್ಲಿ ಆಲೋಚಿಸುವಷ್ಟು ಬುದ್ಧಿ ಶಕ್ತಿಯನ್ನು ಪಡೆದಳು. ಆವಳ ಸರಿಪ್ರಾಯದ ಹುಡುಗಿಯರು ಅವಳನ್ನು ಕಂಡಲ್ಲೆಲ್ಲ ಮನಸ್ಸಿಗೆ ವೇದನೆ ಉಂಟಾಗುವಂತೆ ಮಾತನಾಡುತ್ತಿರಲು ಇಂದಿರೆಯು ಮನಸ್ಸಿನಲ್ಲೇ, "ದೇವರೇ, ಪತಿಗೆ ಒಳ್ಳೇ ಬುದ್ಧಿಯನ್ನು ಕೊಟ್ಟು ಮುಂದಿನ ಕಷ್ಟಗಳನ್ನು ತಪ್ಪಿಸು." ಎಂದು ಪ್ರಾರ್ಥಿಸುತ್ತಾ ಇರುವಳು. ಪತಿಯ ನಡತೆಯ ಬಗೆಗೆ ತುಂಬಾ ಮನೋವೇದನೆಯುಂಟಾದಾಗ ಇಂದಿರೆಯು ಕನ್ಯಾಸ್ತ್ರೀಯರ ಶಾಲೆಯಲ್ಲಿ ಕಲಿಯುತ್ತಿದ್ದ ನೆರೆಮನೆ ರಾಮರಾಯನ ಮಗಳು ಶಾರದೆ ಎಂಬ ಹುಡುಗಿಯಿಂದ "ಸ್ತ್ರೀಧರ್ಮ ನೀತಿ," "ಇಸೋಪನ ನೀತಿಕಥೆಗಳು," "ಪ್ರಂಚತಂತ್ರ," "ಸತ್ಯ[illegible] ಚರಿತ್ರೆ" ಇವೇ ಮುಂತಾದ ಪುಸ್ತಕಗಳನ್ನು ಓದುತ್ತಿರಲು, ಭೀಮರಾಯನು ಮತ್ತು ಅಂಬಾಬಾಯಿಯು, ಮ್ಲೇಚ್ಛರಾದ ಪಾದ್ರಿಗಳು ಛಾಪಿಸಿದ ಪುಸ್ತಕಗಳನ್ನು ಓದುತ್ತಿರುವುದರಿಂದ ತಮ್ಮ ಮಗಳಿಗೆ ಕೇಡಿದೆ ಎಂದು ಮಗಳು ಓದುವುದನ್ನು ನಿಲ್ಲಿಸಲು ಯತ್ನಿಸಿದರು. ಅಂಬಾಬಾಯಿಯು,

"ಸರ್ವಾಂಗ ಚಿನ್ನದ ಕವಚವೇ ಬೇಕೆ? ಕ್ಷಣದಲ್ಲಿ ಮಾಡಿಸಿಕೊಡುತ್ತೇನೆ. ನಿನಗ್ಯಾಕೆ [illegible] [illegible] ಅವುಗಳನ್ನು [illegible]" ಎನ್ನಲು,

"ವಸ್ತ್ರಾಭರಣವೆ ಮುಂತಾದ ಅಲಂಕಾರಗಳು ಬಿಟ್ಟರೆ ಬೇರೇನು? ಸ್ತ್ರೀಯರಿಗೆ ಮುಖ್ಯವಾಗಿ ಬೇಕಾದ ಅಲಂಕಾರ ಯಾವುದೆಂದು ನೀನು ಬಲ್ಲೆಯಷ್ಟೆ?"

"ಬಲ್ಲೆನು. ಕುಂಕುಮ, ಕಾಡಿಗೆ– ಇವೇ ಅಲ್ಲವೆ? ಅವುಗಳಿಗೇನು ಕಡಿಮೆ?"

"ಕುಂಕುಮ, ಕಾಡಿಗೆ! ಅಯ್ಯೋ! ಏಕವ್ವಾ ಹೀಗೆ ಮಾತನಾಡುವೆ? ನಾನು ಚಿಕ್ಕ ಪ್ರಾಯದವಳು ದಿಟವೆ. ಆದರೂ ಸ್ವಲ್ಪವಾದರೂ ಬುದ್ಧಿಯಿಲ್ಲವೆಂದು ಗ್ರಹಿಸುತ್ತೀಯಾ? ಕೊಳಕು ಬಿಡಿ ಸೂಳೆಗೆ ಕುಂಕುಮ ಕಾಡಿಗೆ ಇಲ್ಲವೆ? ಸ್ತ್ರೀಯರಿಗೆ ಮುಖ್ಯವಾದ ಅಲಂಕಾರವೆಂದರೆ ಯೋಗ್ಯರಾದ ಪತಿಗಳಲ್ಲವೆ? ಇದು ನೀನು ತಿಳಿಯದೆ ಇದ್ದ ವಿಷಯವಲ್ಲ. ಬೇಕೆಂದು ತಿಳಿಯದವಳಂತೆ ಮಾತನಾಡುತ್ತೀಯೇನೋ. ನನ್ನ..." ಎನ್ನುವಷ್ಟರಲ್ಲಿ ಗಂಡನ ನಡತೆಯ ವಿಷಯವು ನೆನಪಿಗೆ ಬಂದು, ದುಃಖದಿಂದ ಹೆಚ್ಚು ಮಾತನಾಡಕೂಡದೆ ಪುನಃ ಕಂಬನಿ ಇಕ್ಕಿದಳು. ಆಗ ಅಂಬಾಬಾಯಿಯು–

"ತುಂಬಿದ ಶುಕ್ರವಾರ. ಸಾಯಂಕಾಲದ ಕತ್ತಲೆಯಲ್ಲಿ ಕಣ್ಣೀರು ಮಿಡಿಯುತ್ತೀಯಾ ? ನಿನ್ನ ಮನೋಭಿಪ್ರಾಯವೇನೆಂದು ಗೊತ್ತಾಯಿತು ಚಿನ್ನಾ, ಅಳಬೇಡ..." ಎಂದು ಸಂತೈಸಿದಳು.

ಮಾರುದಿವಸ ಭೀಮರಾಯನು ತ್ರಿಯಂಬಕರಾಯನಲ್ಲಿಗೆ ಹೋಗಿ ವಿಠಲರಾಯನ ವಿಷಯವನ್ನು ಮಾತನಾಡುವುದಕ್ಕೆ ಪ್ರಾರಂಭಿಸುವಾಗ ವಿಠಲರಾಯನ ಬಂಗಲಾದಿಂದ ಊಳಿಗದ ತಿಮ್ಮನ ಓಡಾಡುತ್ತಾ ಬಂದು,

"ಸ್ವಾಮಿ, ರಾಯರಿಗೆ ಜ್ವರ. ನಿನ್ನೆಯಿಂದ ಮಲಗಿದಲ್ಲೆ..." ಎಂದನು.

ಕೂಡಲೆ ಚಿಕಿತ್ಸೆಯನ್ನು ಮಾಡಿಸಿದರೂ ಜ್ವರ ಉಲ್ಬಣವಾಯಿತೇ ಹೊರತು ಕಡಿಮೆ ಆಗಲಿಲ್ಲ. ವಿಠಲರಾಯನ ಅವಸ್ಥೆ ತೀರಾ ವಿಷಮಿಸಲು ಗುಲಾಬಿ, ಗೋಕುಳಿಯರು, "ಇನ್ನು ತಿಮ್ಮ ಒಡವೆ ನಿಮಗೆ" ಎಂದು ಹೇಳಿ ಹೊರಟು ಹೋದರು. ಇಂದಿರೆಯು ತಕ್ಕಡಿ ವೆಂಕಟರಾಯನ ವೈದ್ಯವನ್ನು ಮೆಚ್ಚದೆ, ತಜ್ಞರಾದ "ಡಾಕ್ಟರ್" ಒಬ್ಬರನ್ನು ಕರೆಯಲು ಸೂಚಿಸಿದರೂ ಭೀಮರಾಯನು ಒಪ್ಪಲಿಲ್ಲ. ಇದರಿಂದ ಅಸ್ವಸ್ಥ ಮನದವಳಾದ ಇಂದಿರೆಯು ಊಟ ಬಿಟ್ಟು ಶಾನೆ ಚಿಂತೆಯಿಂದ ಒಂದು ಕೋಣೆಗೆ ಹೋಗಿ ನೆಲದಲ್ಲಿ ಮಲಗಿಕೊಂಡಳು.

ಭೀಮರಾಯನೆ ಮುಂತಾಗಿ ಎಲ್ಲರೂ ವಿಠಲ



"ಒರಟಾದ, ಗಟ್ಟಿ ಕಣಗಳಿರುವ
ಟೂಥ್‌ಪೌಡರ್‌ಗಳು ನಿಮ್ಮ
ಒಸಡು ಮತ್ತು ಹಲ್ಲುಗಳಿಗೆ
ಹಾನಿಯನ್ನುಂಟುಮಾಡಬಹುದು...

# ಕೋಲ್ಗೇಟ್ ಟೂಥ್ ಪೌಡರ್ ಬಳಸಿ ನಿಮ್ಮ ಹಲ್ಲುಗಳನ್ನೂ ಒಸಡುಗಳನ್ನೂ ರಕ್ಷಿಸಿರಿ–ಮತ್ತು ಉಸಿರಿನ ದುರ್ವಾಸನೆಯನ್ನೂ ನಿವಾರಿಸಿರಿ!




ಕೋಲ್ಗೇಟ್ ಟೂಥ್‌ಪೌಡರ್ ಅತಿ ಸೂಕ್ಷ್ಮ ಹಾಗೂ ಬಿಳುಪಾಗಿದೆ. ಅದು ನಿಮ್ಮ ಒಸಡುಗಳನ್ನು ಮೃದುವಾಗಿ ಉಜ್ಜುತ್ತಿರುವಾಗಲೇ ಅದರ ಪಾಲಿಶ್ ಮಾಡುವ ಸೌಮ್ಯ ಸತ್ವ ನಿಮ್ಮ ಹಲ್ಲುಗಳ ಮೇಲಿನ ಕೊಳೆಯ ಪರೆಯನ್ನು ತೆಗೆದು ಅವುಗಳನ್ನು ಅಧಿಕ ಸ್ವಚ್ಛ ಹಾಗೂ ಬಿಳಿ ಮಾಡುತ್ತದೆ. ಕೋಲ್ಗೇಟ್‌ನ ಹೇರಳ ನೊರೆ ನಿಮ್ಮ ಹಲ್ಲುಗಳ ಎಡೆಗಳನ್ನು ಪ್ರವೇಶಿಸಿ, ದುರ್ಗಂಧವನ್ನೂ ದಂತಕ್ಷಯ-ವನ್ನೂ ಉಂಟುಮಾಡುವ ಕೀಟಾಣುಗಳನ್ನು ನಿವಾರಿಸುತ್ತದೆ; ಮತ್ತು ಶ್ವಾಸದ ದುರ್ಗಂಧವನ್ನು ದೂರಗೊಳಿಸುತ್ತದೆ.
ನಿಮ್ಮ ಕುಟುಂಬದವರಿಗೆ ಕೋಲ್ಗೇಟ್ ಟೂಥ್‌ಪೌಡರ್‌ನ ಮೂಲಕ ಆಧುನಿಕ ದಂತರಕ್ಷಣೆಯನ್ನು ನೀಡಿರಿ. ಅವರಿಗೆ ಅದರ ಶೀತಲವಾದ ಹಾಗೂ ಪೆಪ್ಪರ್‌ಮಿಂಟ್‌ನಂತಹ ಪರಿಮಳ ಇಷ್ಟವಾಗುವುದು.

TP.G.30 KN

ರಾಯನಿದ್ದ ಕೋಣೆಯನ್ನು ಬಿಟ್ಟು ಮತ್ತೊಂದು ಕೋಣೆಗೆ ಹೋಗಿ ಬೀಗ ಹಾಕತೊಡಗಿದನು. ಸ್ವಲ್ಪ ಹೊತ್ತಿನಲ್ಲಿ ಮತ್ತೊಂದು ಕೋಣೆಯಲ್ಲಿ ಮಲಗಿದ್ದ ವಿಠಲರಾಯನು ಮಂಚದ ಮೇಲೆ ಕೈಕಾಲುಗಳನ್ನು ಅಲ್ಲಾಡಿಸಿದ ಹಾಗೂ ಹಾಸಿಗೆಗೆ ಕಾಲುಗಳನ್ನು ಬಡಿಸಿದ ಹಾಗೂ ಶಬ್ದವಾಯಿತು. ಇದನ್ನು ಅವರಾರೂ ಲಕ್ಷಿಸದಿರಲು ಮುಂದೆ ಮಾತಿನ ಸ್ವರವಾಗಲಿ ಬೇರೆ ಯಾವ ಶಬ್ದವಾಗಲಿ ವಿಠಲರಾಯನ ಕೋಣೆಯಿಂದ ಕೇಳಿಸಲಿಲ್ಲ. ಆಗ ತ್ರಯಂಬಕರಾಯನು. "ರಾಯರೇ, ನಾವು ಮಂಚದ ಕೋಣೆಗೆ ಹೋಗೋಣ...!" ಎಂದು ಹೇಳಿ ಭೀಮರಾಯನ ಸಮೇತ ಬಂದು ಮಂಚದ ಮೇಲೆ ನೋಡಲು, ಆ ಪ್ರಾಣಿಯು ಪಂಚತ್ವವನ್ನೈದಿರುವುದನ್ನು ಕಂಡು, "ಹೇ ಜಗದೀಶ್ವರನೇ," ಎಂದು ಕೂಗಿ ಎದೆ ಎದೆ ಬಡಿದುಕೊಂಡು ಬೋಧಕ್ಷಯವಾಗಿ ಧಡ್ಡೆಂದು ಭೂಮಿಯ ಮೇಲೆ ಬಿದ್ದನು.

ಪತಿಯ ಮರಣದ ವಾರ್ತೆ ತಿಳಿದು ತೀರಾ ದುಃಖಿನಿಯಾದ ಇಂದಿರೆಯನ್ನು ವಿಠಲರಾಯನ ಬಂಗಲೆಗೆ ಕರೆತರುವಾಗ ಸಾರೋಟಿನಲ್ಲಿ ಅಂಬಾಬಾಯಿಯು ಇಂದಿರೆಯ ಹಣೆಯ ಮೇಲೆ ಇದ್ದ ಕುಂಕುಮದ ಬೊಟ್ಟನ್ನು ಆಕೆಗೆ ತಿಳಿಯದ ಹಾಗೆ ಉಜ್ಜಿ ತೆಗೆಯುವುದಕ್ಕೆ ಬೇಕಾದ ಉಪಾಯಗಳನ್ನು ಮನಸ್ಸಿನಲ್ಲಾಲೋಚಿಸಿ, "ಅಪ್ಪಾ, ಎಷ್ಟು ದುಃಖಿಸುವಿ," ಎಂದು ಹೇಳಿ, ತನ್ನ ಸೀರೆಯ ಸೆರಗಿನಿಂದ ಕಣ್ಣುಗಳನ್ನು ಉಜ್ಜುವಾಗ, ಉಪಾಯದಿಂದ ಆ ಬೊಟ್ಟನ್ನು ಉಜ್ಜಿ ತೆಗೆದಳು. ಇಂದಿರೆಯು ಆ ಚಮತ್ಕಾರಗಳನ್ನು ತಿಳಿದು, "ಏಕಪ್ಪಾ, ನಾನೇ ಉಜ್ಜಿ ತೆಗೆಯುತ್ತಿದ್ದೆನಷ್ಟೆ? ನನಗಿನ್ನೇಕೆ ಬೊಟ್ಟು?" ಎಂದಳು.

ಬಂಗಲೆಯಲ್ಲಿ ಇಂದಿರೆಯು ಮಂಚವೇರಿ ಮೃತ ಗಂಡನ ಪಾದಗಳನ್ನಪ್ಪಿ ಹಿಡಿದುಕೊಂಡು, "ಅಯ್ಯೋ, ಯಾವ ವಿಧದಿಂದಾಲೋಚಿಸಿದರೂ ನಾನೇ ತಮ್ಮ ಕಣ್ಣ ಮುಂದೆ ಹೋಗಬೇಕಿತ್ತಷ್ಟೆ..." ಎಂದು ದುಃಖಾಶ್ರುಪಾತಗಳನ್ನು ಸುರಿಸುತ್ತಾ ಅಲ್ಲಿಂದೆದ್ದು ತಂದೆಯ ಬಳಿಗೆ ಬಂದು ಕಾಲಿನ ಮೇಲೆ ಬಿದ್ದಳು.

ಅಷ್ಟರಲ್ಲಿ ಪುರೋಹಿತನು ಕೈಯಲ್ಲಿ ಒಂದಿಷ್ಟು ದರ್ಭೆಯ ಹುಲ್ಲನ್ನು ಹಿಡಿದುಕೊಂಡು, "ನಾರಾಯಣ, ನಾರಾಯಣ," ಎನ್ನುತ್ತಾ ಒಳಗೆ ಬಂದು ಭೀಮರಾಯನನ್ನು ಮತ್ತೊಂದು ಕೋಣೆಗೆ ಕರೆದೊಯ್ದು. "ಮುಂಗಿಯ ಕೇಶಛೇದನ ಆಗಬೇಕು," ಹೇಳಲು ಭೀಮರಾಯನು. "ಆ ಕಾರ್ಯವನ್ನು ಮುಂದಕ್ಕಿಟ್ಟು ಬೇರೆ ಕೆಲಸಗಳನ್ನು ಬೇಗ ಮುಂದುವರೆಸಿರಿ," ಎಂದು ಹೇಳಲು ಶವವನ್ನು ಶವಸಂಸ್ಕಾರಕ್ಕೋಸ್ಕರ ಕೊಂಡೊಯ್ದರು.

*

ಭೀಮರಾಯನು ಮತ್ತು ಅಂಬಾಬಾಯಿ ಮೆಲ್ಲ ಮೆಲ್ಲನೆ ತಮ್ಮ ದುಃಖವನ್ನು ಮರೆಯುತ್ತಾ ಬಂದಂತೆ, ಬಡ ಇಂದಿರೆಯ ಸಂಕಷ್ಟಗಳು ಹೆಚ್ಚುತ್ತಾ ಬಂದವು. ಇದೇ ಒಂದು ವರ್ಷ ಯಾರಿಗೂ ಮುಖ ತೋರಿಸಲಿಕ್ಕೂ ಯಾರೊಡನಾದರೂ ಮಾತಾಡಲಿಕ್ಕೂ ಕೂಡದೆಂಬ ಕಟ್ಟಳೆಗೆ ಅನುಸಾರವಾಗಿ ನಡೆಯುವ ವಿಷಯದಲ್ಲಿ ದಿನ ಹೋಗುತ್ತಾ ಹೋಗುತ್ತಾ ಅವಳ ಮೇಲೆ ಕಠೋರವಾದ ಬಲಾತ್ಕಾರಗಳು ನಡೆದವು. ಈ ಹೊತ್ತು ತಲೆಯನ್ನು ಬಾಚಿಕೊಂಡಳೆಂತಲೂ, ನಾಳೆ ಕಪ್ಪು ಸೀರೆಯನ್ನುಟ್ಟಳೆಂತಲೂ, ಇನ್ನೊಂದು ದಿವಸ ಕುಪ್ಪಸ ತೊಟ್ಟಳೆಂತಲೂ, ಹೀಗೆಲ್ಲಾ ಆಗಾಗ್ಗೆ ಹಿಂದಿನಿಂದ ಮಾತನಾಡಿ ದ್ರೋಹಿಸಲಿಕ್ಕೆ ಪ್ರಾರಂಭಿಸಿದರು. ಇಂದಿರೆಯು ತನ್ನ ಮನೋವ್ಯಥೆಯನ್ನು ಕಳೆದುಕೊಳ್ಳಲು ಪುಸ್ತಕವನ್ನು ಓದುತ್ತಿರುವುದನ್ನು ಕಂಡು ಅಂಬಾಬಾಯಿಯು. "ಇನ್ನು ಇಂದಿರೆಯನ್ನು ತಕ್ಕ ಜಾಗ್ರತೆಯಲ್ಲಿ ಇಟ್ಟುಕೊಳ್ಳಬೇಕು ಮುಂದೆ ನಷ್ಟ–ಭ್ರಷ್ಟಕ್ಕೆ ಕಾರಣವಾಗಬಾರದು." ಎಂದು ಯೋಚಿಸಿ ಭೀಮರಾಯನೊಡನೆ,

"ಇಂದಿರೆಯನ್ನು ಸಡಿಲು ಬಿಡುವುದು ಯೋಗ್ಯವಲ್ಲ. ಕುಟುಂಬದ ಕೀರ್ತಿಗೆ ನ್ಯೂನತೆ ಬರುವುದು," ಎಂದಳು.

ಭೀಮರಾಯನು, "ಏನು? ಏನಾಯಿತು? ಅವಳು ಯಾವುದೊಂದು ದುಷ್ಕೃತ್ಯಕ್ಕೂ ಕೈಯೊಡ್ಡುವವಳಲ್ಲವೆಂದು ನಾನು ದಿಟವಾಗಿ ನಂಬಿದ್ದೇನೆ. ಈಗೇನಾಯಿತು ಹೇಳು," ಎಂದನು.

"ಅವಳು ಈ ಹೊತ್ತು ತಲೆಗೆ ಎಣ್ಣೆ ಇಟ್ಟು ಬಾಚಿಕೊಂಡು ಜಡೆ ಹೆಣೆದುಕೊಂಡಿದ್ದಾಳೆ."

"ಅದೇನು ದೊಡ್ಡ ಮಾತು? ಅದು ಸಹಜವಲ್ಲವೆ? ತಲೆಯಲ್ಲಿದ್ದ ಕಸನೂ ಹೇನೂ ತೆಗೆದು ಸ್ವಚ್ಛಪಡಿಸುವುದು ದೋಷವೇ? ತಲೆಗೆ ಎಣ್ಣೆ ಇಲ್ಲದಿದ್ದರೆ ಕಣ್ಣಿಗೆ ಕೇಡಲ್ಲವೆ?"

"ಕುಪ್ಪಸ ತೊಟ್ಟಿದ್ದಾಳೆ!"

"ನೀನು ಹೇಳುವುದೇನು? ಮೈ ಬಿಟ್ಟು ತಿರು ಗಾಡಬೇಕೇನು?"

"ಪಾದ್ರಿಯ ಪುಸ್ತಕ ಓದುತ್ತಾಳೆ. ಮುಂದೇನು ಗತಿ?"

"ಎಂಥಾ ಪುಸ್ತಕ?"

"ಎಂಥಾದ್ದೊ, ನೀತಿಕಥೆಗಳಂತೆ– ಸುಡುಗಾಡು ಕಥೆಗಳು!"

"ಅದರಿಂದ ಬರುವ ಕೇಡೇನು?"

"ಅಯ್ಯೋ! ನಾನೇನು ಕತ್ತೆ ಎಂದು ತಿಳಿದು ಕೊಂಡಿದ್ದೀರಾ? ತಮ್ಮ ಬುದ್ಧಿಯೂ ಹೀಗಾಯಿತೆ? ಹುಡುಗಿಗೆ ಮನಸ್ಸಿನಲ್ಲಿ ವೈರಾಗ್ಯ ಹುಟ್ಟುವಂತೆ ಏನಾದರೂ ಒಂದು ಉಪಾಯ ತೆಗೆಯಬೇಡವೇ?"

"ಉಪಾಯವೇನು ನೀನೇ ಹೇಳು?"

"ಸಂತರನ್ನು ಕರೆಯಿಸಿ ಕೆಲವು ದಿವಸಗಳ ಪರ್ಯಂತರ ಎಡೆಬಿಡದೆ ಭಜನೆ ಪಾರಾಯಣ ಸಪ್ತಾಹ ಮುಂತಾದ್ದನ್ನು ಮಾಡಿಸಿ, ಆ ಸತ್ಕಾರ್ಯಗಳಲ್ಲಿ ಇಂದಿರೆ ಪ್ರವರ್ತಿಸಿ. ಸಂತರ ಸೇವೆಮಾಡಿಕೊಂಡು ಭಕ್ತಿ – ವೈರಾಗ್ಯವನ್ನು ಪಡೆಯುವ ಹಾಗೆ ಮಾಡುವುದು ಉತ್ತಮವೆಂದು ನಾನು ದೃಢವಾಗಿ ನಂಬುತ್ತೇನೆ."

"ಹಾಗಾಗಲಿ, ನಿಶ್ಚಯವಾಗಿ ನಿನ್ನಭೀಷ್ಟವನ್ನೀಡೇರಿಸುವೆನು."

ಇಂದಿರೆಗೆ ಭೀಮರಾಯನಲ್ಲಿ ತ್ರಿಕಾಲ ಭಜನೆ, ಗುರುಚರಿತ್ರೆ ಸಪ್ತಾಹ, ರಾಧಾವಿಲಾಸ, ರಾಸ ಕ್ರೀಡೆ, ಗೋಪೀವಸ್ತ್ರಾಪಹರಣ ಮುಂತಾದ ಕೃಷ್ಣನ ಲೀಲಾ ಚರಿತ್ರ ಪ್ರದರ್ಶನಗಳು ನಡೆಯುತ್ತಾ ಕೆಲವು ವಾರಗಳು ಕಳೆದವು. ಇಂದಿರೆಯು ಇದಾವುದಕ್ಕೂ ಮನಸ್ಸು ಕೊಡದೆ ಹಗಲೂ ರಾತ್ರಿ ತನ್ನ ಕೋಣೆಯಲ್ಲೆ ಇದ್ದುಕೊಂಡು ತಾಯಿ–ತಂದೆಗಳಿಗೆ ತಿಳಿಯದ ಹಾಗೆ ಶಾರದಾಬಾಯಿಯಿಂದ ಪುಸ್ತಕ ತರಿಸಿ. ಓದುತ್ತಾ ಬರೆಯುತ್ತಾ ಇದ್ದಳು.

ಹೀಗಿರುವಾಗ ಒಂದು ದಿನ ಅಂಬಾಬಾಯಿಯು ಇಂದಿರೆಯ ಕೋಣೆಗೆ ಬಂದು ಅವಳೊಡನೆ, "ಇಂದಿರೆ ಚೌಕಮನೆಯಲ್ಲಿ ರಾಧಾಕೃಷ್ಣರ ಅಭಂಗಗಳನ್ನು ಹಾಡಿ ಸಂತರು ರಂಗಶಿಲೆಯಲ್ಲಿ ಬ್ರಹ್ಮಾನಂದ ನಾಟ್ಯವನ್ನಾಡುತ್ತಾರೆ. ನೀನಲ್ಲಿಗೆ ಬರಬಾರದೆ?" ಎಂದಳು.

"ಇದೇನವ್ವಾ, ಒಂದು ಸಂವತ್ಸರದವರೆಗೂ ಯಾರಿಗೂ ಮುಖ ತೋರಿಸಬಾರದೆಂದು ನೀನಲ್ಲವೆ ನನಗೆ ಆಗಾಗ ಹೇಳುತ್ತಿದ್ದೆ?" ಎಂದಳು ಇಂದಿರೆ.

ಅಂಬಾಬಾಯಿ. "ನಿನಗೆ ಹಿರಿಯರ ಮಾತಿನಲ್ಲಿ ವಿಶ್ವಾಸವೂ ಭಕ್ತಿಯೂ ಇಲ್ಲ," ಎಂದಳು. ಇಂದಿರೆಯು, "ಹಿರಿಯರು ಗಳಿಗೆಗೊಂದು ವಿಧವಾಗಿ ಮಾತನಾಡಿದರೆ ಯಾವ ಮಾತಿನಲ್ಲಿ ವಿಶ್ವಾಸವಿಡಬೇಕೆಂದು ನನಗೆ ತೋಚುವುದಿಲ್ಲ," ಎಂದಳು.

ಅಂಬಾಬಾಯಿ, "ನಿನ್ನ ಹತ್ತಿರ ಮಾತನಾಡಿ ಜಯಿಸಲಿಕ್ಕೆ ನನ್ನಿಂದ ಕೂಡುವುದಿಲ್ಲ," ಎಂದು ಹೇಳಿ ಭೀಮರಾಯನೊಡನೆ, "ಅವಳಿರುವ ಕೋಣೆಯ ಬಾಗಿಲಿನ ಹತ್ತಿರವೇ ಅಧ್ಯಕ್ಷರನ್ನು ಕರೆದುತಂದು ಅನುಭವಾಮೃತ, ಗುರುಚರಿತ್ರ, ಸಂತಚರಿತ್ರ, ಇವೇ ಮುಂತಾದ ಗ್ರಂಥಗಳನ್ನು ವ್ಯಾಖ್ಯಾನ ಸಹಿತ ಓದಿಸಿದರೆ ಅವಳಿದ್ದಲ್ಲಿಂದ ತಾನೇ ಕೇಳಬಹುದಷ್ಟೆ? ಹೇಗೆ ತಮ್ಮ ಅಭಿಪ್ರಾಯ?" ಎಂದು ಕೇಳಲು ಭೀಮರಾಯನು, "ಬೇರೆ ಉಪಾಯ ನನಗೂ ಕಾಣುವುದಿಲ್ಲ. ನೀನು ಹೇಳಿದ ಉಪಾಯವೇ ಸುಲಭವಾದದ್ದು," ಎಂದನು.

ಸಂತಮಂಡಳಿಯ ಅಧ್ಯಕ್ಷರು ಅಂತೆಯೇ ಮಾಡಿದರೂ ಇಂದಿರೆಯ ಮೇಲೆ ಲೇಶಾಂಶವಾದರೂ ಪರಿಣಾಮ ಬೀರಲಿಲ್ಲ. ಇನ್ನೇನು ಮಾಡುವುದೆಂದು ಭೀಮರಾಯನು ಯೋಚಿಸುತ್ತಿರಲು ಅಧ್ಯಕ್ಷರು, "ರಾಯರೇ, ನಾನೊಂದು ಚಮತ್ಕಾರಿಕ ಉಪಾಯವನ್ನಾಲೋಚಿಸಿದ್ದೇನೆ. ಅದನ್ನು ನಡೆಸಿದರೆ ಕಾರ್ಯ ಸಿದ್ಧಿಯಾಗದೆ ಹೋಗದು. ಅದಾವುದೆಂದು ಈಗ ಹೇಳಲಾಗದು," ಎಂದನು.

ಆ ದಿನ ಪಾರಾಯಣ ಮುಂತಾದ್ದು ತಡವಾಗಿ ಪ್ರಾರಂಭವಾಗಿ ಮಧ್ಯರಾತ್ರಿಯಾಗುವಾಗ ಮುಗಿಯಿತು. ಇಂದಿರಾಬಾಯಿಯು ತನ್ನ ಕೋಣೆಯ ಬಾಗಿಲುಗಳನ್ನು ಮುಚ್ಚಿ ಅಗಳಿ ಹಾಕಿ ಮಲಗಿಕೊಂಡರೂ ನಿದ್ರೆ ಬರಲಿಲ್ಲ. ಮಲಗಿದ ಒಂದು ಗಳಿಗೆಯ ಬಳಿಕ ಅವಳ ಕೋಣೆಯ ಪಶ್ಚಿಮ ದಿಕ್ಕಿನ ಕಿಟಕಿಬಾಗಿಲುಗಳು ಹೊರಗಿಂದ ತೆರೆಯಲ್ಪಡುವುದನ್ನು ಕಂಡು, "ಅದ್ಯಾರು?" ಎಂದು ಕೇಳಲು,

"ನಾನು, ರಂಗಪ್ಪ, ಅಧ್ಯಕ್ಷ–ನಿನ್ನೊಡನೆ ಕೆಲವು ಸಂಗತಿಗಳನ್ನು ಕುರಿತು ಮಾತನಾಡುವ ಅವಶ್ಯಕತೆ ಇದೆ. ವಿಠಲನಾಣೆ, ಯಾವುದೊಂದು ದುಷ್ಕಾರ್ಯವನ್ನಾಲೋಚಿಸಿ ಬಂದವನಲ್ಲ" ಎಂದನು,.

" ನನ್ನ ಮನೆಯೇ ನನ್ನ ಜಗತ್ತು,
ಅದನ್ನು ಚೊಕ್ಕಟವಾಗಿಡಲು ನೆರವಾಗುತ್ತವೆ ನನ್ನ ಸುಖಕರ ಬಟ್ಟೆಗಳು"



ನಿಮ್ಮ ಮೆಚ್ಚಿನ ಉಡುಪುಗಳಿಗಾಗಿ
ನಿಮ್ಮ ನಚ್ಚಿನ ಬಟ್ಟೆಗಳು

**ಮಫತ್‌ಲಾಲ್ ಫ್ಯಾಬ್ರಿಕ್ಸ್**

ಸೂಟಿಂಗ್ಸ್, ಶರ್ಟಿಂಗ್ಸ್,
ಸೀರೆಗಳು, ಡ್ರೆಸ್ ಮೆಟೀರಿಯಲ್ಸ್, ಮತ್ತು ಡೆನಿಮ್ಸ್.

**ಮಫತ್‌ಲಾಲ್ ಇಂಡಸ್ಟ್ರೀಸ್** ನ್ಯೂ ಶೋರೋಕ್ ಮಿಲ್ಸ್ **ಮಫತ್‌ಲಾಲ್ ಫೈನ್**

MF-18 KAN.

ಈ ತರದ ಉಪದ್ರವವು ಮುಂದಾದರೂ ಸಂಭವಿಸಬಹುದು. ನಿವೃತ್ತಿಯ ಮಾರ್ಗವನ್ನು ಈಗಲೆ ನೋಡುವುದುತ್ತಮವೆಂದು ಆಲೋಚಿಸಿ, ಮಾಡಬೇಕಾದ ಉಪಾಯವೇನೆಂದು ಮನಸ್ಸಿನಲ್ಲೇ ನಿಷ್ಕರ್ಷೆಯಿಸಿದಳು.

ಅಧ್ಯಕ್ಷನು, "ಇದೇನಿಷ್ಟು ನಿರ್ದಯ? ಒಂದೂ ಉತ್ತರವಿಲ್ಲವೆ? ಭಯವೇನು?" ಎಂದ.

ಇಂದಿರೆಯು, "ಭಯವೇನಿಲ್ಲ ಸ್ವಾಮಿ, ಕೋಣೆಯ ಬಾಗಿಲು ತೆರೆಯಬೇಕೆ?" ಎಂದಳು. ಅವನು ಉಲ್ಲಾಸದಿಂದ, "ಓಹೋ! ಯೋಗ್ಯವೆಂದು ನೀನು ಆಲೋಚಿಸುವುದಾದರೆ ತೆರೆ... ಜೈ ವಿಠಲ!"

ಇಂದಿರಾಬಾಯಿಯು ಮೆಲ್ಲನೆ ಬಾಗಿಲು ತೆರೆದಳು. ಸಂತ ಶಿಖಾಮಣಿಯು ಕೋಣೆಯೊಳಗೆ ಬಂದು, "ಓಹೋ! ನಿನ್ನ ಭಕ್ತಿಗೆ ಮೆಚ್ಚಿ ಪ್ರಸನ್ನನಾದೆನೆಂದು" ಹೇಳಿ ನಗುತ್ತಾ ಅವಳ ಹತ್ತಿರಕ್ಕೆ ಹೋದನು. ಅವನು ಮೈಗೆ ಮೈ ಮುಟ್ಟುವರೆಗೆ ಸಮೀಪಿಸಲು ಇಂದಿರಾಬಾಯಿಯು ಹಿಂದು ಹಿಂದಕ್ಕೆ ಸೇರುತ್ತಾ, "ಸ್ವಾಮಿ, ದಯಮಾಡಿ ಕುಳ್ಳಿರಿ, ಕಕ್ಕುಲತೆ ಪಡುವುದೇಕೆ? ಇಷ್ಟು ದಿವಸದ ವರೆಗೆ ನಾನು ತಮ್ಮ ಮಾತುಗಳಿಗೆ ಕಿವಿ ಕೊಡದೆ ಇದ್ದ ನನ್ನ ಅಪರಾಧವನ್ನು ಕ್ಷಮಿಸಬೇಕು. ಸ್ವಾಮಿ. ತಮ್ಮ ಹತ್ತಿರ ಒಂದೆರಡು ಗಳಿಗೆ ಪರ್ಯಂತರ ಮಾತನಾಡಬೇಕೆಂದು ಮನಸ್ಸಿದೆ. ಆದರೆ ಮಾತನಾಡುವುದಕ್ಕೆ ಪ್ರಾರಂಭಿಸಿದ ಮೇಲೆ ಮಧ್ಯದಲ್ಲಿ ನಿಲ್ಲಿಸುವುದು ಯುಕ್ತವಲ್ಲವಾದುದರಿಂದ ನಾನು ಮೂರು ನಿಮಿಷಗಳೊಳಗೆ ಹೊರಗೆ ಹೋಗಿ ಬರುತ್ತೇನೆ. ಕುಳ್ಳಿರಿ!" ಎಂದು ನಗೆಮೊಗದೊಡನೆ ಹೇಳಿ, ಕೋಣೆಯ ಮೂಲೆಯಲ್ಲಿದ್ದ ನೀರಿನ ಪಾತ್ರವನ್ನು ತೆಗೆದುಕೊಂಡು ಹೊರಗೆ ಹೋಗಿ ಬಾಗಿಲನ್ನೆಳೆದುಕೊಂಡು ಕೊಂಡಿಯಲ್ಲಿದ್ದ ಸಂಕೋಲೆಯನ್ನು ಸಿಕ್ಕಿಸಿ ಕತ್ತಲೆಯಲ್ಲೊಬ್ಬಳೆ ಅಂಗಳಕ್ಕಿಳಿದು ಆಕಾಶವನ್ನು ನೋಡಿ ಮಧ್ಯರಾತ್ರಿಯ ಸಮಯವೆಂದು ತಿಳಿದು, "ಆಹಾ ದೇವರೇ! ನನ್ನ ದುರ್ಗತಿಯೆ!" ಎಂದು ದುಃಖಿಸಿ ಒಂದು ಕಿಟ್ಟೆಯ ಮೇಲೆ ಕುಳಿತು, ಬೆಳಗಾಗುತ್ತಿರುವಾಗ ಅಮೃತರಾಯನ ಕಟ್ಟಿಗೆಯ ಕೋಣೆಯನ್ನು ಹೊಕ್ಕು ಸೆರಗಿನಿಂದ ತಲೆಯನ್ನೂ ಮುಖವನ್ನೂ ಮುಚ್ಚಿಕೊಂಡು ಕುಳಿತಳು.

*

ರಾತ್ರಿ ಕಳೆದು ಬೆಳಗಾಯಿತು. ಹರಿಪಾಠ ಭಜನೆ ಮುಂತಾದ್ವರ ಘೋಷವೇನೂ ಕೇಳಿಸುವುದಿಲ್ಲ. ಮನೆಯಲ್ಲೆಲ್ಲ ಮಿಟಿಮಿಟಿ ಸ್ವರ್ಗವೇ. ತಾಸು ಎಂಟಾಯಿತು. ಅಂಬಾಬಾಯಿಯು ವಿಸ್ಮಯಪಟ್ಟು ಇದೇನು ನೋಡೋಣವೆಂದು ಮೆಲ್ಲಗೆ ಇಂದಿರಾಬಾಯಿಯ ಕೋಣೆಯ ಬಳಿಗೆ ಹೋಗಲು, ಬಾಗಿಲಿಗೆ ಹೊರಗಿನಿಂದ ಸಂಕೋಲೆಯನ್ನು ಸಿಕ್ಕಿಸಿದ್ದನ್ನು ಕಂಡು, "ಇದ್ಯಾರ ಕುಚೇಷ್ಟೆ" ಎಂದೊಡನೆ ಸಂಕೋಲೆಯನ್ನು ಕೊಂಡಿಯಿಂದ ತಪ್ಪಿಸಿದ್ದೆ ಸರಿ, "ಪುಂಡಲೀಕ ವರದ ಪಾಂಡುರಂಗ ಹರಿ ವಿಠಲ್" ಎಂದು ಆ ಸಂತ ಶಿಖಾಮಣಿಯು ಹೊರಗೆ ಹೊರಟು ಬಂದು, "ಏನವ್ವಾ ನಮಗೇನೂ ಗತಿಗೋತ್ರವಿಲ್ಲದೆ ನಿಮ್ಮಲ್ಲಿಗೆ ಬಂದು ಸೇರಿದವರಲ್ಲ ಕುಡೆಯಾ? ಗಂಡನೂ ನೀನೂ ಕೂಡಿ ಆಲೋಚಿಸಿ, ಮಗಳಿಂದ ನನಗೆ ಇಡೀ ರಾತ್ರಿ ಈ ಕೋಣೆಯಲ್ಲಿ ಬಂಧನದಲ್ಲಿರಿಸಿದಿರಾ?" ಎಂದನು.

"ಅಯ್ಯೋ ಸ್ವಾಮಿ, ಇದೇನು? ಹೀಗಪ್ಪಣೆ ಕೊಡುತ್ತೀರಿ? ಇಂದಿರೆ ಎಲ್ಲಿ? ಕೋಣೆಯಲ್ಲಿಲ್ಲವೆ?"

"ಏನವ್ವಾ? ಉರಿಯುವ ಬೆಂಕಿಗೆ ಎಣ್ಣೆ ಹೊಯ್ಯುತ್ತೀಯಾ?" ಎಂದು ಕೂಗಾಡಿದನು.

ಭೀಮರಾಯರು ಇಂದಿರಾಬಾಯಿಯನ್ನು ಹುಡುಕುವುದಕ್ಕೋಸ್ಕರ ನಾಲ್ಕೈದು ಜನರನ್ನು ನೇಮಿಸಿ ಕಳುಹಿಸಿದ, ಒಡನೆ ಸಂತ ಮಂಡಳಿಯ ಪ್ರಯಾಣದ ಏರ್ಪಾಡನ್ನೂ ಮಾಡಿದನು.

ಇತ್ತಲಾಗಿ ಅಮೃತರಾಯನಲ್ಲಿಯ ತೊತ್ತು ಸುಬ್ಬಿ ಎಂಬವಳು ಕಟ್ಟಿಗೆ ಕೋಣೆಯಲ್ಲಿ ಇಂದಿರೆಯನ್ನು ಕಂಡು ಅಮೃತರಾಯನ ಪತ್ನಿ ಜಲಜಾಕ್ಷಿಗೆ ತಿಳಿಸಲು ಅವಳು, "ಅಯ್ಯೋ ಹೆಣ್ಣು ಜನ್ಮವೆ?" ಎಂದು ಇಂದಿರಾಬಾಯಿಯಿಂದ ಅವಳ ದುಃಖದ ವರ್ತಮಾನಗಳೆಲ್ಲವನ್ನೂ ತಿಳಿದು, ಅವಳನ್ನು ಮನೆಯೊಳಗೆ ಕರೆತಂದು ಕುಳ್ಳಿರಿಸಿ, ಸಂತೈಸಿದಳು. ಅಮೃತರಾಯನೊಡನೆ ಜಲಜಾಕ್ಷಿಯು ಈ ಸುದ್ದಿಯನ್ನು ತಿಳಿಸಲು ಅವನು, "ಇವಳು ನಮ್ಮಲ್ಲಿರುವ ಸಂಗತಿಯನ್ನು ನಾವಾಗಲೀ ಸೇವಕರಾಗಲೀ ಬೇರೆಂದು ಪ್ರಕಟಪಡಿಸುವುದು ಅವಶ್ಯವಿಲ್ಲ!" ಎಂದನು.

*

ಇಂದಿರಾಬಾಯಿಯು ಜಲಜಾಕ್ಷಿಯನ್ನು ಸಾಕ್ಷಾ

# ನೋಡಿರಿ...
# ಅತ್ಯಧಿಕ ಬಿಳುಪಿಗೆ ರಾನಿಪಾಲ್®

ಬಟ್ಟೆಗಳನ್ನು ಕೊನೆಯ ಸಲ ಅದ್ದುವ ಮೊದಲು ನೀರಿನಲ್ಲಿ ಸ್ವಲ್ಪ ರಾನಿಪಾಲ್ ಹಾಕಿರಿ ಮತ್ತು ನಂತರ ನೋಡಿರಿ... ಬಟ್ಟೆಗಳಿಗೆ ಉಜ್ವಲ ಬಿಳುಪು! ರಾನಿಪಾಲ್‌ನ ಬಿಳುಪು! ಬಿಳಿಯ ಬಟ್ಟೆಗಳು ಯಾವುದೇ ಇರಲಿ—ಕಾಟನ್, ಸಿಂಥಟಿಕ್ ಮತ್ತು ಬ್ಲೆಂಡೆಡ್—ರಾನಿಪಾಲ್‌ನಿಂದ ಉಜ್ವಲವಾಗಿ ಎದ್ದು ಕಾಣುತ್ತವೆ.

ನಿಯಮಿತವಾಗಿ ರಾನಿಪಾಲ್ ಹಾಕಿರಿ...ಮತ್ತು ಬಿಳುಪನ್ನು ನೋಡಿರಿ, ತೋರಿಸಿರಿ!







ಕಾಟನ್ ಬಟ್ಟೆಗಳಿಗೆ ರಾನಿಪಾಲ್®
ಸಿಂಥಟಿಕ್ ಮತ್ತು ಬ್ಲೆಂಡೆಡ್
ಬಟ್ಟೆಗಳಿಗೆ ರಾನಿಪಾಲ್®-ಎಸ್.

Shilpi SG-2A/78 Kan

ತ್ ತಾಯಿಯಂತೆಯೇ ಭಾರಿ ಪ್ರೀತಿಯಿಂದ ಇರುವಾಗ, ಹೊರಗೆಲಸದ ಹೆಂಗಸರು ವಸ್ತ್ರಗಳನ್ನೊಗೆಯುವುದಕ್ಕೆ ಬಂದಾಗ ಹೊರಬಂದ ಮಾತಿನ ಮೇಲೆ ಇಂದಿರಾಬಾಯಿಯು ಅಮೃತರಾಯನಲ್ಲಿರಬೇಕೆಂದು ಊಹಿಸಿ ಅಂಬಾಬಾಯಿಯು, ಭೀಮರಾಯನನ್ನು ಈಗಲೇ ಹೋಗಿ ಹುಡುಗಿಯನ್ನು ಕರೆದು ತರಬೇಕಾಗಿ ಛಲ ಹಿಡಿದಳು. ಭೀಮರಾಯನು ಅಂತೆಯೇ ಅಮೃತರಾಯನಲ್ಲಿಗೆ ಹೋದಾಗ ಅಮೃತರಾಯನು, ಆದರದಿಂದ ಬರಮಾಡಿಕೊಂಡನು. ಭೀಮರಾಯನು,

"ನಮ್ಮ ಇಂದಿರೆಯು ನಿಮ್ಮ ಕಟ್ಟೆಗೆಯು ಕೊಟ್ಟಿತಯಲ್ಲಿ ಕಾಣಿಸಿಕ್ಕಿದಳಂತೆ ಹೌದ?" ಎನ್ನಲು. ಅಮೃತರಾಯನು "ಹೌದು" ಎಂದುತ್ತರಿಸಿದನು.

"ಆಕೆ ಈಗೆಲ್ಲಿ?"

"ಇಲ್ಲೇ ಮನೆಯಲ್ಲಿದ್ದಾಳೆ."

"ನನ್ನೊಡನೆ ಕಳುಹಿಸುತ್ತೀರಷ್ಟೆ?"

"ಕಳುಹಿಸಲಾರೆನು. ನಿಮ್ಮ ಮತ್ತು ನಿಮ್ಮ ಹೆಂಡತಿಯ ಸಮ್ಮತಿಯಿಂದ ಆ ಸಂತರು ಆ ಬಡ ಹುಡುಗಿಯ ಪತಿವ್ರತಾಧರ್ಮಕ್ಕೆ ಭಂಗ ಬರುವ ಹಾಗೆ ಅವಳ ಇಷ್ಟಕ್ಕೆ ವಿರೋಧವಾಗಿ—ಅಯ್ಯೋ! ಆ ದುಷ್ಕರ್ಮವನ್ನು ಹೇಳುವುದಕ್ಕೆ ನನಗೆ ಬಾಯಿ ಬರುವುದಿಲ್ಲ. ಈ ಮೊಕದ್ದಮೆಯಲ್ಲಿ ನಿಮಗೂ ನಿಮ್ಮ ಹೆಂಡತಿಗೂ ಎಂತಹ ಗತಿ ಬರುವುದೆಂದು ಬೇಗನೆ ಗೊತ್ತಾಗುವುದು. ಒಂದೇ ಕ್ಷಣಕ್ಕಾದರೂ ಹುಡುಗಿಯನ್ನು ಬಿಟ್ಟುಕೊಡಲಾರೆನು."

"ಸ್ವಾಮಿ. ಸಿಟ್ಟಾಗಬೇಡಿರಿ. ನಾನು ಹೋಗುತ್ತೇನೆ," ಎಂದೆದ್ದು ಭೀಮರಾಯನು ಹೊರಟು ಹೋದನು. ಈ ಸುದ್ದಿಯನ್ನು ಕೇಳಿ ಅಂಬಾಬಾಯಿಯು ಗಂಡನನ್ನು ಜರೆದು ಮಾತಾಡಿದಳು.

ಭೀಮರಾಯನು ಹೋದ ಬಳಿಕ ಅಮೃತರಾಯ ಮತ್ತು ಜಲಜಾಕ್ಷಿ ಇಬ್ಬರೂ ಇಂದಿರೆಯೊಡನೆ ಅವಳ ಅಭಿಪ್ರಾಯವನ್ನು ತಿಳಿಯಲು ಹೋದರು.

"ಏನೇ, ನಿನ್ನ ತಂದೆಯು ಈಗಲೇ ಇಲ್ಲಿಗೆ ಬಂದು ಹೋದನು. ತಾಯಿ ನಾಳೆ ಬರುವಳೇನೋ!"

"ನನಗೆ ತಾಯಿ ತಂದೆಗಳೆಂದರೆ ನೀವಿಬ್ಬರೇ ಎಂದು ನಂಬಿದ್ದೇನೆ. ಅವರ ಉದರದಲ್ಲಿ ನಾನು ಜನಿಸಿದೆ. ಆ ಬಗೆಯಲ್ಲಿ ಮಾತ್ರ ಅವರು ನನ ತಂದೆತಾಯಿಗಳು."

ರಾತ್ರಿ ಕಳೆದು ಬೆಳಗಾಯಿತು. ಮೈರೆಯನ್ನು ಸಂಗಡ ಕರೆದುಕೊಂಡು ಅಂಬಾಬಾಯಿಯು ಜಲಜಾಕ್ಷಿ ಇದ್ದಲ್ಲಿಗೆ ಬರಲು, ಅವಳು ಆದರಾತಿಶಯದೊಡನೆ ಸತ್ಕರಿಸಿದಳು. ಅಂಬಾಬಾಯಿ,

"ನಾನು ಉಪಚಾರಗಳನ್ನೆಲ್ಲಾ ಅನುಭವಿಸುವುದಕ್ಕೆ ಬಂದವಳಲ್ಲ, ಇಂದಿರೆ ಎಲ್ಲಿ?" ಎಂದು ಕೇಳಿದಳು. ಇಂದಿರೆಯನ್ನು, ಕರೆದು "ನೀನೀಗ ಬರುತ್ತೀಯೋ ಇಲ್ಲವೋ ?" ಎಂದಳು.

'ಬರುವುದಿಲ್ಲ!'

"ನಿಶ್ಚಯವೆ?

"ನಿಶ್ಚಯವೇ."

"ಮತ್ತೆ ಪಶ್ಚಾತ್ತಾಪಪಡುವಿ."

"ಎಂದೆಂದಿಗೂ ಪಶ್ಚಾತ್ತಾಪಪಡಲಾರೆನು."

ಅಂಬಾಬಾಯಿ ಭೀಮರಾಯರು ಇನ್ನು ಹುಡುಗಿ ಹೋದ ಲೆಕ್ಕದಲ್ಲೇ ಎಂದು ಸುಮ್ಮನಾದರು.

ಅಮೃತರಾಯನು ಇಂದಿರೆಯನ್ನು ಕರೆದು ಅವಳನ್ನು ಸರಸ್ವತೀ ಮಂದಿರಕ್ಕೆ ಕಳುಹಿಸಿ ಕೊಡುವ ಆಲೋಚನೆಯನ್ನೂ, ಹಾಗೆ ಕಳುಹಿಸುವುದರಿಂದ ಏನು ಪ್ರಯೋಜನವೇ ಬುದನ್ನೂ ಅವಳಿಗೆ ವಿವರಿಸಿ ಹೇಳಲು, ಅವಳು ಮನಸ್ಸಿನಲ್ಲಿ ಬಹಳ ಸಂತಸಪಟ್ಟು "ಹಾಗೇ ಆಗಲಿ," ಎಂದು ಹೇಳಿದಳು.

ಕೆಲವು ದಿವಸಗಳು ಕಳೆದವು. ಅಂಬಾಬಾಯಿಯೂ ಭೀಮರಾಯನೂ ಕ್ರಮೇಣ ಇಂದಿರೆ ದೂರವಾದ ದುಃಖವನ್ನು ಮರೆಯುತ್ತಾ ಬಂದರು. ಇಂದಿರೆಯು ಸರಸ್ವತೀ ಮಂದಿರಕ್ಕೆ ವಿದ್ಯಾಭ್ಯಾಸಕ್ಕಾಗಿ ಹೋದಳು. ಅಲ್ಲಿ ಅವಳು ಹಗಲಿರುಳು ಮನಸ್ಸು ಕೊಟ್ಟು ಕಲಿಯುತ್ತಾ, ಎರಡು ವರುಷಗಳೊಳಗೆ ಮೆಟ್ರಿಕ್ಯುಲೇಶನ್ ಎಂಬ ಪರೀಕ್ಷೆಯಲ್ಲಿ ಮೊದಲನೆಯವಳಾಗಿ ತೇರ್ಗಡೆಹೊಂದಿದಳು. ಮರುವಾರದ ಹಡಗಿನಲ್ಲಿ ಇಂದಿರೆಯು ಕಮಲಪುರಕ್ಕೆ ಬಂದಳು. ಅವಳನ್ನು ಅಮೃತರಾಯನು ಪತ್ನಿ ಸಹಿತವಾಗಿಯೇ ರೇವಿಗೆ ಹೋಗಿ ತನ್ನ ಸಾರೋಟಿನಲ್ಲಿ ಕುಳ್ಳಿರಿಸಿಕೊಂಡು ಮನೆಗೆ ಬಂದನು.

*

ಇಂದಿರಾಬಾಯಿಗೆ ಈಗ ಹದಿನೆಂಟು ವರುಷಗಳು ತುಂಬಿದ್ದುವು; ಬುದ್ಧಿಯೂ, ಯೌವನವೂ, ದೇಹಚೈತನ್ಯವೂ ವೃದ್ಧಿಯಾಗುತ್ತಾ ಬಂತು. 'ಏಕವಾದಿವಾಹ ಮತಬುದ್ಧನಂ,' 'ಬಾಲವಿ

ಪಾಶುಪತ ಖಂಡನಂ' 'ಗೃಹನಿರ್ವಾಹಕ ಶಾಸ್ತ್ರ,' 'ಪಾಕಶಾಸ್ತ್ರ'. "ಪ್ರಾಚೀನ ಅರ್ವಾಚೀನ ವಿವಾಹ ನಿರ್ಣಯ". "ಸ್ತ್ರೀಧರ್ಮರತ್ನಾಕರ" ಎಂಬೀ ಮೊದಲಾದ ಅಮೌಲ್ಯವಾದ ಅನೇಕ ಪುಸ್ತಕಗಳನ್ನು ಇಂದಿರೆಯು ಓದುತ್ತಾ ಸಮಯ ಕಳೆಯುತ್ತಿದ್ದಳು. ಇದರಿಂದ ಅಮೃತರಾಯನು ಅವಳ ಮನೋಭಿಪ್ರಾಯವನ್ನು ತಕ್ಕ ಮಟ್ಟಿಗೆ ತಿಳಿದನು. ಇಂದಿರೆಯ ಕೊರತೆ ಇಲ್ಲದ ನಡತೆಯಿಂದಾಗಿ ಅವಳ ಕೀರ್ತಿಯು ಊರಲ್ಲೆಲ್ಲಾ ಪ್ರಕಟವಾಗಿ ಅನೇಕ ಹೆಂಗಸರೂ, ಅವಳ ಹಿತಚಿಂತಕಳೂ ಸ್ನೇಹಿತಳೂ ಆಗಿದ್ದ ಶಾರದಾಬಾಯಿಯೂ ಅವಳೊಡನೆ ಮಾತನಾಡಲು ಬರುತ್ತಿದ್ದರು.

ವಿಲಾಯತಿಯಲ್ಲಿ ಭಾಸ್ಕರರಾಯನು ಐ. ಸಿ. ಎಸ್. ಪರೀಕ್ಷೆಯಲ್ಲಿ ತೇರ್ಗಡೆಪಟ್ಟಿರುವುದಾಗಿಯೂ, ಅವನಿಗೆ ಅಸಿಸ್ಟೆಂಟ್ ಕಲೆಕ್ಟರ್ ಉದ್ಯೋಗದಲ್ಲಿ ನೇಮಕವಾದದ್ದಾಗಿಯೂ ಅವನೇ ಬಿಟ್ಟ ತಂತಿಯು ಅಮೃತರಾಯನಿಗೆ ಸಿಕ್ಕಿತು. ಇದನ್ನು ನೋಡಿ ಇಂದಿರೆಗಾದ ಸಂತಸ ಅಷ್ಟಿಷ್ಟಲ್ಲ. ಭಾಸ್ಕರನು ಚಿತ್ರದ ಮೂಲಕ ಅವಳಿಗೆ ಮೊದಲೇ ಪರಿಚಿತನಾಗಿದ್ದನು. ಭಾಸ್ಕರನೂ ಇಂದಿರೆಯೂ ಸರಿಯಾದ ಜೋಡಿ ಆಗುತ್ತದೆಂದು ಅಮೃತರಾಯನೂ ಜಲಜಾಕ್ಷಿಯೂ ಭಾವಿಸಿ, ಭಾಸ್ಕರನ ತಾಯಿ ಸುಶೀಲೆಯೊಡನೆ ಕೇಳಲು ಅವಳೂ ಇಂದಿರೆಯನ್ನು ನೋಡಿ ಮೆಚ್ಚಿದಳು. ಅಮೃತರಾಯನು ಭೀಮರಾಯನನ್ನೂ ಅಂಬಾಬಾಯಿಯನ್ನೂ ಕರೆಸಿದನು.

ಅಂಬಾಬಾಯಿಯು ಇಂದಿರೆಯನ್ನು ಗದರಿಸಿ ಕೇಳಲು, ಇಂದಿರೆಯು, "ಅಪ್ಪಾ ಸಿಟ್ಟಿನ ವಶವಾಗದೆ ನನ್ನ ಮಾತನ್ನು ಲಾಲಿಸಿ ಕೇಳಿದ ಬಳಿಕ, ನಿನ್ನ ಹೃದಯದ ಕರಿ ನಡತೆಯನ್ನು ತೋರಿಸಬೇಕೆಂದು ಕಂಡರೆ ಹಾಗೆ ಮಾಡು."

"ಏನು? ಇಂಗ್ರೇಜಿಯಾಯಿತು. ಪರೀಕ್ಷೆಯಾಯಿತು. ಇನ್ನೇನಟ್ಟಹಾಸ ಉಳಿದಿವೆ? ಕಲೆಕ್ಟರನ ಹೆಂಡತಿಯಾಗಬೇಕೆ?"

"ಅಪ್ಪಾ, ಸಂಧರ್ಮೋಪದೇಶಕ್ಕಿಂತ ಇದಲ್ಲವೇ ಒಳ್ಳೇದು? ತುಸು ಆಲೋಚಿಸಿ ನೋಡು, ಈ ವಿಷಯವನ್ನು ಕುರಿತು ಮಾತನಾಡುವುದಕ್ಕಾಗಿಯೇ ನಿನ್ನನ್ನು ಕರೆಯಿಸಿದ್ದು."

"ಯಾವ ಕಲೆಕ್ಟರನ ಹೆಂಡತಿಯಾಗುತ್ತೀ?

"ಮೃತವಾದ ಸುಂದರರಾಯನ ಮಗ."

"ಸಾಕು ಸಾಕು ಗೊತ್ತಿದೆ."

"ಗೊತ್ತಿಲ್ಲದೆ ಎಲ್ಲಿ ಹೋಗುತ್ತೆ? ಜನ್ಮಾಂತರದಲ್ಲಿಯೂ ಮರೆಯುವಂಥದ್ದಲ್ಲ. ಅದೇ ಸುಂದರರಾಯನ ಮಗ ಭಾಸ್ಕರರಾಯರು, ಇಂಗ್ಲೆಂಡಿನಿಂದ ನಾಳೆ ಬರುವ ಹಡಗದಲ್ಲಿ ಬಂದು ಮುಟ್ಟುವರು–"

"ಬಲ್ಲೆನು. ಮನಸ್ಸಿನಲ್ಲಿದ್ದುದನ್ನು ಮಾಡು. ನಾನಂತೂ ನಿನ್ನ ತಾಯಿಯಲ್ಲವೆಂದು ಮೊದಲೇ ನೀನು ಹೇಳಿದ್ದೆ."

"ನಾನು ಹೇಳಲಿಕ್ಕಿರುವ ಮಾತುಗಳನ್ನು ಆಲೈಸಿ ಕೇಳಿ ವಿಚಾರಿಸದೆ ಇನ್ನೂ ದುಷ್ಟತನವನ್ನೇ ತೋರಿಸುವಿಯಾದರೆ ನಿನ್ನನ್ನು ತಾಯಿಯೆಂದು ಹೇಗೆ ಕರೆಯಲಿ?"

"ಮನಸ್ಸಿನಲ್ಲಿದ್ದುದನ್ನು ಮಾಡು," ಎಂದು ಸಿಟ್ಟಿನಿಂದೆದ್ದು ದುಮ್ಮು ಜಾಡಿಸಿಕೊಂಡು ಹೊರಗೆ ಹೋದಳು.

ಹಡಗವು ಕಮಲಪುರ ಬಂದರಕ್ಕೆ ಸಮೀಪಿಸಿ ಬರುವುದನ್ನು ಕಂಡು, ಕಲೆಕ್ಟರ್ ದೊರೆಯು ಕರಣೀಕನ ಸಮೇತ, ಅಮೃತರಾಯನು ಸಂಜೀವರಾಯನ ಸಮೇತ ರೇವಿಗೆ ಹೋದರು. ಭಾಸ್ಕರರಾಯನು ಹಡಗಿನಿಂದಿಳಿಯುತ್ತಲೇ ಕಲೆಕ್ಟರ್ ದೊರೆಯು ತಕ್ಕ ಮರ್ಯಾದೆ ಕೊಟ್ಟು ಮಾತನಾಡಿ ಕೈ ಹಿಡಿದು ಕರೆದುಕೊಂಡು ಬರಲು, ಅಮೃತರಾಯ, ಸಂಜೀವರಾಯ ಸಹ ಅವನೊಡನೆ ಸಂತೋಷದಿಂದ ಮಾತನಾಡಿ ಸಾರೋಟಿನಲ್ಲಿ ಕುಳ್ಳಿರಿಸಿ, ಮನೆಗೆ ಕರೆದುತಂದರು. ಮನೆಗೆ ಮುಟ್ಟಿದಾಗ ಜಲಜಾಕ್ಷಿಯನ್ನು ಕಂಡು, ನಮಸ್ಕರಿಸಿ ಕೆಲವು ಮಾತುಗಳನ್ನಾಡಿ, ಒಂದೆರಡು ನಿಮಿಷಗಳವರೆಗೆ ಕುಳಿತುಕೊಂಡು ಕೋಚ ಫಲಾಹಾರಮಾಡಿ ತಾಯಿಯನ್ನು ಕಂಡು ಬರುತ್ತೇನೆಂದು ಹೇಳಿ, ಸಂಜೀವರಾಯನ ಸಮೇತ ಹೊರಟು ಹೋಗಿ ತಾಯಿಯನ್ನು ಸಾಷ್ಟಾಂಗವಾಗಿ ನಮಸ್ಕರಿಸಲು ಅವಳು ಅಮಿತಾನಂದಗೊಂಡಳು.

ಬೆಳಗಾಗುತ್ತಲೆ ಭಾಸ್ಕರರಾಯನು ಪುತೆ ಧೋತರವನ್ನುಟ್ಟು ಮೊಣಕಾಲಿನವರೆಗೆ ಕಪ್ಪು ಬನಾತಿನ ನಿಲುವಂಗಿ, ಅದರ ಮೇಲೆ ಬನಾರಸಿನ ಶಾಲು ತೊಟ್ಟು ಗುಲಾಬಿ ರಂಗಿನ ಪಾಗೋಟೆಯನ್ನು ತಲೆಗಿಟ್ಟುಕೊಂಡು ಹೊರಟು, 'ದೊಂಗ್

ಸುವಾಸಿತ ಹಾಗೂ ಸ್ವಾದಿಷ್ಟ
ಮುಖಶುದ್ಧಿಗಾಗಿ




ಚಮನ್ ಇದು ಅತ್ಯಂತ ಸ್ವಾದಿಷ್ಟ ಹಾಗೂ ರುಚಿಕರವಾದ ಚೂರ್ಣವಾಗಿದೆ. ಇದನ್ನು ಸೇವಿಸುವದರಿಂದ ಬಾಯಿಯು ಸುವಾಸಿತವಾಗುತ್ತದೆ.

ಚಮನದಲ್ಲಿ ಏನೆಲ್ಲ ಇದೆ?



ಈ ಚಮನದಲ್ಲಿ ಜೇಷ್ಠಮಧು, ಕೇಶರ, ಏಲಕ್ಕಿ, ಲವಂಗ, ಪತ್ರಿ, ಜಾಜಿಕಾಯಿ, ಬಡೆಸೋಪ್, ಮುಂಥಾಲ್ ಗಳಂತೆ ಅನೇಕ ಬಗೆಯ ಸುಗಂಧಿತ ಹಾಗೂ ರುಚಿಕರ ವಸ್ತುಗಳು ಒಳಗೊಂಡಿರುವವು. ಅದಕ್ಕಾಗಿಯೇ ಇದು ಚಿಕ್ಕಮಕ್ಕಳಿಂದ ವೃದ್ಧರವರೆಗೆ ಎಲ್ಲರಿಗೂ ಅಚ್ಚುಮೆಚ್ಚು.

ಸ್ಟಾರ್ ಕಂಪನಿ, ಬೆಳಗಾಂವ್

M. K. Publicity

ಕಾರ್ಟ್' ಎಂಬ ವಾಹನದಲ್ಲಿ ಸವಾರಿಯಿಂದ ಕಲೆಕ್ಟರ್ ದೊರೆ ಜಡ್ಜ ದೊರೆ ಮುಂತಾದ ಮುಖ್ಯ ಮುಖ್ಯರಾದ ಉದ್ಯೋಗಸ್ಥರನ್ನು ಕಂಡು ಮಾತನಾಡಿ ಬಂದನು.

ಆ ಬಳಿಕ ಮಧ್ಯಾಹ್ನ ಫಲಾಹಾರದ ಬಳಿಕ ಅಮೃತರಾಯನು ಭಾಸ್ಕರನಿಗೆ ಇಂದಿರೆಯ ಪರಿಚಯ ಮಾಡಿಕೊಟ್ಟು, ಅವಳ ಜೀವನ ಚರಿತ್ರೆಯನ್ನು ಸವಿಸ್ತಾರವಾಗಿ ಹೇಳಿ, "ಭಾಸ್ಕರಾ, ಇವಳನ್ನು ನಿನಗೆ ವಿವಾಹ ಮಾಡಿಕೊಡುವುದೆಂದು ನಾವು ನಿಶ್ಚಯಿಸಿದ್ದೇವೆ. ನಿನ್ನಭಿಮತವೇನು ?" ಎಂದು ಕೇಳಲು ಅವನು, "ನಾನು ಈ ವರೆಗೆ ತಮ್ಮ ಮಾತನ್ನು ಶಿರಸಾವಹಿಸಿಕೊಂಡು ನಡೆದುಕೊಂಡವನೇ ಆಗಿದ್ದ ಮೇಲೆ ನನ್ನ ಮನೋಗತವೇನೆಂದು ಕೇಳಲವಶ್ಯವಿಲ್ಲ," ಎಂದನು.

*

ವಿವಾಹ ಮಹೋತ್ಸವ ಬಹಳ ವಿಜೃಂಭಣೆಯಿಂದ ಜರುಗಿತು. ವಧೂವರರ ಗುಣ ನಡತೆಯ ಬಗೆಗೆ ಕಮಲಪುರದಲ್ಲಿ ಎಲ್ಲರೂ ತಿಳಿದುದರಿಂದಲೂ, ಆ ಊರಲ್ಲಿ ಅದು ಪ್ರಥಮ ವಿಧವಾ ವಿವಾಹವಾದುದರಿಂದಲೂ ಭೀಮರಾಯನ ಮನೆಯವರು ಮತ್ತು ಕಟ್ಟಳೆಯ ಕೆಲವು ಜನರನ್ನು ಬಿಟ್ಟು ಎಲ್ಲರೂ ಮದುವೆಯಲ್ಲಿ ಭಾಗವಹಿಸಿದ್ದರು.

ವಿವಾಹ ಸಂಪೂರ್ಣವಾಯಿತು. ಭಾಸ್ಕರರಾಯ ಇಂದಿರಾಬಾಯಿ ಇವರು ಅನ್ಯೋನ್ಯ ಪ್ರೀತಿಯಿಂದಲೂ ವಿಶ್ವಾಸದಿಂದಲೂ ನಡೆದುಕೊಂಡಿರುವುದನ್ನು ಕಂಡು ಅಮೃತರಾಯ, ಜಲಜಾಕ್ಷಿ, ಸುಶೀಲೆ ಇವರ ಮನಸ್ಸಿನಲ್ಲಿ ಆನಂದವೂ ತೃಪ್ತಿಯೂ ಉಂಟಾಯಿತು. ಭಾಸ್ಕರರಾಯನು ತನ್ನ ಉದ್ಯೋಗದಲ್ಲಿ ಪ್ರವೇಶಿಸಿ ಉದ್ಯೋಗಪ್ರಯುಕ್ತವಾದ ಸಕಲ ಕಾರ್ಯಗಳನ್ನು ನಿಷ್ಪಕ್ಷಪಾತ, ನೀತಿ, ದಯೆ, ಉದಾಹರಣೆಗಳಿಂದ ನಡೆಯಿಸಲು ಸರ್ವರೂ, "ಸೈ! ಸೈ! ಇದೀಗ ಜನ್ಮದ ಸಾರ್ಥಕ" ಎಂದು ಹೊಗಳಲಾರಂಭಿಸಿದರು.

ಸುಶಿಕ್ಷಿತರಾದ ಜಾತಿಬಾಂಧವರು ಶ್ರೀ ಗುರು ಮಠವನ್ನು ಬಿಡಿಸಿಕೊಂಡು ಸಂಸ್ಕೃತಭಾಷೆಯಲ್ಲಿ ತೇರ್ಗಡೆಪಟ್ಟು, ಒಬ್ಬ ಬಿ.ಎ.ಗೆ ಧರ್ಮವಿಚಾರಕ ಸ್ಥಾನವನ್ನು ಕೊಡಿಸಿದರು. ಬಳಿಕ ಅಂಬಾಬಾಯಿಯು, "ನಾವೂ ಸಹ ಅವರ ಸಂಗಡ ಸೇರುವುದೇ ಉತ್ತಮ. ನಾಳೆಯೇ ಹೋಗಿ ನಾವಿಬ್ಬರೂ ಅಮೃತರಾಯ, ಜಲಜಾಕ್ಷಿ, ಸುಶೀಲೆ, ಭಾಸ್ಕರರಾಯ, ಇಂದಿರೆ ಇವರ ಕ್ಷಮೆ ಬೇಡಿ ಅವರೆಲ್ಲರನ್ನೂ ನಮ್ಮಲ್ಲಿಗೆ ಕರೆತಂದು ಊಟ ಉಪಚಾರಗಳನ್ನು ಮಾಡಿ ಮುಂದೆ ಸ್ನೇಹದಿಂದಲೂ ಪ್ರೀತಿಯಿಂದಲೂ ಇರೋಣ," ಎಂದಳು. ಮಾರನೇ ದಿನ ಇಬ್ಬರೂ ವಿನಯಾತಿಶಯದೊಡನೆ ದೋಷಾನುಸಂಧಾನವನ್ನು ಮಾಡಿ ಕ್ಷಮೆ ಬೇಡಿದರು. ✡



**ಕೆಲವೇ ದಿನಗಳ ಹಿಂದೆ ವಿಮಲಿಯ ವಿವಾಹ ನಿಶ್ಚಯವಾಗಿತ್ತು. ಆಕೆಯನ್ನು ಮದುವೆಯಾಗುವವ ಲಾ ಗ್ರ್ಯಾಜುಯೇಟ್. ಸ್ವಲ್ಪ ದಿನಗಳಲ್ಲೆ ಪ್ರ್ಯಾಕ್ಟೀಸನ್ನು ಪ್ರಾರಂಭಿಸುತ್ತಾನೆಂಬ ಸುದ್ದಿಯಿತ್ತು. ವಿಮಲಿಯ ಗೆಳತಿಯಾದ ಕಮಲಿ ಒಮ್ಮೆ ಆಕೆಯನ್ನು ಭೇಟಿಯಾದಾಗ ಲೋಕಾಭಿರಾಮವಾಗಿ ಮಾತನಾಡುತ್ತಾ, "ಏನೆ, ನಿನ್ನ 'ವುಡ್‌ಬಿ' ಪ್ರ್ಯಾಕ್ಟೀಸನ್ನು ಶುರುಮಾಡಿದ ಕೂಡಲೆ ಮದುವೆಯಾಗುತ್ತೀಯೇನು ?" ಎಂದು ಕೇಳಿದಳು. ಅದಕ್ಕುತ್ತರವಾಗಿ ವಿಮಲಿ, "ಮೊದಲು ಒಂದು ವರ್ಷವಾದರೂ ಪ್ರ್ಯಾಕ್ಟೀಸು ಮಾಡಲಿ ಬಿಡೆ, ಆಮೇಲೆ ನೋಡಿದರಾಯಿತು," ಎಂದು ಹೇಳಿದಳು.**

Printed & Published by H. R. Basavaraj for the Proprietors, The Jaya Karnataka News Printers Ltd., at Samyukta Karnataka Press, Koppikar Road, Hubli-580 020. Rept : Bombay : V. Satyamurthy Phone : 522412; Calcutta : H. Majumdar 46-4233; Madras : K. A. Subramanian Phone : 842201; New Delhi : P. R. Chopra Phone : 714130.

